

ನೆಮ್ಮದಿಯ ನಾಳೆ ನಮ್ಮದು

# ಹೊಸತು




ಮೇ ೨೦೦೭

ಬೆಲೆ : ರೂ. ೧೨







# ಕುಂಚದಲ್ಲಿ ನಿಸರ್ಗದ ದೃಶ್ಯ ವೈಭವ...





ಗದಗ ಜಿಲ್ಲೆಯ ಮುಳಗುಂದದ ಕಲಾವಿದ ಬಸವರಾಜ್ ಕುಟ್ನಿ, ಬಿಎಫ್ಎ ಹಾಗೂ ಎಂಎಫ್ಎ ಕಲಾ ಶಿಕ್ಷಣ ಪೂರೈಸಿದ್ದಾರೆ. ಗದಗದ ವಿಜಯ ಕಲಾಮಂದಿರದಲ್ಲಿ 4 ವರ್ಷ ಕಲಾಶಿಕ್ಷಕರಾಗಿ ಸೇವೆ ಸಲ್ಲಿಸಿ, ಪ್ರಸ್ತುತ ಉಡುಪಿಯ ಚಿತ್ರಕಲಾಮಂದಿರದಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ವಿಶೇಷವಾಗಿ ಜಲವರ್ಣ ಮಾಧ್ಯಮದಲ್ಲಿ ಭೂದೃಶ್ಯ ಚಿತ್ರಗಳನ್ನು ಕಾವ್ಯಾತ್ಮಕ ವಾಗಿ ಚಿತ್ರಿಸುವುದರಲ್ಲಿ ಪಳಗಿದ್ದಾರೆ. ಕಳೆದ ಏಳೆಂಟು ವರ್ಷಗಳ ಇವರ ಕಲಾ ಚಟುವಟಿಕೆಗಳಲ್ಲಿ ಪ್ರಶಸ್ತಿ, ಬಹುಮಾನಗಳೂ ಸಂದಿವೆ. ಹಲವು ಕಲಾಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಚಿತ್ರ-ಬರಹ : **ಜಿ. ಎಂ. ಬೊಮ್ನಳ್ಳಿ**, ಬೊಮ್ನಳ್ಳಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ, 581402



# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಕೆದಿಲಾಯ,
ಎನ್. ಆರ್. ಬೊಮ್ನಳ್ಳಿ, ಕಮಲಂ ಅರಸು, ಬಿ. ವಿಲ್ಸನ್

ಮುಖಚಿತ್ರ : ಮೇ ದಿನಾಚರಣೆ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕ**ರ್ನಾಟಕ ರಾಜ್ಯವು ಕಾವೇರಿ ನ್ಯಾಯಮಂಡಲಿ ಎದುರು ಏನು ವಾದ ಮಂಡಿಸಲಿದೆಯೆಂಬುದು ಸಾರ್ವಜನಿಕರಿಗೆ ಇನ್ನೂ ತಿಳಿದಿಲ್ಲ. ಇದರಲ್ಲಿ ಗುಟ್ಟಾದ ವ್ಯವಹಾರ ಸರಿಯಲ್ಲ. ಕಾವೇರಿ ನೀರಿಗಾಗಿ ಹೋರಾಟ ನಡೆಸುತ್ತಿರುವವರಿಗೆ ಸರ್ಕಾರದ ನಿಲುವೇನೆಂಬುದು ಸ್ಪಷ್ಟವಾಗಿರಬೇಕಾದ್ದು ಅವಶ್ಯಕ. ರಾಜಕೀಯ ಪಕ್ಷಗಳ ಸಭೆಯಲ್ಲೂ ವಿವರಗಳನ್ನು ಹೇಳಲಾಗಿಲ್ಲ. ಇತ್ತೀಚೆಗೆ ನಿವೃತ್ತ ನ್ಯಾಯಮೂರ್ತಿ ಶ್ರೀ ಎ. ಜೆ. ಸದಾಶಿವ ಮತ್ತು ನ್ಯಾಯವಾದಿ ಪ್ರೊ|| ರವಿವರ್ಮಕುಮಾರ್ ಅವರು ನ್ಯಾಯಮಂಡಲಿಯ ತೀರ್ಪನ್ನು ವಿಶದವಾಗಿ ವಿಶ್ಲೇಷಿಸಿ ನ್ಯೂನತೆಗಳನ್ನು ಹಾಗೂ ಪರಿಹಾರವನ್ನು ಸೂಚಿಸಿದ್ದಾರೆ : ನೀರಾವರಿಯು ಮೂಲತಃ ನ್ಯಾಯಮಂಡಲಿಯ ವ್ಯಾಪ್ತಿಗೆ ಸೇರುವುದಿಲ್ಲ ಮತ್ತು ನೀರಿನ ಹಂಚಿಕೆಯನ್ನು ನಿರ್ಧರಿಸಲು ಅಲ್ಲಿ ಕಾನೂನು ತಜ್ಞರೂ ಇಲ್ಲ, ನೀರಾವರಿ ಪರಿಣತರೂ ಇಲ್ಲ. ಅದರಿಂದಾಗಿ ತಪ್ಪುಗಳು ಹೇರಳವಾಗಿವೆ, ಒಂದೊಂದು ರಾಜ್ಯಕ್ಕೆ ಒಂದೊಂದು ಸೂತ್ರವನ್ನು ಅನ್ವಯಿಸಲಾಗಿದೆ ಮತ್ತು ಎಲ್ಲವೂ ತಮಿಳುನಾಡಿನ ಪರವಾಗಿದೆ. ಸಂವಿಧಾನದ ೧೪ನೆಯ ನಿಬಂಧವು ರಾಜ್ಯಗಳ ನಡುವೆ ಸಮಾನತೆಯನ್ನು ನಿರೀಕ್ಷಿಸುತ್ತದೆ, ಆದರೆ ಇಲ್ಲಿ ಅದು ಇಲ್ಲವಾಗಿದೆ. ಕಾನೂನಿನಲ್ಲಿ ನದಿಯ ಅನುಭೋಗಕ್ಕೆ ಮೇಲಿನ ಮತ್ತು ಕೆಳಗಿನ ರಾಜ್ಯವೆಂಬ ಗಣನೆ ಬರುವುದಿಲ್ಲ; ಏಕೆಂದರೆ, ನೀರು ಬಳಸುವವರು ಜನವೇ ವಿನಾ ರಾಜ್ಯಗಳಲ್ಲ. ೧೯೪೭ರ ನಂತರ ಹಿಂದಿನ ಒಪ್ಪಂದಗಳು ಮಾನ್ಯತೆ ಉಳಿಸಿಕೊಂಡಿಲ್ಲ. ೧೯೨೪ರ ಒಪ್ಪಂದವನ್ನು ಆಗಲೇ ರದ್ದುಮಾಡಬೇಕಿತ್ತು, ಆದರೆ ಅಂದಿನ ಮೈಸೂರು ರಾಜ್ಯ ಹಾಗೆ ಮಾಡದೆ ತಪ್ಪೆಸಗಿತು. ಮಹಾರಾಜರೇ ಇಲ್ಲದಿದ್ದಾಗ ಅವರು ಮಾಡಿಕೊಂಡಿದ್ದ ಒಪ್ಪಂದಗಳು ಹೇಗೆ ಮನ್ನಣೆ ಪಡೆದಾವು ! ನ್ಯಾಯಮಂಡಲಿಯು ''ಹಾಲಿ ನೀರು ಉಪಯೋಗಿಸುತ್ತಿರುವವರು'' ಎಂಬುದನ್ನು ಆಧಾರವಾಗಿಟ್ಟುಕೊಂಡಿದೆ. ಹಾಗಿದ್ದರೆ, ಅದಕ್ಕೆ ಮಂಡಲಿ ಏಕೆ ಬೇಕಿತ್ತು ? ಸದ್ಯದ ಹಂಚಿಕೆಯು ಮುಖ್ಯ ಪ್ರಶ್ನೆಯಾಗಿರುವಾಗ ಸಂವಿಧಾನದ ೩೯ನೆಯ ನಿಬಂಧವನ್ನು ಗಮನಿಸಬೇಕು : ಅಲ್ಲಿ ರಾಷ್ಟ್ರೀಯ ಸಂಪನ್ಮೂಲವನ್ನು ಸಮಾನವಾಗಿ ಹಂಚಬೇಕೆಂದೂ, ಯಾರೊಬ್ಬರಲ್ಲೂ ಶೇಖರಣೆಯು ಕೇಂದ್ರೀಕೃತವಾಗಕೂಡದೆಂದೂ ವಿಧಿಸಲಾಗಿದೆ. ನ್ಯಾಯಮಂಡಲಿಯು ಇದನ್ನು ಉಲ್ಲಂಘಿಸಿದೆ. ಇರುವುದನ್ನು ಮುಂದುವರಿಸಲು ಮಂಡಲಿಯನ್ನು ನೇಮಿಸಿರಲಿಲ್ಲವಲ್ಲವೇ ? ಅಲ್ಲದೆ, ಮಂಡಲಿಯು ಅನುಸರಿಸಿರುವ ಮಾನದಂಡವು ಭಾರತ ಒಕ್ಕೂಟದ ರಚನೆಗೆ ಧಕ್ಕೆಯುಂಟು ಮಾಡುವಂತಿದೆ. ೧೯೨೪ರ ತಾರತಮ್ಯವನ್ನು ಹಾಗೇ ಉಳಿಸಿಕೊಂಡಿರುವುದು ಯೋಗ್ಯವಲ್ಲ. ಆಗ ಮದ್ರಾಸ್ ಪ್ರಾಂತ್ಯವು ನೇರವಾಗಿ ಬ್ರಿಟಿಷರ ಅಧೀನದಲ್ಲಿತ್ತು ಮತ್ತು ಮೈಸೂರು, ಮಹಾರಾಜರ ಸಂಸ್ಥಾನವಾಗಿತ್ತು. ಸಹಜವಾಗಿಯೇ ವಸಾಹತು ಸರ್ಕಾರವು ಮದ್ರಾಸಿಗೆ ಪ್ರಾಶಸ್ತ್ಯ ನೀಡಿತ್ತು. ಆದರೆ ಈಗಿನ ಒಕ್ಕೂಟದಲ್ಲಿ ಹಾಗಾಗುವಂತಿಲ್ಲ. ನಾಗರಿಕರಿಗೆ ನೀರು ಮೂಲಭೂತವಾದ ಹಕ್ಕು. ಕುಡಿಯುವ ನೀರಿನ ಅವಶ್ಯಕತೆಯು ಕರ್ನಾಟಕ ಮತ್ತು ತಮಿಳುನಾಡುಗಳಿಗೆ ಸಮಾನವಾಗಿರುವಾಗ ಬೆಂಗಳೂರಿಗೆ ನೀರು ಕೊಡದಿರುವುದು ನ್ಯಾಯಮಂಡಲಿಯು ಎಸಗಿರುವ ಘೋರ ಅನ್ಯಾಯ. ನಿಜಕ್ಕೂ ಬೆಂಗಳೂರಿಗೆ ಮೂವತ್ತು, ಕಾವೇರಿಯನ್ನಾಧರಿಸಿದ ಹಳ್ಳಿಗಳಿಗೆ ಏಳು ಮತ್ತು ಇತರ ಪಟ್ಟಣಗಳಿಗೆ ಹತ್ತು ಟಿ.ಎಂ.ಸಿ. ನೀರು ಬೇಕು; ಅಂದರೆ ವರ್ಷಕ್ಕೆ ೪೭ ಟಿ.ಎಂ.ಸಿ. ಬೇಕು; ಕೊಟ್ಟಿರುವುದು ಬೆಂಗಳೂರಿಗೆ ಮಾತ್ರ, ಅದೂ ೧.೫ ಟಿ.ಎಂ.ಸಿ. ! ಜೀವಿಸುವ ಹಕ್ಕನ್ನು ಇದು ಮೊಟಕುಗೊಳಿಸಿದೆ. ಅಂತರ್ಜಲದ ಲೆಕ್ಕ ನೋಡಿದರೆ ತಮಿಳುನಾಡು ತಾನೇ ಹೇಳಿರುವಂತೆ ೩೦ ಟಿ.ಎಂ.ಸಿ. ನೀರು ಬಳಸುತ್ತಿದೆ. ಮಂಡಲಿಯು ಅದನ್ನು ಗಣನೆಗೆ ತೆಗೆದುಕೊಂಡಿದ್ದರೆ ಅಷ್ಟನ್ನು ಕಡಿತ ಮಾಡಬೇಕಾಗಿತ್ತು. ಪರಿಸರ ರಕ್ಷಣೆಗೆಂದು ತಮಿಳುನಾಡಿಗೆ ೧೦ ಟಿ.ಎಂ.ಸಿ. ಕೊಡಲಾಗಿದೆ. ಆ ರಾಜ್ಯದ ಪರಿಸರ ರಕ್ಷಿಸುವುದು ಯಾರ ಜವಾಬ್ದಾರಿ ? ಕರ್ನಾಟಕದ್ದೆ? ಅಲ್ಲವೆಂದಾದರೆ ೧೦ ಟಿ.ಎಂ.ಸಿ.ಯನ್ನು ಕರ್ನಾಟಕ ಏಕೆ ಕೊಡಬೇಕು ? ಸಮುದ್ರಕ್ಕೆ ಬಿಡಲಾಗುವ ೪ ಟಿ.ಎಂ.ಸಿ.ಯನ್ನು ಸಹ ಕರ್ನಾಟಕ ನೀಡಬೇಕು ! ಅಣೆಕಟ್ಟು ಕಟ್ಟಿ ಆ ನೀರನ್ನು ತಡೆಯದಿರುವುದು ತಮಿಳುನಾಡಿನ ಲೋಪ; ಅದಕ್ಕೆ ಶಿಕ್ಷೆ ಕರ್ನಾಟಕಕ್ಕೇಕೆ ? ಈ ಎಲ್ಲ ಲೆಕ್ಕದಂತೆ ತಮಿಳುನಾಡಿಗೆ ೧೯೨ ಟಿ.ಎಂ.ಸಿ. ಬದಲು ೧೧೧ ಮಾತ್ರ ಬಿಡಬೇಕಾಗುತ್ತದೆ. ಮಂಡಲಿಯ ಇನ್ನೊಂದು ತೀರ್ಮಾನವು ತೀರಾ ಪ್ರಶ್ನಾರ್ಹವಾದ್ದು; ಕಾವೇರಿ ನೀರಿನ ಹಂಚಿಕೆ ಮಾಡುವಾಗ ಅರ್ಕಾವತಿ, ಹೇಮಾವತಿ ಮುಂತಾದ ನದಿಗಳನ್ನೇಕೆ ಲೆಕ್ಕಕ್ಕೆ ತೆಗೆದುಕೊಳ್ಳಬೇಕು ? ''ಸದ್ಯಕ್ಕೆ ಬಳಸುತ್ತಿರುವವರಿಗೆ'' ಎಂಬ ಸೂತ್ರದ ಪ್ರಕಾರ ಕಬಿನಿ ನೀರಿನ ೪ ಟಿ.ಎಂ.ಸಿ. ಕೇರಳಕ್ಕೆ ಸೇರಿದರೆ ಉಳಿದದ್ದೆಲ್ಲಾ ಕರ್ನಾಟಕದ್ದೇ ಆಗಬೇಕು. ಆದರೆ ನ್ಯಾಯ ಮಂಡಲಿ ಹಾಗೆ

೯ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೮ ಸಂಚಿಕೆ-೧೦ ಮೇ ೨೦೦೭



**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಸ್. ಪಾರ್ಥಸಾರಥಿ

ಜಿ. ಶ್ರೀನಿವಾಸರಾಜು

ಕೆ. ಪಿ. ಸ್ವಾಮಿ

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್

ವ್ಯವಸ್ಥಾಪಕ ನಿರ್ದೇಶಕ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**

೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ

೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ

ಬೆಂಗಳೂರು - ೫೬೦ ೦೫೮

ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೩೦೫೭೮೦೨೯, ೨೨೨೦೩೫೮೦

ಫ್ಯಾಕ್ಸ್ : ೩೦೫೭೮೦೨೩

e-mail : navakarnataka@vsnl.com

website : www.navakarnatakabooks.com


## ಮತ್ತೆ ಬಂದಿದೆ ಮೇ ದಿನ

**ಸಂಪಾದಕೀಯ**

ದುಡಿಯುವ ಜನರ ಜೀವನದಲ್ಲಿ ಮೇ ದಿನವು ಒಂದು ಮುಂಗಡ ಪತ್ರವಿದ್ದಂತೆ. ಸರ್ಕಾರಗಳು ಮುಂಗಡ ಪತ್ರದಲ್ಲಿ ಆಯಾ ವರ್ಷದ ಆದಾಯ-ವೆಚ್ಚಗಳನ್ನು ದಾಖಲಿಸುವುದಲ್ಲದೆ ಅಭಿವೃದ್ಧಿ ಯೋಜನೆಗಳು, ವ್ಯಾಪಕ ಆರ್ಥಿಕ ನೀತಿ, ಅಡಚಣೆಗಳ ನಿವಾರಣೆ, ಮುಂತಾದುವನ್ನು ಸೂಚಿಸುತ್ತವೆ. ಅದರಂತೆ ಕಾರ್ಯಪ್ರವೃತ್ತರಾಗುತ್ತಾರೆಯೋ ಇಲ್ಲವೋ ಅದು ಬೇರೆ ಪ್ರಶ್ನೆ. ದುಡಿಯುವ ಜನರ ಭವಿಷ್ಯವನ್ನು ಬೆಳಕಾಗಿಸಲು ಹಿಂದಿನ ಅನೇಕ ಪೀಳಿಗೆಗಳಲ್ಲಿ ಶ್ರಮಿಕರು ಅಪಾರ ನೋವನ್ನು ಭವಿಸಿದ್ದಾರೆ, ಹೋರಾಟ ಮಾಡಿದ್ದಾರೆ, ತ್ಯಾಗ ಮಾಡಿದ್ದಾರೆ. ಅವರ ಕನಸನ್ನು ನನಸಾಗಿಸಲು ಇಂದಿನ ದುಡಿಯುವ ವರ್ಗವು ಪಣತೊಟ್ಟು ಕಾರ್ಯರಂಗಕ್ಕಿಳಿಯಲು ಸಜ್ಜಾಗುವ ದಿನ ಮೇ ದಿನ. ನಮಗಾಗಿ ಮತ್ತು ಮುಂದಿನವರಿಗಾಗಿ ಹೋರಾಟ ಮಾಡುವುದಕ್ಕೆ ಪ್ರತಿಬಂಧಕಗಳನ್ನೊಡ್ಡುವ ಅನಿಷ್ಟ ಸಂದರ್ಭದಲ್ಲಿ ನಾವಿದ್ದೇವೆ. ದುಡಿಯುವವರ ಹಿತವನ್ನು ಕಾಪಾಡದ ವ್ಯವಸ್ಥೆಯು ತನ್ನ ನ್ಯಾಯಾಂಗದ ಮುಖೇನ ಹೋರಾಟದ ಅಸ್ತ್ರಗಳನ್ನು ಸಹ ದುಡಿಯುವವರ ಕೈಗಳಿಂದ ಕಿತ್ತುಕೊಂಡು ಅವರನ್ನು ನಿಶ್ಶಸ್ತ್ರರನ್ನಾಗಿಸಿದೆ. ಇತಿಹಾಸದ ಪುಟಗಳಲ್ಲಿ ಶೋಭಿಸಿದ್ದ ಕೆಚ್ಚಿನ ಸಂಘರ್ಷಗಳು ಸ್ಮೃತಿಯಲ್ಲಿ ಮಾತ್ರವೇ ಉಳಿದುಬಿಡುವಂತಹ ಸನ್ನಿವೇಶದಲ್ಲಿ ನಾವಿದ್ದೇವೆ. ಹೋಗಲಿ, ವ್ಯವಸ್ಥೆಯು ಸ್ವಯಂ ಮುಂದಾಗಿ ಸಮಸ್ಯೆಗಳಿಗೆ ಪರಿಹಾರ ನೀಡುತ್ತದೆಯೇ ಎಂದರೆ ಅದೂ ಇಲ್ಲ. ಕಾರ್ಖಾನೆಗಳನ್ನು ಮುಚ್ಚುವುದು, ದಿನಗೂಲಿಯ ನೇಮಕಾತಿ, ಕೆಲಸಗಾರರಿಗೆ ಕಿರುಕುಳ, ಕಡಿಮೆ ಮಟ್ಟದ ಸಂಬಳ, ಇವೆಲ್ಲಾ ಹೆಚ್ಚುತ್ತಿವೆ. ಎಲ್ಲದಕ್ಕೂ ವಿದೇಶದ ಸರಕುಗಳ ಸರಬರಾಜೇ ಪರಿಹಾರವೆನ್ನುವಂತೆ ನಡೆದುಕೊಳ್ಳುವ ಆಳುವ ವರ್ಗ ದೇಶವನ್ನು ದಿವಾಳಿ ಮಾಡುತ್ತಿದೆ, ಪರಾವಲಂಬನೆಯತ್ತ ತಳ್ಳುತ್ತಿದೆ, ಸಾರ್ವಭೌಮತ್ವವನ್ನು ಹರಾಜಿಗಿಟ್ಟಿದೆ. ಆರೋಗ್ಯ, ಶಿಕ್ಷಣ, ಸಾರಿಗೆ, ವಸತಿ, ಎಲ್ಲವೂ ಕೈಗೆಟುಕದಷ್ಟು ದುಬಾರಿಯಾಗುತ್ತಿವೆ, ನಿರುದ್ಯೋಗ ಮಿತಿಮೀರಿದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರವೊಂದರಿಂದಲೇ ದೇಶದ ಆರ್ಥಿಕತೆಯನ್ನು ಮುನ್ನಡೆಸಬಹುದೆಂಬ ಮೂರ್ಖತನದಿಂದಾಗಿ ಬೇರೆ ಉತ್ಪಾದನಾ ಘಟಕಗಳನ್ನು ಕಡೆಗಣ್ಣಿನಿಂದ ಕಾಣಲಾಗುತ್ತಿದೆ. ಬೇರೆ ದೇಶಗಳ 'ಸೇವೆ'ಯಿಂದ ನೂರು ಕೋಟಿ ಜನರ ಬಾಳು ಬೆಳಗಲು ಸಾಧ್ಯವಿಲ್ಲವೆಂಬ ಪ್ರಾಥಮಿಕ ಪರಿಜ್ಞಾನದ ಕೊರತೆಯು ನಮ್ಮನ್ನು ಪ್ರಪಾತಕ್ಕೆ ತಳ್ಳುತ್ತಿದೆ.

ಸಾರ್ವಜನಿಕ ಸಂಪತ್ತನ್ನು ಖಾಸಗಿಯವರಿಗೆ ಹಸ್ತಾಂತರಿಸುವ ಪಾತಕ ಎಣೆಯಿಲ್ಲದೆ ಮುಂದುವರಿದಿದೆ. ರಾಜ್ಯದ ವೈದ್ಯಕೀಯ ಶಿಕ್ಷಣ ಸಂಸ್ಥೆಗಳನ್ನು ಮತ್ತು ಆಸ್ಪತ್ರೆಗಳನ್ನು ಖಾಸಗಿಯವರಿಗೆ ವಹಿಸಿಕೊಡಬೇಕೆಂಬ ಹುನ್ನಾರವು ಸರ್ಕಾರದಲ್ಲಿ ಪ್ರಬಲವಾಗಿ ಜರುಗುತ್ತಿದೆ. ಇದು ಸರ್ವಥಾ ತಿರಸ್ಕಾರಯೋಗ್ಯವಾದ ನಿಲುವು. ಅರುಣ್ ಶೌರಿ ಆರಂಭಿಸಿದ ಕೆಟ್ಟ ಚಾಳಿ ಈಗ ವ್ಯಾಪಕವಾಗಿ ಹಬ್ಬಿದೆ. ಕರ್ನಾಟಕದ ಅರ್ಥ ಸಚಿವರು ಬೊಕ್ಕಸದ ಹಣವನ್ನು ಎಗ್ಗಿಲ್ಲದೆ ದಾನ ಮಾಡುತ್ತಿದ್ದಾರೆ. ಶಾಲೆಗೆ ಒಂದು ಕೊಠಡಿ ಬೇಕೆಂದು ಒಂದು ಹಳ್ಳಿಯ ಜನ ಕೇಳಿದರೆ ಅದಕ್ಕೆ ಹಣವಿಲ್ಲ, ಆದರೆ ಮತೀಯ ದುರುದ್ದೇಶಗಳನ್ನು ಈಡೇರಿಸಿಕೊಳ್ಳಲು ಮಠಗಳಿಗೆ ಕೋಟಿಗಟ್ಟಲೆ ಹಣ ವಿತರಿಸುವ ಗುಂಗಿನಲ್ಲಿದ್ದಾರೆ. ''ಅರ್ಥ ಸಚಿವನಾಗಿ ನನಗೆ ಅಷ್ಟು ಸ್ವಾತಂತ್ರ್ಯವೂ ಇಲ್ಲವೆ'' ಎಂದು ಕೇಳಿದ್ದಾರೆ ಅವರು. ಸ್ವಾತಂತ್ರ್ಯವಿದೆ, ಆದರೆ ಮತೀಯ ಸಂಸ್ಥೆಗಳನ್ನು ಬೆಳೆಸಲು ಅಲ್ಲವೆಂದು ದುಡಿಯುವ ಜನ ಗಟ್ಟಿಯಾಗಿ ಅವರಿಗೆ ಹೇಳಬೇಕಾಗಿದೆ. ಹಿಂದೆ ನ್ಯಾಯಮೂರ್ತಿಗಳಾಗಿದ್ದ ರಾಮಾ ಜೋಯಿಸರಿಗೆ ''ರಾಜಧರ್ಮ'' ಕುರಿತಂತೆ ಸಂಶೋಧನೆ ನಡೆಸಲು ಎರಡು ಕೋಟಿ ನೀಡಲಾಗಿದೆ. ಅದಾವ ರಾಜನ ಧರ್ಮವನ್ನು ನಮ್ಮ ರಾಜ್ಯಕ್ಕೆ ಅವರು ಪರಿಚಯಿಸುತ್ತಾರೋ ತಿಳಿಯದು, ಆದರೆ ನಮ್ಮ ರಾಜ್ಯಧರ್ಮವಂತೂ ಅಧಃಪತನ ಹೊಂದುತ್ತಿದೆ. ಮತಧರ್ಮೀಯ ಕೆಡಕುಗಳು ಹಬ್ಬುತ್ತಿರುವಾಗ ಅಲ್ಪಸಂಖ್ಯಾತರ ವಿರುದ್ಧವಾಗಿ ಒಂದು ಸಮರವನ್ನು ಸಾರಿದಂತೆ ತೋರಿಬರುತ್ತಿದೆ. ಇಪ್ಪತ್ತನಾಲ್ಕು ಗಂಟೆಗಳ ಅದ್ಭುತವೊಂದು ಈ ದಿಕ್ಕಿನಲ್ಲಿ ಒಂದು ಅಲೆಯನ್ನೆಬ್ಬಿಸಿ ತಕ್ಷಣಕ್ಕೆ ತಣ್ಣಗಾಗಿದೆ. ಅಲಹಾಬಾದಿನ ಉಚ್ಚ ನ್ಯಾಯಾಲಯವು ಉತ್ತರ ಪ್ರದೇಶದಲ್ಲಿ ಮುಸಲ್ಮಾನರು ಅಲ್ಪಸಂಖ್ಯಾತರಲ್ಲವೆಂದು ಘೋಷಿಸಿತ್ತು; ಮಾರನೆಯ ದಿನ ಆ ಆಜ್ಞೆಯನ್ನು ತಡೆಹಿಡಿಯಲಾಯಿತು. ಹಾಗಾದರೆ ಅಲ್ಪಸಂಖ್ಯಾತರು ಯಾರು ? ಅವರೆಲ್ಲಿದ್ದಾರೆ ? ಅವರಿಗೆ ಯಾವ ಯಾವ ಸೌಲಭ್ಯಗಳನ್ನು ನಿರಾಕರಿಸಬೇಕು ? ಅದು ಸಮಾಜದ ಸಾಮರಸ್ಯವನ್ನು ಕಾಪಾಡುವ ವಿಧಾನವೆ ? ಈ ಪ್ರಶ್ನೆಗಳನ್ನು ದುಡಿಯುವ ವರ್ಗವು ಹಾಕಿಕೊಳ್ಳಬೇಕಾಗಿದೆ.

ದೇಶದ ಸಂವಿಧಾನವನ್ನು ಅರ್ಥೈಸುವ ವಿಶಿಷ್ಟ ಸ್ಥಾನದಲ್ಲಿರುವ ನ್ಯಾಯಾಂಗವು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಹಿಂದುಳಿದ ವರ್ಗದವರಿಗೆ ಪ್ರವೇಶ ನೀಡಬೇಕೆನ್ನುವ ಸರ್ಕಾರದ ಧೋರಣೆಗೆ ಅಡ್ಡಗಾಲು ಹಾಕಿದೆ. ಯಾರು ಹಿಂದುಳಿದವರು, ಅವರು ಜನಸಂಖ್ಯೆಯಲ್ಲಿ ಶೇಕಡಾವಾರು ಯಾವ ಪ್ರಮಾಣದಲ್ಲಿದ್ದಾರೆ, ಎಂಬುದನ್ನು ಖಚಿತಪಡಿಸದೆ ಹಿಂದುಳಿದ ವರ್ಗಗಳವರಿಗೆ ಪ್ರವೇಶ ನೀಡುವಂತಿಲ್ಲವೆಂದು ನ್ಯಾಯಾಂಗ ತಿಳಿಸಿದೆ. ಜಾತಿವಾರು ಜನಗಣತಿ ಮಾಡದೆ ಇದನ್ನು ಬಗೆಹರಿಸಲು ಸಾಧ್ಯವಿಲ್ಲವೆಂಬ ಅಭಿಪ್ರಾಯವಿದೆ. ಹಾಗಿದ್ದರೆ ಹಿಂದುಳಿದವರು ಇನ್ನೆಷ್ಟು ಕಾಲ ಕಾಯಬೇಕು ? ಹಿಂದುಳಿದವರಿಗೆ ಪ್ರವೇಶವು ಸಂವಿಧಾನಾತ್ಮಕವಾಗಿ ಸಾಧ್ಯವಿಲ್ಲವೆಂದು ನ್ಯಾಯಾಂಗವು ಭಾವಿಸುವುದಾದರೆ ಸರ್ಕಾರವು ಹಲವು ಉನ್ನತ ಶಿಕ್ಷಣ ಸಂಸ್ಥೆಗಳನ್ನು ಮುಚ್ಚಿಹಾಕಬೇಕು. ಸಾರ್ವಜನಿಕರ ಹಣದಿಂದ ಕೆಲವರು ಶಿಕ್ಷಣ ಪಡೆದು ವಿದೇಶಗಳಿಗೆ ಹಾರುವುದಾದರೆ ಅಂತಹ ಸಂಸ್ಥೆಗಳನ್ನು ಸರ್ಕಾರವೇಕೆ ನಡೆಸಬೇಕು ? ಬೇಕಾದರೆ ಖಾಸಗಿಯವರು ತಮ್ಮ ಖರ್ಚಿನಲ್ಲಿ ನಡೆಸಿಕೊಳ್ಳಲಿ ಎನ್ನಬೇಕಾಗುತ್ತದೆ. ದುಡಿಯುವ ಜನ ಈ ಬಗ್ಗೆ ಒಂದು ಸ್ಪಷ್ಟವಾದ ಅಭಿಪ್ರಾಯವನ್ನು ಹೊಂದಿ ಅದನ್ನು ಕಾರ್ಯಗತಗೊಳಿಸಲು ಮುಂದಾಗಬೇಕು. ಇಲ್ಲವಾದಲ್ಲಿ, ದುಡಿಯುವ ವರ್ಗದ ಕುಟುಂಬಗಳ ಯುವಕ-ಯುವತಿಯರಿಗೆ ಉನ್ನತ ಶಿಕ್ಷಣವು ಮರೀಚಿಕೆಯಾಗಿಯೇ ಉಳಿಯುತ್ತದೆ.

ದೇಶದ ದುಡಿಯುವ ವರ್ಗದ ಮುಂದೆ ಈಗ ಉದ್ಭವವಾಗಿರುವ ಪೆಡಂಭೂತವೆಂದರೆ ''ವಿಶೇಷ ಆರ್ಥಿಕ ವಲಯ'' ಎಂಬ ಜಾಗತೀಕರಣದ ಕೂಸು, ನವ ವಸಾಹತುಶಾಹಿಯ ಅಪರಾವತಾರ ಮತ್ತು ರೈತ-ಕಾರ್ಮಿಕರ ನಿರಂತರ ಶತ್ರು. ಮನಮೋಹನ ಸಿಂಗ್ ಸರ್ಕಾರವು ದೇಶವನ್ನು ವಿದೇಶಿ ತಿಮಿಂಗಿಲಗಳ ಬಾಯಿಗೆ ಬಲಿಪಶುವನ್ನಾಗಿ ನೂಕುತ್ತಿದೆ. ಪಾರ್ಲಿಮೆಂಟಿನಲ್ಲಿ ಆಳವಾದ ಚರ್ಚೆಯಿಲ್ಲದೆ ಅಂಗೀಕೃತವಾದ ಶಾಸನದಂತೆ ಈ ವಲಯಗಳು ದುಡಿಯುವ ಜನಕ್ಕೆ ಮಾರಕವಾಗಲಿವೆ. (ಈ ಬಗ್ಗೆ ವಿಮರ್ಶಾತ್ಮಕ ಲೇಖನವೊಂದು ಪತ್ರಿಕೆಯ ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವುದನ್ನು ಗಮನಿಸಬಹುದು.)

ಜನವರಿ ೨೦೦೭ರಲ್ಲಿ ವಿಶ್ವ ಕಾರ್ಮಿಕ ಸಂಘಗಳ ಒಕ್ಕೂಟವು ಗ್ರೀಸಿನಲ್ಲಿ ಸಭೆ ಸೇರಿ ೨೧ನೆಯ ಶತಮಾನಕ್ಕೆ

ಅನ್ವಯವಾಗುವಂತಹ ಜಾಗತಿಕ ಹೋರಾಟವನ್ನು ರೂಪಿಸಲು ಮುಂದಾಗಿದೆ. ತನ್ನ ೬೨ ವರ್ಷಗಳ ಅನುಭವದ ಹಿನ್ನೆಲೆಯಲ್ಲಿ ವರ್ಗಪ್ರಜ್ಞೆಯು ಜಾಗತಿಕವಾಗಿ ಜಾಗೃತವಾಗುವಂತೆ ಮಾಡಲು ಮತ್ತೊಮ್ಮೆ ಶ್ರಮಿಸಲು ಒಂದು ಪ್ರಣಾಲಿಕೆಯನ್ನು ಸಿದ್ಧಗೊಳಿಸಿದೆ. ಆರ್ಥಿಕ ಮತ್ತು ಸಾಮಾಜಿಕ ಹೋರಾಟಗಳಲ್ಲದೆ ''ಸಾಂಸ್ಕೃತಿಕ ಸಾಮ್ರಾಜ್ಯಶಾಹಿ'' ವಿರುದ್ಧ ಸಹ ಈಗ ಸೆಣಸಬೇಕಾಗಿದೆಯೆಂಬ ಎಚ್ಚರಿಕೆಯನ್ನು ಕಾರ್ಮಿಕ ಒಕ್ಕೂಟವು ನೀಡಿದೆ. ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಿಂದ ವಿಶ್ವವು ಮುಕ್ತವಾಗಬೇಕೆಂಬ ತೀವ್ರ ಆಕಾಂಕ್ಷೆ ಅಲ್ಲಿ ಪ್ರಕಟವಾಗಿದೆ. ಇವೆಲ್ಲಾ ಮೇ ದಿನದ ಆಶಯಗಳಾಗಿ ದುಡಿಯುವ ಜನರಲ್ಲಿ ಪ್ರಕಟಗೊಳ್ಳಬೇಕು ಮತ್ತು ಆ ಆಶಯಗಳ ಈಡೇರಿಕೆಗಾಗಿ ಹೋರಾಟದ ನವಯುಗವನ್ನು ಆರಂಭಿಸಬೇಕು. ಸಾಮುದಾಯಿಕವಾಗಿ ನಾವಿದಕ್ಕಾಗಿ ಸನ್ನದ್ಧರಾಗೋಣ, ಶ್ರಮಿಸೋಣ, ಗೆಲ್ಲುವವರೆಗೂ ನಿಲ್ಲದಿರೋಣ.

## ಯಜ್ಞಫಲ

**ಹಿಂ**ದೆಲ್ಲಾ ಯಜ್ಞಗಳನ್ನು ಮಾಡಿ ಇಂದ್ರಪದವಿಯನ್ನು ಸಹ ಪಡೆಯಲು ಸ್ಪರ್ಧೆ ನಡೆಯುತ್ತಿತ್ತೆಂಬ ಕತೆಗಳು ನಮ್ಮಲ್ಲಿವೆ. ಯಾವ ಯಜ್ಞವನ್ನು ಯಾವಾಗ ಮತ್ತು ಹೇಗೆ ಮಾಡಿದರೆ ಎಂತೆಂತಹ ಫಲ ಸಿಗುವುದೆಂಬ ಕತೆಗಳಿಗೂ ಕಡಿಮೆಯಿಲ್ಲ. ನಾಟಕಕಾರ ಭಾಸನದೆಂದು ಹೇಳಲಾಗುವ ಒಂದು ನಾಟಕದ ಹೆಸರು 'ಯಜ್ಞಫಲ'. (ಅದು ಅವನ ಕೃತಿಯಲ್ಲ; ಅದು ಬೇರೆ ವಿಷಯ.) ಇಂದಿನ ಯಾರಾದರೂ ನುರಿತ ಕಲಾವಿದರು ಅದೇ ಹೆಸರಿನ ಇನ್ನೊಂದು ನಾಟಕ ಬರೆಯಲು ಬೇಕಾದಷ್ಟು ಸಾಮಗ್ರಿ ಇದೆ. ಅದ್ವೈತ ವೇದಾಂತಿ ಶಂಕರರಿಗೂ ಶತಚಂಡೀ ಹೋಮಕ್ಕೂ ಇರಬಹುದಾದ ಉತ್ಕಟ ಸಂಬಂಧವನ್ನು ವಿಶ್ಲೇಷಿಸಲು ಯತ್ನಿಸುವುದು ಕೂಡ ನಾಟಕದ ವಸ್ತುವಾಗಬೇಕು. ಹಿಂದೆ ರಾಕ್ಷಸರು ಯಜ್ಞಕ್ಕೆ ಅಡಚಣೆ ಉಂಟುಮಾಡಲು ಯಜ್ಞಕುಂಡದೊಳಕ್ಕೆ ಹೆಂಡ ಸುರಿಯುತ್ತಿದ್ದರಂತೆ. ಅಂತಹ ಸಂದರ್ಭವನ್ನು ಎದುರಿಸಲು ವಿಶ್ವಾಮಿತ್ರರಂತಹವರು ರಾಮ-ಲಕ್ಷ್ಮಣರಂತಹವರನ್ನು ಕರೆದುಕೊಂಡು ಹೋಗಿ ಯಜ್ಞಕ್ಕೆ ರಕ್ಷಣೆ ದೊರಕಿಸಿಕೊಟ್ಟು ಆಮೇಲೆ ಅವರಿಗೆ ಮದುವೆ ಮಾಡಿಸುತ್ತಿದ್ದರು. ಈಗ ಯಜ್ಞಗಳಿಗೆ ಅಂತಹ ಆಪತ್ತು ಇಲ್ಲವಾದ್ದರಿಂದ ಯುವ ರಾಜಕುಮಾರರಿಗೆ ಮದುವೆಯ ಸೌಭಾಗ್ಯ ಇಲ್ಲವಾಗಿದೆ. ಯಜ್ಞದ ಸ್ಥಳಕ್ಕೆ ಈಗ ರಾಕ್ಷಸರಂತಹ ಮಾನವರು ಬರುವುದಿದ್ದರೆ ಅವರ ಸ್ವಂತದ ಹೊಟ್ಟೆಯೊಳಕ್ಕೆ ಒಂದಷ್ಟು ಹೆಂಡ ತುಂಬಿಕೊಂಡು ಬರುತ್ತಾರೆಯೇ ವಿನಾ ಅದನ್ನು ವೃಥಾ ಯಜ್ಞಕುಂಡದೊಳಕ್ಕೆ ಸುರಿಯುವುದಿಲ್ಲ. ಇದನ್ನು ಈಗೇಕೆ ಚಿಂತಿಸಬೇಕಾಗಿದೆಯೆಂದರೆ ಎಲ್ಲೆಲ್ಲೂ ಅದ್ದೂರಿ ಯಜ್ಞಗಳ ಆರ್ಭಟ ಕೇಳಿಬರುತ್ತಿದೆ. ಮಾನ್ಯ ಯಡಿಯೂರಪ್ಪನವರು ಗೋ ಸಂರಕ್ಷಣಾ ಕೋವಿದರಾದ ಸ್ವಾಮಿಗಳ ರಾಮಚಂದ್ರಪುರ ಮಠಕ್ಕೆ ಒಂದೋ ಎರಡೋ ಕೋಟಿ ರೂಪಾಯಿಗಳನ್ನು ಸರ್ಕಾರದ ವತಿಯಿಂದ ದುರ್ದಾನ ನೀಡಿದ್ದಾರೆ. ಅವರು ಒಂದಷ್ಟು ತೋಟಗಳನ್ನು ಕೆಡವಿ ಗೋವುಗಳ ಮೇಳ ನಡೆಸಿ ವಿಶ್ವಹಿತಕ್ಕಾಗಿ ಯಜ್ಞ ಮಾಡಿದರು. ಬೆಂಗಳೂರಿನ ರಸ್ತೆಗಳಲ್ಲಿ ಹೆಜ್ಜೆಯನ್ನೇ ಇಡದೆ ಶೃಂಗೇರಿ ಸ್ವಾಮಿಗಳು ಶಂಕರ ಮಠದಲ್ಲಿ ಬಿಡಾರ ಹೂಡಿ ಶತಚಂಡೀ ಹೋಮ ನಡೆಸಿದ್ದಾರೆ. ಅದನ್ನು ವಿರೋಧಿಸಲು ಯಾರೂ ರಣಚಂಡೀ ಹೋಮ ಮಾಡಿಲ್ಲ. ಕಾವೇರಿ ನೀರು ಕರ್ನಾಟಕಕ್ಕೇ ದಕ್ಕಬೇಕೆಂದು ಯಜ್ಞ ಮಾಡಿದ ನಾಗರಿಕವರೇಣ್ಯರು ನಮ್ಮ ರಾಜ್ಯವನ್ನು ಪಾವನವನ್ನಾಗಿಸಿದ್ದಾರೆ. ವಿಶ್ವಕಪ್ ಭಾರತದ ಧಾಂಡಿಗರಿಗೇ ಲಭಿಸಬೇಕೆಂದು ಕ್ರಿಕೆಟ್ ಆಟದ ಹುಚ್ಚು ಅಭಿಮಾನಿಗಳು ಯಜ್ಞ ಮಾಡಿದ ವರದಿಗಳು ಬಂದಿವೆ. ಬೇರೆ ಯಾವ ದೇಶದವರೂ ಇಷ್ಟು ಶ್ರದ್ಧೆಯಿಂದ ಯಜ್ಞ ಮಾಡಿಲ್ಲದಿದ್ದರೂ ಯಜ್ಞದೇವತೆಯು ರಾಹುಲ ದ್ರಾವಿಡನ ತಂಡಕ್ಕೆ ವಿಶ್ವಕಪ್ಪಿನ ಬದಲು ತೆಂಗಿನ ಚಿಪ್ಪು ನೀಡಿ ಪುರಸ್ಕರಿಸಿದ್ದಾಳೆ. ಯಜ್ಞಫಲ ಸ್ವರೂಪದಲ್ಲಿ ಕಾವೇರಿ ತಾಯಿ ನಮ್ಮಲ್ಲಿ ಹರಿದಾಳೇ ಎಂಬುದು ಇನ್ನೂ ಸಂಶಯದ ತೆಕ್ಕೆಯಲ್ಲೇ ಇದೆ. ಕುಮಾರಸ್ವಾಮಿಯವರು ಯುಗಾದಿ ಶುಭಾಶಯ ಹೇಳಿದ್ದರೂ ಕರುಣಾನಿಧಿ ಇನ್ನೂ ತನ್ನ ಹಲ್ಲುಬಿಟ್ಟು ನಕ್ಕಿಲ್ಲವಾದ್ದರಿಂದ ಕಾವೇರಿಗಾಗಿ ನಡೆದ ಯಜ್ಞದ ಫಲ ಹೇಗಿರುತ್ತದೋ ಹೇಳುವಂತಿಲ್ಲ.

ಆದಿಮ ಸಮಾಜಗಳಲ್ಲಿ ಯಜ್ಞವು ಸಮೂಹದ ಕ್ರಿಯೆಯಾಗಿತ್ತು. ಸುತ್ತಣ ಪ್ರಪಂಚದ ನಿಯಮಗಳ ತಿಳುವಳಿಕೆ ಸಾಲದಿದ್ದ ಕಾಲದಲ್ಲಿ ಅಂದಿನ ಸಮಾಜವು ತನ್ನ ಆಶಯಗಳ ಪೂರೈಕೆಗೆ ಯಜ್ಞದಂತಹ ವಿಧಿಗಳನ್ನು ಆತುಕೊಂಡಿದ್ದಿತು. ಪ್ರಕೃತಿಯನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳುವ ಮಾರ್ಗ ಅದೆಂದು ಭಾವಿಸಲಾಗಿದ್ದು, ತನ್ನ ಆಶಯದ ಪೂರೈಕೆಗೆ ಯಾವ ದೇವತೆಯ ಮರ್ಜಿಯ ಅಗತ್ಯವೂ ಇಲ್ಲವೆಂದು ತರ್ಕಿಸಲಾಗಿತ್ತು. ತನ್ನ ಸಮಾಜದ ಹಾಗೂ ಪ್ರಕೃತಿ ನಿಯಮಗಳ ಜ್ಞಾನ ಹೆಚ್ಚಿದಂತೆ ಯಜ್ಞದಂತಹ ಸಾಮೂಹಿಕ ಕ್ರಿಯೆಗಳ ಅರ್ಥ ಮತ್ತು ಉದ್ದೇಶ ಬದಲಾದುವು. ಸಮಾಜದ ಬದಲು ಸಂಪತ್ತಿನ ಒಡೆಯನಾದ ಯಜಮಾನನ ಆಸೆಗಳನ್ನು ಪೂರೈಸಲು ಯಜ್ಞದ ಆಶ್ರಯ ಪಡೆಯಲಾಯಿತು. ಭೂರಿದಕ್ಷಿಣೆ ಪಡೆಯುವ ಪುರೋಹಿತ ಪಡೆಯ ರಚನೆಯಾಯಿತು. ಯಜ್ಞದಲ್ಲಿ ಪಠಿಸಲಾಗುವ ಮಂತ್ರದ ಸ್ವಯಂಶಕ್ತಿಯು ಫಲ ನೀಡುತ್ತದೆಯೇ ಹೊರತು ದೇವತೆಗಳನ್ನು ಒಲೈಸಿದ್ದರಿಂದ ಫಲ ದೊರೆಯುವುದಿಲ್ಲವೆಂಬ ಅಭಿಪ್ರಾಯ ಮೂಡಿಬಂದಿತು. ಪೂರ್ವಮೀಮಾಂಸಾ ದರ್ಶನದ ಮೂಲಭೂತ ಸಾರವೇ ಇದು. ಶಂಕರಾಚಾರ್ಯರು ಪೂರ್ವಮೀಮಾಂಸಾ ದರ್ಶನವನ್ನು ಖಂಡತುಂಡವಾಗಿ ವಿರೋಧಿಸಿದ್ದರೆಂಬ ಮಾತು ಶಂಕರಮಠದ ಆವರಣದಲ್ಲಿ ಕೇಳಿಬರಬಹುದು; ಆದರೂ ಅಲ್ಲಿ ಯಜ್ಞ ನಡೆಸಲಾಗುತ್ತದೆ! ಯಜ್ಞವು ಫಲ ನೀಡಲು ಸೋಲಬಹುದೆಂಬ ಶಂಕೆಯಿಂದ ಭಾರತದ ಕ್ರಿಕೆಟ್ ಮಂಡಲಿಯು ವಿದೇಶಿ ತಜ್ಞನೊಬ್ಬನನ್ನು ತನ್ನ ತಂಡದ ತರಬೇತುದಾರನನ್ನಾಗಿ ಇರಿಸಿಕೊಂಡಿತು. ನಾರಾಯಣಮೂರ್ತಿಗಳಿಗಿರುವಂತೆ ಕ್ರಿಕೆಟ್ ಮಂಡಲಿಗೂ ಬಿಳಿ ತೊಗಲಿನ ವ್ಯಾಮೋಹ ಅತಿಯಾಗಿದೆ. ಆದರೆ ಕ್ರಿಕೆಟ್ ನಿಪುಣ ಚಾಪೆಲ್ ತನ್ನ ಸಂಬಳವನ್ನು ಸರಿಯಾಗಿ ಎಣಿಸಿಕೊಂಡು, ಗಂಟುಮೂಟೆ ಕಟ್ಟಿ, 'ಚಾಪ್ ಹೆಲ್' ಎಂದು ಹೇಳಿ ಹೊರಟೇಹೋದ! ''ನಿಮ್ಮ ಯಜ್ಞದ ಸೋಲು ಇದು'' ಎಂದು ಮೂಗುಮುರಿದು ತೆರಳಿದನೇನೋ ತಿಳಿಯದು. ಮುಂದೆ ಯಜ್ಞಗಳನ್ನು ಸಾಂಗೋಪಾಂಗವಾಗಿ ನಿರ್ದಿಷ್ಟವಾದ ರೀತಿಯಲ್ಲಿ ಮಾಡಿ ದೇಶವು ಸರ್ವತೋಮುಖವಾಗಿ ವೃದ್ಧಿಹೊಂದುವುದು ಖಚಿತವೆಂದು ಯಜ್ಞದ ದಿಗ್ದಂತಿಗಳು ಸಾರುತ್ತಾರೆ. ಅದಕ್ಕೆ ಯಾರ ಅಡಚಣೆಯೂ ಇಲ್ಲ. ಬೆಂಗಳೂರಿನ ಮಹೇಶ ಜೋಶಿಯವರ ದುರ್ದರ್ಶನವು ಆ ಎಲ್ಲ ಯಜ್ಞಗಳ ನೇರಪ್ರಸಾರ ಮಾಡಿ ಸಾರ್ಥಕವಾಗುತ್ತದೆ. ಜೈ ಹಿಂದ್, ಜೈ ಹೋಟೆಲ್ ಮಾಲಿಕ ತೆಂಡು ಗಂಗು ವೃಂದ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಇಂಗ್ಲಿಷ್ ಭಾಷೆ-ಮಾಧ್ಯಮ-ಕನ್ನಡ

ಇಂಗ್ಲಿಷ್ ಭಾಷೆ ಕುರಿತಾದ ಚರ್ಚೆ ಪುನಃ ಆರಂಭಗೊಂಡಿದೆ. ಪರ ಮತ್ತು ವಿರೋಧಗಳ ನಡುವೆ ಸರ್ಕಾರವು ೧ನೆಯ ತರಗತಿಯಿಂದಲೇ ಇಂಗ್ಲಿಷನ್ನು ಒಂದು ಭಾಷೆಯನ್ನಾಗಿ ಕಡ್ಡಾಯಗೊಳಿಸುವ ನಿರ್ಧಾರವನ್ನು ಕೈಗೊಂಡಿದೆ. ಇಂಗ್ಲಿಷ್ ಭಾಷೆಯ ಪರವಾಗಿ ಗಮನಿಸುವುದಾದರೆ, ಇಂದು ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳಿಂದಾಗಿ ತೀವ್ರಗತಿಯಲ್ಲಿ ಆಧುನಿಕತೆಯ ಆಕ್ರಮಣಶೀಲ ಪ್ರವೃತ್ತಿ ಆರಂಭಗೊಂಡಿದೆ. ಪರಿಣಾಮವಾಗಿ ಹಲವು ಭಾಷೆ ಮತ್ತು ವಿವಿಧ ಜ್ಞಾನಶಿಸ್ತುಗಳ ತಿಳುವಳಿಕೆ ಎಲ್ಲರಿಗೂ ಅವಶ್ಯಕವಾಗಿದೆ. ಇಂತಹ ಸಂದರ್ಭದಲ್ಲಿ ಹಲವು ಭಾಷೆಗಳನ್ನು ಕಲಿಯುವ ಜೊತೆಗೆ, ನಮ್ಮ ನಾಡು-ನುಡಿಯನ್ನು ಉಳಿಸಿಕೊಳ್ಳಲೇಬೇಕಾದ ಸಂಕಷ್ಟದ ಪರಿಸ್ಥಿತಿ ಎದುರಾಗಿದೆ. ಇಂಗ್ಲಿಷ್ ಹಾಗೂ ಕಂಪ್ಯೂಟರ್ ಶಿಕ್ಷಣ ಪಡೆದವರಿಗೆ ವಿಪುಲ ಉದ್ಯೋಗಾವಕಾಶಗಳಿವೆ. ಅಲ್ಲದೆ ಯಾವುದೇ ಖಾಸಗಿ ಸಂಸ್ಥೆಯಲ್ಲಿ ಉದ್ಯೋಗ ಪಡೆಯಬೇಕೆಂದರೆ ಇಂಗ್ಲಿಷ್ ಜ್ಞಾನ ಅವಶ್ಯಕ. ಅದರಲ್ಲೂ 'ಐ.ಟಿ. ರಾಜಧಾನಿ' ಬೆಂಗಳೂರಿನಲ್ಲಿ ಇಂಗ್ಲಿಷ್ ಮಾತನಾಡಲು ಬಾರದಿದ್ದರೆ ಅಂತಹವರನ್ನು ಅನಕ್ಷರಸ್ಥರೆಂಬಂತೆ ನಡೆಸಿಕೊಳ್ಳಲಾಗುತ್ತದೆ. ಹೀಗಾಗಿ ಇಂಗ್ಲಿಷ್ ಭಾಷೆಯ ಕಲಿಕೆ ಇಂದು ಅವಶ್ಯಕ ಎಂದು ಎಲ್ಲರೂ ಒಪ್ಪಿಕೊಳ್ಳುವಂತಹ ಮಾತು.

ಇಂಗ್ಲಿಷ್ ಭಾಷಾ ಕಲಿಕೆ ಯಾವ ಹಂತದಿಂದ ? ಹಾಗೂ ಕಲಿಕೆಯ ವಿಧಾನದ ಬಗೆಗೆ ಇನ್ನಷ್ಟು ಸುದೀರ್ಘ ಚರ್ಚೆ ಆಗಬೇಕಾದ ಅಗತ್ಯವಿದೆ. ಸರ್ಕಾರವು ಯಾವುದೇ ಯೋಜನೆಯನ್ನು ರೂಪಿಸುವಾಗ ಅದನ್ನು ಸೂಕ್ತ ರೀತಿಯಲ್ಲಿ ಪರಾಮರ್ಶಿಸಿ ಆ ನಂತರವೇ ಅದನ್ನು ಜಾರಿಗೊಳಿಸುವುದು ಪದ್ಧತಿ. ಆದರೆ ೧ನೆಯ ತರಗತಿಯಿಂದಲೇ ಇಂಗ್ಲಿಷ್ ಭಾಷೆಯನ್ನು ಕಡ್ಡಾಯ ಮಾಡುವ ಅವಸರದ ನಿರ್ಣಯ ಕೈಗೊಂಡಿರುವ ಸರ್ಕಾರ ಈ ಕುರಿತಾಗಿ ಸಾಧಕ-ಬಾಧಕಗಳನ್ನು ಪರಿಶೀಲಿಸಿದೆಯೆ ? ಅಲ್ಲದೆ ಸಾಕಷ್ಟು ಪೂರ್ವಸಿದ್ಧತೆಗಳನ್ನು ನಡೆಸಿದೆಯೇ ಎಂಬುದು ಈಗಿನ ಮುಖ್ಯ ಪ್ರಶ್ನೆ. ಕರ್ನಾಟಕದಲ್ಲಿ ಇಂದು ಸಾವಿರಾರು ಪ್ರಾಥಮಿಕ ಶಾಲೆಗಳಿವೆ. ಅವುಗಳಲ್ಲಿ ಗ್ರಾಮೀಣ ಭಾಗದಲ್ಲಿ ಸುಸಜ್ಜಿತ ಕಟ್ಟಡವಿಲ್ಲದ, ಪೀಠೋಪಕರಣದ ವ್ಯವಸ್ಥೆಯಿಲ್ಲದ, ಮೂಲಭೂತ ಸೌಲಭ್ಯಗಳಿಲ್ಲದ ಮುಖ್ಯವಾಗಿ ಶಿಕ್ಷಕರೇ ಇಲ್ಲದ ಶಾಲೆಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಅಲ್ಲದೆ ಇಡೀ ಶಾಲೆಗೆ ಒಬ್ಬರೇ ಶಿಕ್ಷಕರಿರುವ 'ಏಕೋಪಾಧ್ಯಾಯ' ಶಾಲೆಗಳ ಸಂಖ್ಯೆಯೂ ಹೆಚ್ಚಿವೆ. ಇಂತಹ ಪರಿಸ್ಥಿತಿಯಲ್ಲಿ ತಕ್ಷಣವೇ ಇಂಗ್ಲಿಷ್ ಭಾಷೆಯನ್ನು ಕಡ್ಡಾಯ ಮಾಡಿದ ಪಕ್ಷದಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಈ ಯೋಜನೆಯ ಲಾಭ ಪಡೆಯಲು ಸಾಧ್ಯ ? ಈ ಅಂಶವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇಂಗ್ಲಿಷ್ ಭಾಷೆಯನ್ನು ಬೋಧಿಸಲು ನುರಿತ ಶಿಕ್ಷಕರ ಅವಶ್ಯಕತೆ ಇದೆ. ರಾಜ್ಯದ ಎಲ್ಲಾ ಶಾಲೆಗಳಿಗೂ ಇಂಗ್ಲಿಷ್ ಪರಿಣತ ಶಿಕ್ಷಕರನ್ನು ನೇಮಿಸುವುದಂತೂ ಅಸಾಧ್ಯ. ಆದುದರಿಂದ ಈಗ ಇರುವಂತಹ ಶಿಕ್ಷಕರಿಗೇ ಇಂಗ್ಲಿಷ್ ಭಾಷಾ ಬೋಧನಾ ನೈಪುಣ್ಯ ತರಬೇತಿ ನೀಡಲು ಕ್ರಮ ಕೈಗೊಳ್ಳಬೇಕಿದೆ. ಇಲ್ಲದಿದ್ದರೆ ಈ ಯೋಜನೆ ನಗರ ಪ್ರದೇಶದ ಶಾಲೆಗಳಿಗೆ ಮಾತ್ರ ಸೀಮಿತವಾಗಿ ಗ್ರಾಮೀಣ ಭಾಗದ ಶಾಲೆಗಳ ವಿದ್ಯಾರ್ಥಿಗಳು ಪುನಃ ವಂಚನೆಗೊಳಗಾಗುವ ಸಾಧ್ಯತೆಯೇ ಹೆಚ್ಚು. ಈ ಯೋಜನೆಯನ್ನು ಪರಿಣಾಮಕಾರಿಗೊಳಿಸಲು ವಿಭಿನ್ನ ಪ್ರಾದೇಶಿಕತೆ ಇರುವ ನಮ್ಮ ರಾಜ್ಯದ ಯಾವುದಾದರೂ ೫ ಜಿಲ್ಲೆಗಳಲ್ಲಿ ಅನುಷ್ಠಾನಕ್ಕೆ ತಂದು ನಂತರ ಇಡೀ ರಾಜ್ಯಕ್ಕೆ ಅನ್ವಯಿಸುವುದು ಸೂಕ್ತವಾಗುತ್ತದೆ.

ಇಂಗ್ಲಿಷ್ ಭಾಷಾ ಕಲಿಕೆಯನ್ನು ೧ನೆಯ ತರಗತಿಯಿಂದಲೇ ಆರಂಭಿಸಿದರೂ, ಪರೀಕ್ಷೆಯನ್ನು ಯಾವ ತರಗತಿಯಿಂದ ನಡೆಸಬೇಕು ಎಂಬುದರ ಬಗ್ಗೆ ಎಚ್ಚರಿಕೆ ಅಗತ್ಯ. ೩ನೇ ತರಗತಿಯಿಂದ ಪರೀಕ್ಷೆಯನ್ನು ನಡೆಸುವ ಬದಲಾಗಿ ೪ ಅಥವಾ ೫ನೇ ತರಗತಿಯಿಂದ ನಡೆಸಿದರೆ ವಿದ್ಯಾರ್ಥಿಗಳಿಗೆ ಹೊರೆ ಆಗುವ ಸಾಧ್ಯತೆ ಕಡಿಮೆ. ಅಲ್ಲದೆ ಇಂಗ್ಲಿಷ್ ಭಾಷೆಯ ಪಠ್ಯವನ್ನು ರೂಪಿಸುವಾಗ ಭಾಷಾ ತಜ್ಞರು, ಶಿಕ್ಷಣ ಕ್ಷೇತ್ರದ ಪರಿಣತರು ಹಾಗೂ ಮನಃಶಾಸ್ತ್ರಜ್ಞರ ಸಮಿತಿ ರಚಿಸಿ ಆ ಮೂಲಕ ಉತ್ತಮ ಪಠ್ಯವನ್ನು ರೂಪಿಸಬಹುದಾಗಿದೆ.




ಶಿಕ್ಷಣದಲ್ಲಿ ಕನ್ನಡ ಮಾಧ್ಯಮದ ಬೆಳವಣಿಗೆಗೆ ಎಲ್ಲ ರೀತಿಯ ಪ್ರೋತ್ಸಾಹ ಹಾಗೂ ಸೌಲಭ್ಯಗಳನ್ನು ದೊರಕಿಸಿ ಕೊಡುವ ಮೂಲಕ ಕನ್ನಡವನ್ನು ಅಭಿವೃದ್ಧಿಪಡಿಸುವ ಹೊಣೆಗಾರಿಕೆ ಸರ್ಕಾರ ಹಾಗೂ ಸಂಘ ಸಂಸ್ಥೆಗಳ ಮೇಲಿದೆ. ಅಲ್ಲದೆ ಇಂಗ್ಲಿಷನ್ನು ಒಂದು ಭಾಷೆಯಾಗಿ ಕನ್ನಡ ಶಾಲೆಗಳಲ್ಲಿ ಕಡ್ಡಾಯಗೊಳಿಸಿರುವ ರೀತಿಯಲ್ಲಿ, ಇಂಗ್ಲಿಷ್ ಮಾಧ್ಯಮದ ಸಿಬಿಎಸ್‌ಸಿ ಹಾಗೂ ಐಸಿಎಸ್‌ಇ ಶಾಲೆಗಳಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿಸುವ ನಿಟ್ಟಿನಲ್ಲಿ ಆಲೋಚಿಸಬೇಕಿದೆ. ಸರೋಜಿನಿ ಮಹಿಷಿಯವರ ವರದಿಯ ಪ್ರಕಾರ ೧೫ ವರ್ಷಗಳ ಕಾಲ ಕನ್ನಡದ ನೆಲದಲ್ಲಿ ವಾಸಿಸುವವರೆಲ್ಲರೂ ಕನ್ನಡಿಗರಾಗಿದ್ದಾರೆ. ಆದರೆ ಇಂತಹವರಲ್ಲಿ ಅನೇಕರು ಕನ್ನಡವನ್ನು ಕಲಿಯದೆ ನಿರ್ಲಕ್ಷ್ಯ ಧೋರಣೆ ತಳೆದಿದ್ದಾರೆ. ಈ ನಿಟ್ಟಿನಲ್ಲಿ ರಾಜ್ಯದಲ್ಲಿ ಸರ್ಕಾರಿ, ವಾಣಿಜ್ಯ ಮತ್ತು ಸಂಘ ಸಂಸ್ಥೆಗಳಲ್ಲಿ ಕಡ್ಡಾಯವಾಗಿ ಕನ್ನಡದ ಅನುಷ್ಠಾನವಾಗಬೇಕು. ಇಂಗ್ಲಿಷ್ ಕಲಿತರೆ ಮಾತ್ರ ಉದ್ಯೋಗ ಸಿಗುತ್ತದೆ ಎಂಬ ಭಾವನೆಯನ್ನು ಅಳಿಸಿಹಾಕಿ, ಕನ್ನಡಕ್ಕೆ ಪ್ರಥಮ ಸ್ಥಾನದ ಗೌರವವನ್ನು ನೀಡಬೇಕಾಗಿರುವುದು ಇಂದಿನ ತೀರಾ ಅಗತ್ಯದ ವಿಷಯವಾಗಿದೆ.

*ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ* **ಎಸ್. ಪ್ರವೀಣ್ ಚಂದ್ರ**

## ಚುನಾವಣಾ ರಾಜಕೀಯ ಚೌಕಟ್ಟಿನಲ್ಲಿ ಸಾಮಾಜಿಕ ನ್ಯಾಯ

೧೯ನೆಯ ಶತಮಾನದಲ್ಲಿ ಸಂಭವಿಸಿದ ಕ್ರಾಂತಿಕಾರಿ ರಾಜಕೀಯ ಬೆಳವಣಿಗೆಗಳಿಂದಾಗಿ ಯೂರೋಪ್ ಖಂಡದಲ್ಲಿ ಹಲವು ರಾಜಮನೆತನಗಳ ಆಳ್ವಿಕೆ ಕೊನೆಗೊಂಡು ಪ್ರಜಾಪ್ರಭುತ್ವ ವ್ಯವಸ್ಥೆ ಬೇರೂರಿತು. ವಾಲ್ಟೇರ್, ರೂಸೋ ಮುಂತಾದ ಚಿಂತಕರ ಕ್ರಾಂತಿಕಾರಿ ವಿಚಾರಗಳಿಂದ ಹೊಸ ರಾಜಕೀಯ ಮೌಲ್ಯಗಳು ಪ್ರಚುರಗೊಂಡವು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯ ಮತ್ತು ವೈಯಕ್ತಿಕ ರಾಜಕೀಯ ಹಕ್ಕುಗಳು ಹೆಚ್ಚು ಮಹತ್ವವನ್ನು ಪಡೆದುಕೊಂಡವು. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಗೆ ಪೂರಕವಾಗಿ ಪ್ರಜಾಪ್ರಭುತ್ವ ವ್ಯವಸ್ಥೆ ಬೆಳೆದುಬಂದಿತು.

೨೦ನೆಯ ಶತಮಾನದ ಪ್ರಾರಂಭದಲ್ಲಿ ರಷ್ಯಾದ ಸಮಾಜವಾದಿ ಕ್ರಾಂತಿ ಮತ್ತು ಚೀನಾ ದೇಶವು ವಸಾಹತುಶಾಹಿ ವ್ಯವಸ್ಥೆಯ ವಿರುದ್ಧ ಸಾಧಿಸಿದ ಜಯ ಎರಡೂ ಏಷ್ಯಾ ಖಂಡದ ಇತರ ದೇಶಗಳಲ್ಲಿ ಸ್ವಾತಂತ್ರ್ಯ ಹೋರಾಟಗಳು ವ್ಯಾಪಕವಾಗಿ ಪಸರಿಸಲು ಕಾರಣವಾದವು ಮತ್ತು ಸಾಮ್ರಾಜ್ಯವಾದಿ ರಾಷ್ಟ್ರಗಳ ತುಳಿತಕ್ಕೆ ಒಳಗಾಗಿದ್ದ ಭಾರತ ಮತ್ತು ಇತರ ದೇಶಗಳಲ್ಲಿ ಹೊಸ ಸಂಚಲನ ಉಂಟು ಮಾಡಿದವು. ತತ್ಪರಿಣಾಮವಾಗಿ ಸ್ವಾತಂತ್ರ್ಯ ಚಳುವಳಿಗಳು ತೀವ್ರ ಸ್ವರೂಪವನ್ನು ಪಡೆದುಕೊಂಡು ಕ್ರಮೇಣ ಸಾಮ್ರಾಜ್ಯವಾದಿ ಸರ್ಕಾರಗಳು ವಸಾಹತುಶಾಹಿ ಆಳ್ವಿಕೆಯನ್ನು ಅಂತ್ಯಗೊಳಿಸಿ ತಮ್ಮ ಅಧೀನದಲ್ಲಿದ್ದ ದೇಶಗಳನ್ನು ಸ್ಥಳೀಯರಿಗೆ ಬಿಟ್ಟುಕೊಡಬೇಕಾಯಿತು.

ಸಮಾಜವಾದಿ ಕ್ರಾಂತಿಗಳು ಸಾಮಾಜಿಕ ನ್ಯಾಯವೆಂಬ ಮೌಲ್ಯವನ್ನು ಎತ್ತಿಹಿಡಿದವು. ಸ್ವಾತಂತ್ರ್ಯ ಪೂರ್ವದ ಭಾರತೀಯ ಸಮಾಜದಲ್ಲಿ ಊಳಿಗಮಾನ್ಯ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ವ್ಯವಸ್ಥೆಯು ಅತ್ಯಂತ ಅಮಾನುಷ ರೀತಿಯಲ್ಲಿ ಆಚರಣೆಯಲ್ಲಿತ್ತು. ಕೆಲವು ಪಾಶ್ಚಿಮಾತ್ಯ ರಾಜಕೀಯ ಚಳುವಳಿಗಳು ಮತ್ತು ಕ್ರಾಂತಿಕಾರಿ ವಿಚಾರಗಳಿಂದ ಪ್ರಭಾವಿತರಾದ ಸಮಾಜ ಸುಧಾರಕರು ಬಲಿಷ್ಠ ಮೇಲ್ವರ್ಗದ ಜಾತಿಗಳಿಂದ ತುಳಿತಕ್ಕೆ ಒಳಗಾದ ಹರಿಜನ ಮತ್ತು ಇತರ ಜಾತಿಗಳಿಗೆ ಸೇರಿದ ಜನರಲ್ಲಿ ಜಾಗೃತಿ ಮೂಡಿಸಲು ಪ್ರಾರಂಭಿಸಿದರು.

ಮಹಾರಾಷ್ಟ್ರದಲ್ಲಿ ಜ್ಯೋತಿಬಾ ಫುಲೆ ದಲಿತರಿಗಾಗಿ ಶ್ರಮಿಸಿದ ಸಮಾಜ ಸುಧಾರಕರಲ್ಲಿ ಪ್ರಮುಖರು. ಅವರು ದಲಿತರು ಸ್ವಾಭಿಮಾನಕ್ಕಾಗಿ ಹೋರಾಡಬೇಕೆಂದು ಕರೆ ನೀಡಿದರು ಮತ್ತು ದಲಿತರಿಗೆ ಶಿಕ್ಷಣ ಅತ್ಯವಶ್ಯಕವೆಂದು ಮನಗಂಡರು. ದಲಿತರಿಗೆ ಶಿಕ್ಷಣ ನೀಡಲು ಶ್ರಮಿಸಿದರು. ಬಾಬಾಸಾಹೇಬ್ ಅಂಬೇಡ್ಕರ್‌ರವರಿಗೂ ಫುಲೆ ಮಾರ್ಗದರ್ಶಕರಾದರು. ದಕ್ಷಿಣ ಭಾರತದ ತಮಿಳುನಾಡಿನಲ್ಲಿ ದ್ರಾವಿಡ ಕಳಗಂ ಪಕ್ಷವನ್ನು ಹುಟ್ಟುಹಾಕಿ ದಲಿತರು ಮತ್ತು ಶೂದ್ರರಲ್ಲಿ ಸ್ವಾಭಿಮಾನ ಮೂಡಿಸಲು ಕಾರಣರಾದವರು ಇ. ವಿ. ರಾಮಸ್ವಾಮಿ ನಾಯ್ಕರ್‌ರವರು. ಅವರ ನೇತೃತ್ವದಲ್ಲಿ ಬೆಳೆದ ಬ್ರಾಹ್ಮಣ ವಿರೋಧಿ ಚಳುವಳಿ ಜಾತಿ ವ್ಯವಸ್ಥೆಗೆ ಬಲವಾದ ಪೆಟ್ಟು ಕೊಟ್ಟಿತು.

ಕ್ರಮೇಣ, ಚಳುವಳಿಯು ತೀವ್ರ ಸ್ವರೂಪವನ್ನು ಪಡೆದು

ಸಾರ್ವಜನಿಕ ಸಹಾನುಭೂತಿಯನ್ನು ಕಳೆದುಕೊಂಡಿತು. ಅಂತೆಯೇ ಕೇರಳದಲ್ಲಿ ನಾರಾಯಣಗುರುಗಳು ಅಂತ್ಯಜರ ಉದ್ಧಾರಕ್ಕಾಗಿ ಹಲವು ಸಂಸ್ಥೆಗಳನ್ನು ಪ್ರಾರಂಭಿಸಿ ಶ್ರಮಿಸಿದರು. ಅವರ ಸಾಲಿನಲ್ಲಿಯೇ ಇತ್ತೀಚೆಗೆ ನಿಧನರಾದ ಕಾನ್ಶಿರಾಂ ಅವರನ್ನು ಗುರುತಿಸಬಹುದು. ಪ್ರಾರಂಭದಲ್ಲಿ ದಲಿತರಿಗೆ ಸಾಮಾಜಿಕ ನ್ಯಾಯ ಮತ್ತು ರಾಜಕೀಯ ಅಧಿಕಾರ ದೊರಕಿಸುವ ಉದ್ದೇಶದಿಂದ ಬಹುಜನ ಸಮಾಜ ಪಕ್ಷವನ್ನು ಹುಟ್ಟುಹಾಕಿದರು. ಕ್ರಮೇಣ ಹಲವು ರಾಜಕೀಯ ಹೊಂದಾಣಿಕೆಗಳನ್ನು ಮಾಡಿಕೊಂಡು ಪಕ್ಷ ಮುಖ್ಯ ಉದ್ದೇಶ ದಿಂದ ಹಿಂದೆಸರಿಯಿತು. ಇಂದು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾವಣೆಯು ಒಂದು ಮುಖ್ಯ ರಾಜಕೀಯ ಪ್ರಕ್ರಿಯೆಯಾಗಿದೆ. ರಾಜಕೀಯ ಅಧಿಕಾರವು ಒಂದು ರಾಜಕೀಯ ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಅಥವಾ ಒಂದು ಒಕ್ಕೂಟದಿಂದ ಮತ್ತೊಂದಕ್ಕೆ ಚುನಾವಣೆಯ ಮೂಲಕವೇ ಹಸ್ತಾಂತರಿಸಲ್ಪಡುತ್ತದೆ. ನಿರ್ದಿಷ್ಟ ಅವಧಿಗೊಮ್ಮೆ ನಡೆಯುವ ಚುನಾವಣೆಯು ಯಾವುದೋ ಒಂದು ರಾಜಕೀಯ ಪಕ್ಷವನ್ನೋ ಅಥವಾ ಒಕ್ಕೂಟವನ್ನೋ ಗದ್ದುಗೆಗೇರಿಸುತ್ತದೆ. ಅವಧಿಗೆ ಮುನ್ನವೇ ಹಲವು ಬಾರಿ ಸರ್ಕಾರಗಳು ಪತನಗೊಳ್ಳುವುದೂ ಉಂಟು.

ನಾವು ಗಮನಿಸಬೇಕಾದ ಸತ್ಯಾಂಶವೆಂದರೆ ಚುನಾವಣಾ ರಾಜಕೀಯ ಚೌಕಟ್ಟಿನಲ್ಲಿ ಶಿಕ್ಷಣ ಹಾಗೂ ಉದ್ಯೋಗದಿಂದ ವಂಚಿತರಾದ ದಲಿತರು ಅವಕಾಶವಾದಿ ರಾಜಕೀಯ ಪಕ್ಷಗಳ ಹುನ್ನಾರಗಳಿಗೆ ಬಲಿಯಾಗುತ್ತಿದ್ದಾರೆ. ದಲಿತ ಸಮುದಾಯ ದಿಂದ ಆರಿಸಿಬಂದ ದಲಿತ ರಾಜಕೀಯ ನಾಯಕರು ಬಲಿತು ಭ್ರಷ್ಟರಾಗಿ ಶ್ರೀಮಂತಿಕೆಯನ್ನು ಮೆರೆಯುತ್ತಿದ್ದಾರೆ. ಮತ ಚಲಾಯಿಸಿದ ದಲಿತರು, ಕಡುಬಡವರು ಬಡತನದಲ್ಲೇ ನಿಶ್ಚೇಶ್ಟಿತರಾಗಿದ್ದಾರೆ.

ಇಂದು ಸಾಮಾಜಿಕ ನ್ಯಾಯಕ್ಕೆ ಪರ್ಯಾಯ ಪದ ಮೀಸಲಾತಿ ಪದ್ಧತಿಯಲ್ಲಿ ಲಭಿಸುವ ಸೌಲಭ್ಯಗಳೆಂದಾಗಿದೆ. ಮೀಸಲಾತಿಯ ಸೌಲಭ್ಯಗಳನ್ನು ಪಡೆದು ಆರ್ಥಿಕ ಮತ್ತು ಸಾಮಾಜಿಕವಾಗಿ ಮೇಲೇರಿದವರಿಗೆ ತಮ್ಮವರ ನೋವು ಸಂಕಷ್ಟಗಳು ಮುಖ್ಯವಾಗುವುದಿಲ್ಲ. ಕ್ರಮೇಣ ಹಿಂದುಳಿದ ಬಂಧುಗಳಿಂದ ದೂರ ಸರಿಯುತ್ತಾರೆ. ಸಮಾನತೆಯನ್ನು ಸಾಧಿಸುವ ಮತ್ತು ಸಾಮಾಜಿಕ ನ್ಯಾಯ ವಿತರಣೆಯನ್ನು ಮಾಡುವ ಉದ್ದೇಶದಿಂದ ಅನುಷ್ಠಾನಗೊಂಡ ಮೀಸಲಾತಿ ಪದ್ಧತಿ ವಾದವಿವಾದಗಳಿಗೆ ಗ್ರಾಸವಾಗಿದೆ. ಮೀಸಲಾತಿಯು ಸದ್ಬಳಕೆಯಾಗುತ್ತಿದೆಯೇ ಅಥವಾ ದುರ್ಬಳಕೆಯಾಗು ತ್ತಿದೆಯೇ ಎಂಬುದು ಮತ್ತೊಂದು ಸುದೀರ್ಘ ಚರ್ಚೆಗೆ ವಿಷಯವಾಗುತ್ತದೆ.

ದಲಿತ ಸಂಘಟನೆಗಳು ಕೂಡ ಇಂದು ಹರಿದು ಹಂಚಿ ಹೋಗಿ ದಲಿತ ನಾಯಕರ ಪ್ರತಿಷ್ಠೆ ಮತ್ತು ವೈಯಕ್ತಿಕ ಆಕಾಂಕ್ಷೆ ಗಳಿಗೆ ಬಲಿಯಾಗಿವೆ. ಪ್ರಸ್ತುತ ರಾಜಕೀಯ ಪರಿಸ್ಥಿತಿಯಲ್ಲಿ ಈ ಚುನಾವಣಾ ರಾಜಕೀಯ ಚೌಕಟ್ಟಿನಲ್ಲಿ ದಲಿತರಿಗೆ ಮತ್ತೆ ಸಾಮಾಜಿಕ ನ್ಯಾಯ ಮರೀಚಿಕೆಯಾಗಿ ಉಳಿಯುವ ಸಾಧ್ಯತೆಯೇ ಹೆಚ್ಚು. ಹಲವು ಜಾತಿಯ ಸಂಘಟನೆಗಳು ತಮ್ಮ ಜಾತಿಯನ್ನು ಹಿಂದುಳಿದ ಜಾತಿಗಳ ಪಟ್ಟಿಗೆ ಸೇರಿಸಬೇಕೆಂದು ಮತ್ತಷ್ಟು ಗೊಂದಲವನ್ನು ಸೃಷ್ಟಿಸಿವೆ.

ಚಿಕ್ಕಲ್ಲಸಂದ್ರ, ಬೆಂಗಳೂರು-೬೧ ***ಶಂಕರನಾರಾಯಣ***

### ಡೊಂಕು ಬಾಲದ ನಾಯಕರೇ, ನೀವೇನೂಟವ ಮಾಡಿದಿರಿ ?

ಕಳೆದ ಕೆಲ ವಾರಗಳಲ್ಲಿ ರಾಜ್ಯದ ಎಲ್ಲೆಡೆಗಳಿಂದ ಬೀದಿ ನಾಯಿಗಳ ರಾಕ್ಷಸೀ ವರ್ತನೆಯ ವರದಿಗಳು ಸಮಸ್ತ ನಾಗರಿಕರೂ ಬೆಚ್ಚಿಬೀಳುವಂತೆ ಮಾಡಿವೆ. ಬೆಂಗಳೂರು ಮಹಾನಗರಿಯಲ್ಲಿ ತಮ್ಮ ಮನೆಯ ವಠಾರದಲ್ಲಿ ಆಟ ಆಡುತ್ತಿದ್ದ ಇಬ್ಬರು ಮಕ್ಕಳನ್ನು ಬೀದಿ ನಾಯಿಗಳು ಕಚ್ಚಿ ಕೊಂದರೆ, ಮೈಸೂರು, ಶಿವಮೊಗ್ಗ ಮುಂತಾದೆಡೆಗಳಲ್ಲಿ ಮಕ್ಕಳಾದಿಯಾಗಿ ದಾರಿಯಲ್ಲಿ ಹೋಗುತ್ತಿದ್ದವರ ಮೇಲೆ ದಾಳಿ ಮಾಡಿದವು. ಈ ಘಟನೆಗಳಿಂದಾಗಿ ಬೀದಿ ನಾಯಿಗಳ ಸಮಸ್ಯೆಯು ಒಮ್ಮಿಂದೊಮ್ಮೆಗೇ ಭೂತಾಕಾರದಲ್ಲಿ ಗೋಚರಿಸತೊಡಗಿದೆ. ಆದರೆ ಬೀದಿನಾಯಿಗಳನ್ನು ನಿರ್ಮೂಲನೆ ಮಾಡುವಲ್ಲಿ ಸ್ಥಳೀಯಾಡಳಿತಗಳು ಕೂಡಲೆ ಕಾರ್ಯಪ್ರವೃತ್ತವಾಗುತ್ತವೆಯೆಂದು ಜನಸಾಮಾನ್ಯರು ಹೊಂದಿದ್ದ ಆಸೆಗಳು ನಿಧಾನವಾಗಿ ಕರಗಲಾರಂಭಿಸಿವೆ. ಮಕ್ಕಳ ಮೇಲೆ ಅತ್ಯಾಚಾರ ಮಾಡಿಕೊಂಡು ಅವರ ದೇಹ ಗಳನ್ನು ಚರಂಡಿಗೆ ಎಸೆದವರ ಬಗ್ಗೆ ಕಾನೂನು ಪಾಲಕರು ಮೃದುವಾಗಿದ್ದಾರೆಂಬ ವರದಿಗಳು ದೇಶದ ರಾಜಧಾನಿಯಿಂದ ಬಂದರೆ, ಶಿಶು ಹಂತಕ ನಾಯಿಗಳನ್ನು ಕೊಲ್ಲುವುದಕ್ಕೆ ಕಾನೂನಿನ ಅಡಚಣೆಯಿದೆಯೆಂದು ಸರಕಾರವು ಹಿಂದೇಟು ಹಾಕುತ್ತಿರುವುದು ನಮ್ಮ ರಾಜ್ಯದ ರಾಜಧಾನಿಯಲ್ಲಿ ವ್ಯಕ್ತವಾಗುತ್ತಿದೆ. ಒಟ್ಟಿನಲ್ಲಿ, ನಮ್ಮ ದೇಶದಲ್ಲಿ ಮುಗ್ಧ ಮಕ್ಕಳ ಜೀವಕ್ಕೆ ಬೆಲೆಯೇ ಇಲ್ಲದಂತೆ ತೋರುತ್ತಿದೆ. ನಿಠಾರಿಯಲ್ಲಿ ಕೊಲ್ಲಲ್ಪಟ್ಟು ಚರಂಡಿ ಸೇರಿದ ಮಕ್ಕಳೂ ಬೆಂಗಳೂರಿನ ಬೀದಿಗಳಲ್ಲಿ ನಾಯಿಗಳ ಬಾಯಿಗೆ ಸಿಕ್ಕಿ ಜೀವ ತೆತ್ತ ಮಕ್ಕಳೂ ತೀರಾ ಸಾಮಾನ್ಯ ಜನವರ್ಗಕ್ಕೆ ಸೇರಿದವರೆನ್ನುವುದೂ, ಯಾವುದೇ ಮಂತ್ರಿ ಮಾಗಧರ ಮಕ್ಕಳಾಗಲಿ ಜಾಗತೀಕರಣ ದಿಂದ ಸಿರಿವಂತರಾದವರ ಮಕ್ಕಳಾಗಲಿ ಈ ರೀತಿಯಾಗಿ ಪ್ರಾಣ ಕಳೆದುಕೊಂಡಿಲ್ಲವೆನ್ನುವುದೂ, ಬೀದಿನಾಯಿಗಳ 'ರಕ್ಷಣೆ'ಗೆ ಕಟಿಬದ್ಧರಾಗಿರುವ ಪ್ರಾಣಿ ದಯಾಸಂಘಗಳಲ್ಲಿ ಬಡವರಾರೂ ಇಲ್ಲವೆನ್ನುವುದೂ ಕೇವಲ ಕಾಕತಾಳೀಯ ವಾಗಿರಲಾರದು.

ಭಾರತದಲ್ಲಿರುವಷ್ಟು ಬೀದಿನಾಯಿಗಳು ಜಗತ್ತಿನಲ್ಲೇ ಎಲ್ಲೂ ಇಲ್ಲವೇನೋ! ನಮ್ಮ ದೇಶದಲ್ಲಿ ಎರಡೂವರೆ ಕೋಟಿಗೂ ಮಿಕ್ಕಿ ಬೀದಿನಾಯಿಗಳಿವೆಯೆಂದು ಅಂದಾಜು. ಅದಕ್ಕೆ ಸರಿಯಾಗಿ, ನಮ್ಮ ದೇಶದಲ್ಲಿ ವರ್ಷವೊಂದಕ್ಕೆ ೨೦೦೦೦ಕ್ಕೂ ಹೆಚ್ಚು ಜನರು ಹುಚ್ಚುನಾಯಿ ಕಡಿತದಿಂದ ಉಂಟಾಗುವ ರೇಬೀಸ್ ರೋಗದಿಂದಾಗಿ ಸಾವನ್ನಪ್ಪುತ್ತಿದ್ದಾರೆ. ಇದು ಜಗತ್ತಿನೆಲ್ಲೆಡೆಯಿಂದ ವರದಿಯಾಗುವ ರೇಬೀಸ್ ಪ್ರಕರಣಗಳ ಶೇ. ೮೦ರಷ್ಟಾಯಿತು. ಇಷ್ಟೆಲ್ಲಾ ಇದ್ದರೂ ನಾವೇಕೆ ಈ ನಾಯಿಗಳ ಬಗ್ಗೆ ಮೃದುವಾಗಿದ್ದೇವೆ ?

ಬೆಂಗಳೂರಿನ ಅನಾಹುತದ ನಂತರ, ಸಾರ್ವಜನಿಕರ ಆರೋಗ್ಯ ಪಾಲನೆಯನ್ನು ಮಾಡಬೇಕಾದ ಆಡಳಿತವೂ, ಬೀದಿ ನಾಯಿಗಳನ್ನು ನಿರ್ಮೂಲನೆ ಮಾಡಗೊಡದ ಪ್ರಾಣಿ ದಯಾ ಸಂಘಟನೆಗಳವರೂ ಜನರೆದುರು ಉತ್ತರಿಸಬೇಕಾಗಿ ಬಂದಿದೆ. ಭಾರತದಲ್ಲಿ ಬೀದಿನಾಯಿಗಳನ್ನು ಕೊಲ್ಲಬಾರ ದೆಂಬ ಕಾನೂನಿದೆಯೆಂದು ನಮ್ಮ ರಾಜ್ಯದ ಸಚಿವರುಗಳೂ, ಅಧಿಕಾರಿಗಳೂ ಹಪಹಪಿಸುತ್ತಿರುವುದು ಈಗಾಗಲೆ ವರದಿ ಯಾಗಿದೆ. ಈ ಕಾನೂನಿನಿಂದ ಬಿಡುಗಡೆ ಹೇಗೆಂದು ಅರಿಯಲು ದಿಲ್ಲಿಗೂ ಪತ್ರ ಬರೆಯಲಾಗಿದೆಯಂತೆ. ಇನ್ನೊಂದೆಡೆ ಪ್ರಾಣಿ (ಬೀದಿನಾಯಿ) ಹತ್ಯೆ ಮಾಡಲೇ ಬಾರದು, ಅದು ಕಾನೂನು ಪ್ರಕಾರವೂ ನಿಷಿದ್ಧವಾಗಿದೆ ಯೆಂದು ಪ್ರಾಣಿದಯಾ ಸಂಘಟನೆಗಳವರು ಘಂಟಾ ಘೋಷವಾಗಿ ಹೇಳುತ್ತಿದ್ದಾರೆ. ಬೀದಿನಾಯಿಗಳನ್ನು ನಿಯಂತ್ರಿಸಲು ತಮ್ಮ ಉಸ್ತುವಾರಿಯಲ್ಲಿ ಅವುಗಳಿಗೆ ಸಂತಾನ ಹರಣ ಚಿಕಿತ್ಸೆಯನ್ನು ನಡೆಸುವುದೊಂದೇ ಉಪಾಯ ವಾಗಿದೆಯೆಂದು ಪ್ರಾಣಿದಯಾ ಸಂಘಟನೆಗಳವರು ಹೇಳಿ ಕೊಳ್ಳುತ್ತಿದ್ದಾರೆ. ಬೀದಿನಾಯಿಗಳನ್ನು ಕೊಲ್ಲುವುದಿರಲಿ, ಅವುಗಳಿಗೆ ಸಂತಾನಹರಣ ಚಿಕಿತ್ಸೆ ಮಾಡಬೇಕಿದ್ದರೂ ದಯಾಮಯವಾಗಿ, ನೋವಾಗದಂತೆ ಮಾಡಬೇಕೆಂಬ ನಿಯಮಗಳಿವೆ. ಈ ಮಹಾನ್ ದೇಶದ ಕಾನೂನೇ ಬೀದಿ ನಾಯಿಗಳಿಗೆ ಹೀಗೆ ರಕ್ಷಣೆಯನ್ನು ಒದಗಿಸಿರುವಾಗ ಯಾರೇನು ಮಾಡಲು ಸಾಧ್ಯ ಎನ್ನುವುದು ಇವರೆಲ್ಲರ ಅಂಬೋಣ.

ಹಾಗಾದರೆ ಪ್ರಾಣಿದಯಾ ಸಂಘಟನೆಗಳವರು ಬೀದಿ ನಾಯಿಗಳಿಗೆ ಸಂತಾನಹರಣ ಚಿಕಿತ್ಸೆಯನ್ನು ನಡೆಸುತ್ತಿ ದ್ದಾರೆಯೆ ? ಕಳೆದ ಒಂದು ವರ್ಷದಲ್ಲೇ ಸುಮಾರು ೫೦,೦೦೦ ಬೀದಿನಾಯಿಗಳನ್ನು ಸಂತಾನಹರಣ ಚಿಕಿತ್ಸೆಗೊಳ ಪಡಿಸಲು ಸರಕಾರವು ಪ್ರಾಣಿದಯಾ ಸಂಘಟನೆಗಳಿಗೆ ರೂ. ೧.೫ ಕೋಟಿಯಷ್ಟನ್ನು ನೀಡಿದ್ದು, ಈ ಕೆಲಸವು ಅಪೇಕ್ಷೆಯಂತೆ ನಡೆದಿಲ್ಲವೆಂದೂ, ಆ ಬಗ್ಗೆ ಉನ್ನತ ತನಿಖೆಯು ನಡೆಯು ತ್ತಿದೆಯೆಂದೂ ಮಾನ್ಯ ಆರೋಗ್ಯ ಸಚಿವರು ಹೇಳಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. ಬೀದಿನಾಯಿಗಳನ್ನು ನಿಯಂತ್ರಿಸುವಲ್ಲಿ ತಾವು ಎಲ್ಲಾ ಪ್ರಯತ್ನಗಳನ್ನು ಮಾಡಿದ್ದೇವೆ, ಅವುಗಳ ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಮಾಡಿ ಅವುಗಳನ್ನು 'ಎಲ್ಲಿಂದ ಹಿಡಿದೆವೋ, ಅಲ್ಲೇ ಪ್ರೀತಿಯಿಂದ ಮತ್ತೆ ಬಿಟ್ಟಿದ್ದೇವೆ' ಎಂದು ಪ್ರಾಣಿ ದಯಾಸಂಘಟನೆ ಗಳವರು ಹೇಳುತ್ತಿದ್ದಾರೆ. ಆದರೆ ಬೀದಿ ನಾಯಿಗಳ

ಇತ್ತೀಚೆಗಷ್ಟೇ ನಿಧನರಾದ ಪೂರ್ಣಚಂದ್ರ ತೇಜಸ್ವಿಯವರೊಡನೆ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸಂಬಂಧವು ವ್ಯವಹಾರಕ್ಕೆ ಮೀರಿದ ಸುಮಧುರ ಬಾಂಧವ್ಯವಾಗಿತ್ತು. ನಮ್ಮ ಪ್ರಕಟಣೆ ಗಳನ್ನು ಪುಸ್ತಕ ಪ್ರದರ್ಶನಗಳನ್ನು ಬಹುವಾಗಿ ಮೆಚ್ಚಿ ಕೊಂಡಿದ್ದರು. ನಮ್ಮ ಬಗ್ಗೆ ಅವಕಾಶವಾದಾಗಲೆಲ್ಲಾ ಸಾರ್ವಜನಿಕವಾಗಿ ಪ್ರೋತ್ಸಾಹದ ಮಾತನಾಡು ತ್ತಿದ್ದರು. ಯಾವುದೇ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದೆಂದರೆ ಅವರಿಗೆ ಕಿರಿಕಿರಿಯಾಗುತ್ತಿದ್ದು, ನಾವು ೨೦೦೨ರಲ್ಲಿ ಚಿಕ್ಕಮಗಳೂರಿನ ಮಿತ್ರರ ಸಹಾಯದಿಂದ 'ಸಾಹಿತ್ಯ ಸಂಪದ' ಮಾಲೆಯ ಎರಡನೇ ಕಂತಿನ ಪುಸ್ತಕಗಳನ್ನು ಬಿಡುಗಡೆ ಕಾರ್ಯಕ್ರಮಕ್ಕೆ ಆಹ್ವಾನಿಸಿದಾಗ ಅವರು ಬಹಳ ಸಂತೋಷ ಸಂಭ್ರಮದಿಂದ ಭಾಗವಹಿಸಿದ್ದರು. ಈ ವಿಶಿಷ್ಟ ಸಂಬಂಧದಲ್ಲಿ ಅವರ ಪುಸ್ತಕ ಪ್ರಕಾಶನದ ಪ್ರಕಟಣೆಗಳನ್ನು ನವಕರ್ನಾಟಕ ಬಹುಹೆಚ್ಚು ಸಂಖ್ಯೆಯಲ್ಲಿ ಮಾರಾಟ ಮಾಡಿದೆವು ಎಂಬುದು ಪ್ರಾಸಂಗಿಕವಷ್ಟೆ. ನವಕರ್ನಾಟಕದ ಬಗ್ಗೆ ಮೆಚ್ಚುಗೆಗೆ ಸಭೆಯೊಂದರಲ್ಲಿ ಕಾರಣವನ್ನು ಹೇಳುತ್ತಾ ಸಾಹಿತ್ಯದ ಪ್ರತಿಯೊಂದು ಪ್ರಕಾರದ ಪುಸ್ತಕಗಳನ್ನು ಪ್ರಕಟಿಸಿ, ಸಾಹಿತ್ಯದ ಜೊತೆಗೆ ಶಿಕ್ಷಣ, ವಿಜ್ಞಾನ, ಆರೋಗ್ಯ ಹಾಗೂ ಮಕ್ಕಳ ಪುಸ್ತಕಗಳನ್ನು ಪ್ರಕಟಿಸುತ್ತಾ ನುಡಿಸೇವೆಯಲ್ಲಿ ತೊಡಗಿದ್ದಾರೆ ಎಂದು ಹೇಳಿ ನಮ್ಮನ್ನು ಆಭಾರಿಯಾಗಿಸಿದ್ದರು. ನಮ್ಮ ಸಂಸ್ಥೆ ಇವರ ಅಗಲಿಕೆಯಿಂದ ಒಬ್ಬ ಸನ್ಮಿತ್ರರನ್ನು ಕಳೆದುಕೊಂಡಿದೆ. ನಾವು ಅವರ ನೆನಪಿಗೆ ತಲೆಬಾಗುತ್ತೇವೆ.

***– ನವಕರ್ನಾಟಕ ಪ್ರಕಾಶನ***

ಸಂಖ್ಯೆಯೇನೂ ಕಡಿಮೆಯಾಗಿಲ್ಲವಲ್ಲ! ಇಲ್ಲ, ಅದೇಕೆಂದರೆ ನವಜಾತ ಹೆಣ್ಣು ನಾಯಿಮರಿಗಳನ್ನು ನಾಗರಿಕರು ಬೀದಿಗೆ ಬಿಡುತ್ತಿದ್ದಾರಂತೆ ಮತ್ತು ಆ ಹೆಣ್ಣು ನಾಯಿಗಳು ಇನ್ನಷ್ಟು ಮರಿಗಳನ್ನು ಹಾಕುತ್ತಿವೆಯಂತೆ. ಅರೆ! ಬೀದಿನಾಯಿಗಳಿಗೆಲ್ಲ ಸರಕಾರಿ ಖರ್ಚಿನಲ್ಲಿ ಸಂತಾನಹರಣವಾದ ನಂತರವೂ, ಈ ಹೊಸ ಹೆಣ್ಣು ಮರಿಗಳು ಅದೆಂತು ಬಸುರಾಗುತ್ತವೆ ಎನ್ನುವುದು ಸೋಜಿಗವೇ! ಏನೇ ಇರಲಿ, ಈ ಮತ್ತೆ ಬಿಡಲ್ಪಟ್ಟ, ಹೊಸದಾಗಿ ಸೇರಲ್ಪಟ್ಟ ಮತ್ತು ಅವುಗಳಿಂದ ಹುಟ್ಟಲ್ಪಟ್ಟ ನಾಯಿಗಳು ಎಲ್ಲ ಒಟ್ಟು ಸೇರಿ ಏನಿಲ್ಲವೆಂದರೂ ಸರಾಸರಿ ಹತ್ತು ವರ್ಷಗಳ ಕಾಲ ಬಾಳುತ್ತವೆ. ದಾರಿಯಲ್ಲಿ ನಾವೆಲ್ಲರೂ 'ಸರಕಾರವು ಸ್ವಚ್ಛ ಮಾಡಿಕೊಳ್ಳಲಿ' ಎಂದು ಪ್ರೀತಿಯಿಂದ ಹೊರಗೆಸೆದ ತಿನಿಸುಗಳನ್ನು ತಿಂದು ಕೊಬ್ಬುತ್ತವೆ. ಇಂತಹ ನಾಯಿಗಳು ಹಸಿವಾದಾಗ ನಮ್ಮ ಮೇಲೆ, ಅದರಲ್ಲೂ ಮುಗ್ಧ ಮಕ್ಕಳ ಮೇಲೆ ಬಂದೆರಗಿದರೆ ಅದಕ್ಕೇನು ಮಾಡೋಣ? ಅವುಗಳು ಮನುಷ್ಯರನ್ನು ಕಚ್ಚದಂತೆ, ಮಕ್ಕಳನ್ನು ಹರಿದುಕೊಲ್ಲದಂತೆ ತರಬೇತಿ ನೀಡೋಣವೆಂದರೆ ಪ್ರಾಣಿದಯಾ ಸಂಘಟನೆಗಳಿಗೆ ಇನ್ನಷ್ಟು ಹಣವನ್ನು ನೀಡಬೇಕಾಗಬಹುದು. ರೇಬೀಸ್ ಹರಡದಂತೆ ಈ ಎಲ್ಲಾ ನಾಯಿಗಳಿಗೂ ಪ್ರತಿವರ್ಷ ಲಸಿಕೆಯನ್ನೂ ಹಾಕಿಸಬೇಕು, ಅದಕ್ಕೂ ಖರ್ಚಿದೆ, ಛೇ, ಎಂತಹ ಪೀಕಲಾಟವಿದು!

ಇನ್ನು ನಮ್ಮ ಮಕ್ಕಳ ಪಾಡು ನೋಡಿ. ನಗರ ಪ್ರದೇಶಗಳಲ್ಲಿ ಬೆಳೆಯುತ್ತಿರುವ ಮಕ್ಕಳಲ್ಲಿ ಬೊಜ್ಜು, ಮಧುಮೇಹ ಇವೇ ಮುಂತಾದ ತೊಂದರೆಗಳು ಇತ್ತೀಚಿನ ವರ್ಷಗಳಲ್ಲಿ ವಿಪರೀತವಾಗಿ ಹೆಚ್ಚುತ್ತಿರುವುದು ಕಳವಳಕಾರಿಯಾಗಿದೆ. ಮಕ್ಕಳು ಆರೋಗ್ಯವಂತರಾಗಿ ಬೆಳೆಯಬೇಕಾದರೆ ಕನಿಷ್ಠ ದಿನಕ್ಕೊಂದು ಗಂಟೆಯಾದರೂ ಆಟವಾಡಲೇಬೇಕು ಮತ್ತು ಆಟವಾಡುತ್ತಾ ಬೆಳೆಯುವುದು ಮಕ್ಕಳಿಗೆ ಸಹಜವಾದ ಗುಣ ನಡತೆಯಾಗಿದೆ. ಆದರೆ ನಗರ ಪ್ರದೇಶಗಳಲ್ಲಿ ಸ್ಥಳದ ಸಮಸ್ಯೆಯಿಂದಾಗಿ ಮಕ್ಕಳು ತಮಗೆ ಸಿಕ್ಕಿದ ಕಿರಿದಾದ ಜಾಗಗಳಲ್ಲೇ ಆಟವಾಡಲು ಹೋಗುತ್ತಾರೆ ಮತ್ತು ಹೋಗಲೇಬೇಕು. ಆದರೀಗ ಮನೆಯಿಂದ ಹೊರಗೆ ಕಾಲಿಟ್ಟರೆ ನಾಯಿಗಳು ಹರಿದುಕೊಂದುಬಿಟ್ಟಾವೆಂಬ ಹೆದರಿಕೆಯಿಂದಾಗಿ, ಮಕ್ಕಳು ಆಟವಾಡುವುದನ್ನೇ ನಿಲ್ಲಿಸಬೇಕಾದೀತೇನೋ? ನಮ್ಮ ಘನ ಸರಕಾರದ ಅಪ್ಪಣೆಯೂ ಹಾಗೇ ಇದೆ: ಮಕ್ಕಳು ಬೀದಿ ನಾಯಿಗಳ ಬಳಿ ಹೋಗದಂತೆ ಹೆತ್ತವರು ನೋಡಿಕೊಳ್ಳಬೇಕೆಂದು ಈಗಾಗಲೆ ಸರಕಾರೀ ಜಾಹೀರಾತುಗಳು ಪ್ರಕಟವಾಗಿವೆ. ಭಲೇ! ಬೀದಿನಾಯಿಗಳ ನಿಯಂತ್ರಣಕ್ಕೆ ಕೊಟ್ಟ ಹಣಕ್ಕೇನಾಯಿತು ಎಂದು ತನಿಖೆ ಮಾಡಲಿಕ್ಕೊಂದು ಆಯೋಗ, ಮಕ್ಕಳನ್ನೆಲ್ಲ ಮನೆಯೊಳಗೆ ಕಟ್ಟಿಹಾಕಿರೆಂದು ಹೆತ್ತವರಿಗೆ ಅಪ್ಪಣೆ! ಬೀದಿನಾಯಿಗಳನ್ನು ನಿಯಂತ್ರಿಸಲಿಕ್ಕಾಗದೆ ರಸ್ತೆಗಳಲ್ಲೆಲ್ಲ ಅವುಗಳು ನಿರಾಯಾಸವಾಗಿ ಸುತ್ತಬಹುದು; ಯಾರನ್ನೂ ಕಚ್ಚಬಹುದು, ಕಚ್ಚಿಸಿಕೊಂಡರೆ ಅದು ಕಚ್ಚಿಸಿಕೊಂಡವನ ಅಪರಾಧವೇ ಸರಿ! ಇನ್ನು ನಮ್ಮ ಮಕ್ಕಳು ಮನೆಯಿಂದ ಹೊರಗಿಳಿದು ಆಟವಾಡುವಂತೆ, ಬೀದಿಹೋಕರು ದಾರಿಯಲ್ಲಿ ಸುರಕ್ಷಿತವಾಗಿ ನಡೆದಾಡುವಂತೆ ಅವಕಾಶವನ್ನೊದಗಿಸಲು ಈ ಸರಕಾರಕ್ಕೆ ಸಾಧ್ಯವಿಲ್ಲವೆಂದಾಯಿತು. ಮಕ್ಕಳ ಬೆಳವಣಿಗೆಗೆ ತೊಂದರೆಯಾಗಿ ಬೊಜ್ಜು ಇತ್ಯಾದಿ ಬಂದರೇನಂತೆ? ಮನುಷ್ಯನೊಬ್ಬ ಕೊಲೆ ಮಾಡಿದರೆ ಮರಣದಂಡನೆಗೀಡಾಗಬಹುದು, ಆದರೆ ನಮ್ಮ ಬೀದಿ ನಾಯಿಗಳು ಅಂತಹ ಭಯವಿಲ್ಲದೆ ಯಾರನ್ನೇ ಕಚ್ಚಿ ಕೊಲ್ಲಬಹುದು! ಏಕೆಂದರೆ ನಮ್ಮ ದೇಶದ ಕಾನೂನೇ ಹಾಗಿದೆ!

> ಕನ್ನಡ ನಾಡಿನ ಲೇಖಕ, ಲೇಖಕಿಯರ ಪರಿಚಯಾತ್ಮಕ ಗ್ರಂಥವನ್ನು ಹೊರತರಲು ಸಿದ್ಧತೆ ನಡೆದಿದೆ. ರಾಜ್ಯಾದ್ಯಂತ ಇರುವ ಲೇಖಕ, ಲೇಖಕಿಯರು ತಮ್ಮ ವೈಯಕ್ತಿಕ ವಿವರ, ಪ್ರಕಟಿತ ಕೃತಿಗಳ ವಿವರ, ಸಂದ ಪ್ರಶಸ್ತಿಗಳ ಮಾಹಿತಿಯನ್ನು ೨ ಭಾವಚಿತ್ರಗಳೊಂದಿಗೆ ಕಳುಹಿಸಬಹುದು.
>
> *ವಿಳಾಸ : ಬಿ. ಬಸವರಾಜು, ಯುವಶಕ್ತಿ ಪ್ರಕಾಶನ, ನಂ. ೭೬೭, ೨ನೇ ಕ್ರಾಸ್, ಪಾಪಾರಾಂ ರಸ್ತೆ, ನಜರಾಬಾದ್, ಮೈಸೂರು - ೫೭೦ ೦೧೦*

ಹೌದೇ? ನಮ್ಮ ಈ ಮಹಾನ್ ದೇಶದ ಕಾನೂನು ಅಷ್ಟೊಂದು ಹೃದಯಹೀನವೆ? ಬೀದಿನಾಯಿಗಳಿಗೆ ನಮ್ಮ ಕಾನೂನಿನಲ್ಲಿ ಅಷ್ಟೊಂದು ರಕ್ಷಣೆಯಿದೆಯೆ?

೧. ಈ ದೇಶದ ಪ್ರತಿಯೋರ್ವ ನಾಗರಿಕನಿಗೂ, ಮಕ್ಕಳಿಗೂ ಸಹ, ಜೀವಿಸುವ ಮೂಲಭೂತವಾದ ಹಕ್ಕು ಇದೆಯೆಂದು ಸಂವಿಧಾನದ ೨೧ನೇ ವಿಧಿಯಲ್ಲಿ ಹೇಳಲಾಗಿದೆ.

೨. ಕರ್ನಾಟಕ ನಗರಸಭೆಗಳ ಕಾಯಿದೆ ೧೯೬೪ (೧೯೯೫ರಲ್ಲಿ ಪರಿಷ್ಕೃತ)ರ ಭಾಗ ೮೭(ಪಿ)ಯ ಪ್ರಕಾರ ನಗರಸಭೆಯ ವ್ಯಾಪ್ತಿಯೊಳಗೆ ನಾಯಿಗಳನ್ನು ನಿರ್ಮೂಲನೆ ಮಾಡುವ ಅಥವಾ ಕೂಡಿಡುವುದಕ್ಕೆ ಬೇಕಾದ ಸಂಪನ್ಮೂಲಗಳನ್ನು ಒದಗಿಸುವುದು ನಗರಸಭೆಗಳ ಆದ್ಯ ಕರ್ತವ್ಯವಾಗಿದೆ.

೩. ಇದೇ ಕಾಯಿದೆಯ ಭಾಗ ೨೨೨(೧) ಮತ್ತು (೨)ರ ಪ್ರಕಾರ, ವಾರಸುದಾರರಿಲ್ಲದೆ ತಿರುಗಾಡುತ್ತಿರುವ ನಾಯಿಗಳನ್ನು ಹಿಡಿದು ನಿರ್ಮೂಲನೆ ಮಾಡಬೇಕು.

೪. ಸಾರ್ವಜನಿಕವಾಗಿ ತೊಂದರೆಯುಂಟುಮಾಡುವ ಯಾವುದೇ ಪ್ರಾಣಿಗಳನ್ನು, ಬೀದಿನಾಯಿಗಳು ಮತ್ತು ವಾರಸುದಾರರಿಲ್ಲದ ನಾಯಿಗಳನ್ನೂ ಸಹ ಕೂಡಿಡುವುದು ಅಥವಾ ಕೊಲ್ಲುವುದು ನಗರಾಡಳಿತಗಳ ಆದ್ಯ ಕರ್ತವ್ಯವೆಂದು ಕರ್ನಾಟಕ ನಗರಾಡಳಿತ ಕಾಯಿದೆ ೧೯೭೬ರ ಭಾಗ ೫೭(೧೨)ರಲ್ಲಿ ಹೇಳಿದೆ.

೫. ಇದೇ ಕಾಯಿದೆಯ ಭಾಗ ೩೪೫ರ ಪ್ರಕಾರ, ತೆರಿಗೆಯನ್ನು ವಿಧಿಸಿಲ್ಲದ ನಾಯಿಗಳನ್ನು ಖಂಡಿತವಾಗಿ ಕೊಲ್ಲಬೇಕು.

೬. ೧೯೬೦ರ ಪ್ರಾಣಿ ಹಿಂಸೆ ತಡೆಗಟ್ಟುವ ಕಾಯಿದೆಯ ಭಾಗ ೧೧(೧)ರ ಪ್ರಕಾರ, ಬೀದಿನಾಯಿಗಳೂ ಸೇರಿದಂತೆ ಯಾವುದೇ ಪ್ರಾಣಿಯನ್ನು ಕೇವಲ ಮನರಂಜನೆಯ ಉದ್ದೇಶದಿಂದ ಕೊಲ್ಲುವುದನ್ನು ನಿರ್ಬಂಧಿಸಲಾಗಿದೆ, ಅಷ್ಟೇ. ಇದೇ ಕಾಯಿದೆಯ ಭಾಗ ೧೧(೩)(ಬಿ) ಮತ್ತು (೧)ರ ಪ್ರಕಾರ ನಗರಾಡಳಿತಗಳು ಬೀದಿನಾಯಿಗಳನ್ನು ಕೊಲ್ಲುವುದಕ್ಕೆ ಯಾವುದೇ ನಿರ್ಬಂಧಗಳಿಲ್ಲ

೭. ಇನ್ನು ೨೦೦೧ರ ಪ್ರಾಣಿಗಳ (ನಾಯಿಗಳ) ಸಂತಾನಹರಣ ನಿಯಮಗಳು ಸಂತಾನಹರಣ ಚಿಕಿತ್ಸೆಯನ್ನು ಹೇಗೆ ನಡೆಸಬೇಕೆಂಬುದಕ್ಕೆ ಮಾತ್ರ ಸೀಮಿತವಾಗಿವೆ.

*ಮಂಗಳೂರು* **ಡಾ|| ಶ್ರೀನಿವಾಸ ಕಕ್ಕಿಲ್ಲಾಯ**

**ಏಪ್ರಿಲ್ ಸಂಚಿಕೆ**

ನಾನು ಪತ್ರಿಕೆಯ ಚಂದಾದಾರನಾದ ಮೇಲೆ ಪ್ರತಿ ತಿಂಗಳ ಪತ್ರಿಕೆ ಓದಿ ಆದ ಮೇಲೆ ತಾಲ್ಲೂಕಿನ ಹಳ್ಳಿಹಳ್ಳಿಗಳಲ್ಲಿ ನೆಲೆಸಿ ವ್ಯವಸಾಯದಲ್ಲಿ ತೊಡಗಿಕೊಂಡಿರುವ ನನ್ನ ಶಿಷ್ಯರಿಗೆ ಸರ್ಕುಲೇಟ್ ಮಾಡುತ್ತಿದ್ದೇನೆ. ಇಂತಹ ಒಂದು ಇತ್ತೀಚಿನ ಸಂದರ್ಭದಲ್ಲಿ ವಿದ್ಯಾವತಿಯಾದ ನನ್ನ ಶಿಷ್ಯಳು ಸ್ಪಂದಿಸಿದ ಕ್ರಮವನ್ನು ನೋಡಿ ನನಗೆ ಆನಂದಬಾಷ್ಪಗಳು ಉದುರಿದವು. ಉಪಾಧ್ಯಾಯನೊಬ್ಬನಿಗೆ ಈ ಸಂದರ್ಭಕ್ಕಿಂತಲೂ ಹೆಚ್ಚಿನ ಸಂತೋಷಪಡುವುದು ಯಾವುದು ಇದೆ? ಹೀಗೆ ಭಾವಿಸಿಕೊಂಡು ತಕ್ಷಣ ಅವಳು ೧ ವರ್ಷಕ್ಕೆ, ನಾನು ೩ ವರ್ಷಕ್ಕೆ ಚಂದಾ ಕಳಿಸಿದ್ದೇನೆ.

*ತೀರ್ಥಹಳ್ಳಿ* **ಎನ್. ಕಿಟ್ಟಪ್ಪಗೌಡ**

> **ಕವನಗಳಿಗೆ ಆಹ್ವಾನ**
>
> ಸ್ನೇಹ ಸಿಂಚನ ವೇದಿಕೆಯು 'ಸ್ನೇಹ ಸೇತು' ಎಂಬ ಕವನ ಸಂಕಲನವನ್ನು ಹೊರತರಲು ಉದ್ದೇಶಿಸಿದೆ. ಆಸಕ್ತರು ತಮ್ಮ ಸ್ವರಚಿತ ಕವನಗಳನ್ನು ೧೫.೫.೨೦೦೭ ರೊಳಗೆ ಕಳುಹಿಸಬಹುದಾಗಿದೆ.
>
> *ವಿಳಾಸ : ಮ.ನ. ಲತಾಮೋಹನ್, ಸ್ನೇಹಸಿಂಚನ ವೇದಿಕೆ, ನಂ. ೧೬, ಶರಾವತಿ ಬ್ಲಾಕ್, ಜ್ಯೋತಿನಗರ, ಮೈಸೂರು - ೫೭೦ ೦೧೯*

ಜಾಗತೀಕರಣ ಹಾಗೂ ಖಾಸಗೀಕರಣಗಳನ್ನು ಭಾರತೀಯ ಬದುಕಿನ ನವೋದಯ ಎಂಬುದಾಗಿ ಪರಿಗಣಿಸಿ ಅದಕ್ಕೆ ಪೂರಕವಾಗಿ ಜೀವನ ವಿಧಾನವನ್ನು ಬದಲಿಸಿಕೊಂಡ ಪರಿಣಾಮವಾಗಿ ಮೂಲಭೂತ ಅವಶ್ಯಕತೆಗಳಾದ ಶಿಕ್ಷಣ, ಆರೋಗ್ಯ, ಆಹಾರ ಹಾಗೂ ಧಾರ್ಮಿಕತೆ ಅಂದರೆ ಶಿಸ್ತು ವ್ಯಾಪಾರಿ ಸರಕುಗಳಾಗಿ ಇಂದು ಭಾರತದಲ್ಲಿ ಲಭ್ಯವಿದೆ ಎಂಬ ವಿಷಯವನ್ನು ಮನದಟ್ಟುಮಾಡಿರುವ ಲೇಖನ ನಮ್ಮ ಜವಾಬ್ದಾರಿಗಳ ಬಗ್ಗೆ ತಿಳಿಸಿರುತ್ತದೆ. ಹಳ್ಳಿಗಳ ದೇಶವಾಗಿರುವ ಭಾರತ ಕೃಷಿ, ಕೈಗಾರಿಕೆಗಳಲ್ಲಿ ತನ್ನ ಮಿತಿ ಒಳಗಡೆ ಸ್ವಂತಿಕೆಯನ್ನು ಉಳಿಸಿಕೊಂಡು ಆರೋಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಜಗತ್ತಿಗೆ ಮಾದರಿಯಾಗಿತ್ತು. ಇಂದು ಎಲ್ಲವನ್ನು ವ್ಯವಹಾರ ದೃಷ್ಟಿಯಿಂದ ಹಾಗೂ ಲಾಭದ ಅಂಶಗಳಿಂದ ಅಳತೆ ಮಾಡುವುದರಿಂದಾಗಿ ಸಾಮಾಜಿಕ ಸೇವೆ ಎಂಬುದು ಪೂರ್ಣವಾಗಿ ಮರೆಯಾಗಿ ಸಮಸ್ಯೆಗಳು ಎಲ್ಲಾ ಕ್ಷೇತ್ರಗಳಲ್ಲಿಯೂ ಉಂಟಾಗಿರುವುದನ್ನು ನಮ್ಮ ಸಮಾಜ ಅರ್ಥಮಾಡಿಕೊಳ್ಳಲು ವಿಫಲವಾಗಿರುವುದರಿಂದಾಗಿ ಹಣಗಳಿಸುವ ಹಾದಿಯನ್ನು ಸುಗಮ ಮಾಡಿಕೊಂಡಿರುವ ವೈದ್ಯಕೀಯ ಕ್ಷೇತ್ರದಲ್ಲಿ ಶ್ರೀಸಾಮಾನ್ಯನ ಆರೋಗ್ಯದ ಬಗ್ಗೆ ಜವಾಬ್ದಾರಿ ಮರೆಯಾಗಿ ರೋಗಿಯ ಬದಲು ಗಿರಾಕಿಯಾಗಿ ಪರಿಗಣಿಸಲಾಗುತ್ತದೆ.

*ಬೆಂಗಳೂರು* **ನರೇಂದ್ರ ಸಿರಕಜೆ**

'ಹಾಸನದ ಜನವರಿ ಜಾತ್ರೆ'ಯ ವಾಸ್ತವಿಕ ರೂಪದ ಚಿತ್ರಣವನ್ನು ಡಾ|| ವಸಂತಕುಮಾರ್ ಹ್ಯಾರಾನೆ ನೀಡಿದ್ದಾರೆ. ಶತಮಾನದ ಹಿಂದಿನ ಜಾತ್ರೆಯ ನೋಟ ಮತ್ತು ಇಂದಿನ ದಿನಗಳಲ್ಲಿನ ಜಾತ್ರೆಯ ಚಿತ್ರಣವನ್ನು ಹೋಲಿಸಿ ಇಂದಿನ ಜಾತ್ರೆ ತನ್ನ ಸಾಂಸ್ಕೃತಿಕ ಹಿನ್ನೆಲೆ ಮತ್ತು ಪರಂಪರೆಯನ್ನು ಕಳೆದುಕೊಂಡಿರುವ ರೀತಿಯನ್ನು ಅತ್ಯಂತ ಮಾರ್ಮಿಕವಾಗಿ ತಿಳಿಸಿದ್ದಾರೆ. ಅವರು ಹೇಳಿರುವ 'ಸಾಂಸ್ಕೃತಿಕ ವೈಭವ ಸಾರುತ್ತಿದ್ದ ಜಾತ್ರೆ ಇಂದು ಮೆರುಗನ್ನು ಕಳೆದುಕೊಂಡು ಬಟ್ಟೆಯಿಲ್ಲದ ಬೆತ್ತಲು ದೇಹದಂತೆ' ಎನ್ನುವ ಮಾತು ನೂರರಷ್ಟು ದಿಟ.

*ಬೆಂಗಳೂರು* **ನೆ. ಲ. ರಾಮಮೂರ್ತಿ**

ನಾ. ಡಿಸೋಜರ ತೆಂಗಿನ ಮರ ಮತ್ತು ಬಾವಿ ತುಂಬ ಅರ್ಥದ ಕತೆಯಾಗಿತ್ತು. ಹದಿವಯಸ್ಸಿನ ಫಕೀರಣ್ಣ, ಹನುಮಂತಣ್ಣ ದಿಗಂತದ ಬಾಳಿನಲ್ಲಿ ಮಾಗಿಯ ಹಣ್ಣಿನಂತೆ ಸುಬ್ಬಮ್ಮನ ಅಂಗಡಿಯಲ್ಲಿ ಕುಳಿತ ಕಲ್ಯಾಣಿಯ ಮೋಹ ಸರ್ಕಸ್ಸಿನಲ್ಲಿ ನೋಡಿ ತಮ್ಮ ಬೃಹದಾಕಾರದ ಆಸೆಯಲ್ಲಿ ತೇಲುವಾಗ ಕಲ್ಯಾಣಿ ಸರ್ಕಸ್ಸಿನವನ ಜೊತೆ ಓಡಿಹೋಗಿ ಫಕೀರಣ್ಣ ಮತ್ತು ಹನುಮಂತನ ಕನಸಿನ ಆಸೆಗೆ ಬಾವಿ ತೋರಿಸಿದ್ದು ತುಂಬಾ ಮಾರ್ಮಿಕವಾಗಿತ್ತು.

*ವೆಂಕಟಾಪುರ* **ಲಿಂಗಪ್ಪ ಲಕ್ಕಣ್ಣವರ್**

ತೀರ್ಪು ಕೊಟ್ಟಿಲ್ಲ. ಇದೇ ಮಂಡಲಿಯು ಹೆಲ್ಸಿಂಕಿ ನಿಯಮಗಳನ್ನು ಪ್ರಸ್ತಾಪಿಸಿದೆ, ಆದರೆ ಅನುಸರಿಸಿಲ್ಲ.

ಹಾಗಿದ್ದರೆ ಪರಿಹಾರವೇನು ? ಸಂವಿಧಾನದ ೧೩೬ನೆಯ ನಿಬಂಧವು ಹೇಳುವಂತೆ ಮೇಲ್ಮನವಿ ಸಲ್ಲಿಸಬೇಕು. ತಾರತಮ್ಯವಾಗಿರುವ ವಿಚಾರಗಳನ್ನೆಲ್ಲಾ ಶಾಸನದ ೫(೩)ನೆಯ ವಿಧಿಯಡಿ ಪ್ರಸ್ತಾಪಿಸಿ ನ್ಯಾಯಮಂಡಲಿಯಿಂದ ವಿವರಣೆ ಪಡೆಯಬೇಕು. ಈಗಿನ ತೀರ್ಪನ್ನು ಮಂಡಲಿಯು ಆಗ ಬದಲಾಯಿಸಲೇಬೇಕಾಗುತ್ತದೆ. ಸರ್ಕಾರವು ಭಾವಿಸಿರುವಂತೆ ಸಂವಿಧಾನದ ೧೩೧ನೇ ನಿಬಂಧದಡಿ ಪರಿಹಾರ ದೊರೆಯಲಾರದು; ಏಕೆಂದರೆ, ಅಲ್ಲಿ ಏನಿದ್ದರೂ ಆರಂಭಿಕ ವಿವಾದಗಳನ್ನು ಮಾತ್ರ ಪ್ರಸ್ತಾಪಿಸಬಹುದು. ಕಾವೇರಿ ನೀರಿನದು ಆರಂಭಿಕ ವಿವಾದವಲ್ಲ. ಆಮೂಲಾಗ್ರ ಪರಿಹಾರವೆಂದರೆ ರಾಷ್ಟ್ರೀಯ ನೀರು ನೀತಿಯನ್ನು ರೂಪಿಸುವುದು. ಈಗ ನೀರಿನ ಹಂಚಿಕೆಯ ಬಗ್ಗೆ ನಮ್ಮಲ್ಲಿ ಯಾವ ನಿಯಮವೂ ಇಲ್ಲ, ನಿರ್ದೇಶಕ ಸೂತ್ರವೂ ಇಲ್ಲ. ಆದ್ದರಿಂದ ತಾರತಮ್ಯ ಸಾಧ್ಯವಿದೆ. ಸಮಗ್ರ ನೀರಿನ ನೀತಿ ಜಾರಿಗೆ ಬಂದರೆ ಈ ನ್ಯೂನತೆಗಳನ್ನು ತೊಡೆದುಹಾಕಬಹುದು.

– ಆದರೆ ಇದೆಲ್ಲಾ ನಮ್ಮ ರಾಜ್ಯ ಸರ್ಕಾರಕ್ಕೆ ಕೇಳಿಸುವುದು ಹೇಗೆ ?

* * *

ಇನ್ಫೋಸಿಸ್‌ನ ಮಾನ್ಯ ನಾರಾಯಣಮೂರ್ತಿಗಳು ರಾಷ್ಟ್ರದ ಅಧ್ಯಕ್ಷರಾಗಬೇಕೆಂದು ಕೆಲವು ವಲಯಗಳಲ್ಲಿ ಬಿರುಸಿನ ಚಟುವಟಿಕೆ ನಡೆಯುತ್ತಿದೆ. ರಾಷ್ಟ್ರಗೀತೆಯ ಬಗ್ಗೆ ಅವರ ಮಾತುಗಳನ್ನು ವೃಥಾ ಲಂಬಿಸಬಾರದೆಂದು ಕೆಲವರ ಅಂಬೋಣ. ಮೂರ್ತಿಯವರು ಏನೇ ಸಮಜಾಯಿಷಿ ನೀಡಿದರೂ ಒಂದಂಶವಂತೂ ನಿರ್ವಿವಾದವಾದ್ದು: ಮಾನಸಿಕವಾಗಿ ಅವರು ಬಿಳಿ ತೊಗಲಿನ, ವಿಶೇಷತಃ ಅಮೇರಿಕಾದ, ನಿಚ್ಚಳ ಭಕ್ತರು. ರಾಷ್ಟ್ರಗೀತೆಯನ್ನು ಹಾಡಿದರೆ ಅವರಿಗೆ ಇರಿಸುಮುರಿಸಾಗುತ್ತದೆಂದು ಇವರಿಗೆ ಇರಿಸುಮುರಿಸು ! ನಾವು ರಾಷ್ಟ್ರಗೀತೆಯನ್ನು ಹಾಡುವುದು ನಮಗಾಗಿಯೋ ಅಥವಾ ಬೇರೆಯವರಿಗಾಗಿಯೋ ? ಮೂರ್ತಿಯವರು ಅಮೇರಿಕಾದ ಸಭೆಗಳಲ್ಲಿ ಎಂದೂ ಆ ದೇಶದ ರಾಷ್ಟ್ರಗೀತೆಯನ್ನು ಹಾಡಿದ್ದನ್ನು ಕೇಳಲಿಲ್ಲವೆ ? ಅವರಿಗೆ ಆಗೆಲ್ಲಾ ಮುಜುಗರವಾಗಿತ್ತೆ? ಒಲಿಂಪಿಕ್ಸ್ ಕ್ರೀಡಾಕೂಟಗಳಲ್ಲಿ ಎಷ್ಟೊಂದು ರಾಷ್ಟ್ರಗಳ ಗೀತೆಗಳನ್ನು ಕೇಳಬೇಕಾಗುತ್ತದಲ್ಲ, ಆಗೆಲ್ಲಾ ಮೂರ್ತಿಯವರು ಏನು ಮಾಡುತ್ತಾರೆ ? ಅವರ ದಾಸ್ಯ ಮನೋಭಾವಕ್ಕೆ ಧಿಕ್ಕಾರ ಹೇಳುವುದು ಅಸಹಜ ವರ್ತನೆಯಲ್ಲ. ಜೊತೆಗೆ, ಅವರ ಮಾತಿನಲ್ಲಿ ವೈರುಧ್ಯವಿದೆ : ಹಾಡಿದರೆ ಬಿಳಿಯರಿಗೆ ಮುಜುಗರವಾಗುತ್ತದೆಂದು ವಾದ್ಯಸಂಗೀತ ಹಾಕಿದ್ದಾಗಿ ಹೇಳುತ್ತಾ ಆ ವಾದ್ಯದ ಜೊತೆ ತಾವು ಗೀತೆಯನ್ನು ಗುಣಿಗುಣಿಸಿದ್ದಾಗಿ ಹೇಳಿದ್ದಾರೆ. ಅಂದರೆ, ಆ ವಿದೇಶಿಯರಿಗೆ ರಾಷ್ಟ್ರಗೀತೆಯನ್ನು ಕೇಳಿಸಿದಂತೆಯೇ ಆಯಿತು ! ಹಾಗಿದ್ದರೆ ವಾದ್ಯವೈಭವ ಏಕೆ ಬೇಕಾಗಿತ್ತು? ಇಂತಹ ''ಮುಜುಗರ'' ಇರುವವರು ರಾಷ್ಟ್ರಾಧ್ಯಕ್ಷರಾದರೆ ನಮ್ಮ ರಾಷ್ಟ್ರಕ್ಕೆ ಗರ ಬಡಿದಂತಾಗುತ್ತದೆ. ಬಂಗ್ಲಾದೇಶವು ಸ್ವತಂತ್ರವಾಗುವ ಮುನ್ನ ಮಾಸ್ಕೋದಲ್ಲಿ ಭಾರತದ ರಾಯಭಾರ ಕಚೇರಿಯಲ್ಲಿ ಒಂದು ಸಭೆ; ರುಮಾ ಗುಹಾಠಾಕುರ್ತ ಅವರು ''ಅಮಾರ್ ಸೋನಾರ್ ಬಾಂಗ್ಲಾ'' ಹಾಡಿದರು. ರಾಯಭಾರಿ ಶ್ರೀ ಶೆಲ್ವಂಕರ್ ಮತ್ತು ಅವರ ಪತ್ನಿ ಎದ್ದುನಿಂತರು. ಅವರೊಂದಿಗೆ ಇತರರೂ ಸಹ. ಅವರ ಸಂಸ್ಕೃತಿಗೂ ನಾರಾಯಣಮೂರ್ತಿಯವರ ಸಂಸ್ಕೃತಿಗೂ ಎಷ್ಟೊಂದು ವ್ಯತ್ಯಾಸವಿದೆ !

ಈ ಪ್ರಸಂಗದ ಹಿನ್ನೆಲೆಯಲ್ಲಿ ಒಂದು ರೀತಿಯ ವರ್ಗ ವಿಭಜನೆಯು ಸ್ವಾರಸ್ಯಕರವಾಗಿ ಹೊರಬಿದ್ದಿದೆ. ಮೂರ್ತಿಯವರ ಪರವಾಗಿ ಡಾ॥ ಎಸ್. ಎಲ್. ಭೈರಪ್ಪ ನಿಂತಿದ್ದಾರೆ. ಅವರನ್ನು ಮೂರ್ತಿಗಳು ಇತ್ತೀಚೆಗೆ 'ಸಾಹಿತ್ಯ ಋಷಿ' ಎಂದು ಕರೆದಿದ್ದುದು ಇದಕ್ಕೆ ಒಂದು ಕಾರಣವಿರಬಹುದು. ರಾಷ್ಟ್ರದ ದಿಗ್ಗಜರಾದ ಮೂರ್ತಿಗಳ ಚಿಕ್ಕ ಲೋಪಗಳನ್ನು ದೊಡ್ಡದು ಮಾಡಬಾರದೆಂಬ ಉಪದೇಶವನ್ನು ಕೆಲವರು ನೀಡಿದ್ದಾರೆ. ಎರಡು ರೂಪಾಯಿ ನಾಣ್ಯವೊಂದರಲ್ಲಿ ಶಿಲುಬೆಯನ್ನು ಸಂಶೋಧಿಸಿರುವ ಆರೆಸ್ಸೆಸ್‌ನ ಸುದರ್ಶನ ಮತ್ತು ಅವರ ಪರಿವಾರವು ಈ ಸಂದರ್ಭದಲ್ಲಿ ಮೌನವ್ರತ ಸ್ವೀಕರಿಸಿರುವುದು ಆಕಸ್ಮಿಕವಲ್ಲ. ಮೂರ್ತಿಯವರು ಅಮೇರಿಕಾದ ವರ್ಗದವರು ಮತ್ತು ಆರೆಸ್ಸೆಸ್ ವರ್ಗದವರೆಂಬುದು ಖಚಿತ.

* * *

ಸಿದ್ಧಗಂಗಾ ಕ್ಷೇತ್ರದ ಸ್ವಾಮೀಜಿ ''ಕರ್ನಾಟಕ ರತ್ನ'' ಎನಿಸಿಕೊಂಡಿದ್ದು ಸರ್ಕಾರವು ಆ ಪ್ರಶಸ್ತಿ ನೀಡಿದಾಗಲ್ಲ. ನೂರು ವರ್ಷಗಳ ಸಾರ್ಥಕ ಜೀವನ ನಡೆಸಿರುವ ಇವರು ಸಾವಿರಾರು ವಿದ್ಯಾರ್ಥಿಗಳಿಗೆ ಆಸರೆ ನೀಡುತ್ತಾ ಬಂದಿರುವ 'ಚಿರ ರತ್ನ' ಎಂದೇ ಹೇಳಬೇಕು. 'ಹೊಸತು' ಅವರಿಗೆ ಗೌರವಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಸರ್ಕಾರದಿಂದ ಸ್ವಾಮಿಗಳು ಪಡೆದಿರುವ ಸಹಾಯವು ನಗಣ್ಯವಲ್ಲವೆಂಬುದನ್ನು ಇಲ್ಲಿ ಸ್ಮರಿಸಬಹುದು. ಅರ್ಥಸಚಿವ ಯಡಿಯೂರಪ್ಪನವರು ಕೊಡುವ ಎರಡು ಕೋಟಿ ಮಾತ್ರವೇ ಸಿದ್ಧಗಂಗಾ ಮಠಕ್ಕೆ ಸರ್ಕಾರದ ಕೊಡುಗೆಯಲ್ಲ. ಹತ್ತಾರು ಕಡೆಗಳಲ್ಲಿ ಭೂಮಿಯನ್ನೂ ಕಟ್ಟಡಗಳನ್ನೂ ಹಿಂದೆಲ್ಲಾ ಕೊಟ್ಟಿರುವುದುಂಟು. ಉದಾಹರಣೆಗೆ, ತುಮಕೂರಿನಲ್ಲಿ ಈಗ ಸಿದ್ಧಗಂಗಾ ಕಾಲೇಜಿರುವ ಜಾಗ ಮತ್ತು ಕಟ್ಟಡಗಳು. ಆದರೆ ಸ್ವಾಮಿಗಳು ಸರ್ಕಾರವೊಂದನ್ನೇ ಆಶ್ರಯಿಸದೆ ಸಾರ್ವಜನಿಕರನ್ನು ತೊಡಗಿಸಿಕೊಂಡು ಬಂದಿರುವುದು ಮಹತ್ವದ ಅಂಶ.

* * *

ನಮ್ಮ ದೇಶದ ಐ.ಎ.ಎಸ್. ಅಧಿಕಾರಿಗಳನ್ನು ವಿಶೇಷ ತರಬೇತಿಗಾಗಿ ಅಮೆರಿಕಾಕ್ಕೆ ಕಳಿಸುವ ಯೋಜನೆಯೊಂದು ಜಾರಿಗೆ ಬಂದಿದೆ. ಎಲ್ಲದಕ್ಕೂ ಅಮೆರಿಕಾದ ಸಿಂಚನ ಇರಲೇಬೇಕೆಂಬುದು ಮನಮೋಹನ ಸಿಂಗ್ ಬಣದ ಆಶಯ. ಈಗ ಐವತ್ತು ಕೋಟಿ ರೂಪಾಯಿಗಳನ್ನು ವೆಚ್ಚಮಾಡಿ ಸರ್ಕಾರಿ ಅಧಿಕಾರಿಗಳನ್ನು ಅಮೆರಿಕೀಕರಣ ಹೊಂದಿ ಬರಲು ಕಳಿಸಲಾಗುತ್ತಿದೆ. ಹಾಗೆ ತರಬೇತಿ ಪಡೆದು ಬಂದವರಿಗೆ ಮಾತ್ರವೇ ಬಡ್ತಿ ನೀಡಲಾಗುತ್ತದಂತೆ. ತರಬೇತಿಗೆ ಅಮೆರಿಕಾದ ಮೂರು ವಿಶ್ವವಿದ್ಯಾಲಯಗಳನ್ನು ಗುರುತಿಸಲಾಗಿದೆ. ಬಹುಶಃ ಆ ಸಂಸ್ಥೆಗಳಲ್ಲಿ ಅಮೆರಿಕಾದ ಕೇಂದ್ರೀಯ ಗೂಢಚಾರ ಸಂಸ್ಥೆಯ ಕೈವಾಡವಿರುತ್ತದೆ, ವಿಶ್ವಬ್ಯಾಂಕಿನ ಅರ್ಥಶಾಸ್ತ್ರಜ್ಞರಿರುತ್ತಾರೆ ಮತ್ತು ಜನಸಾಮಾನ್ಯರ ಹಿತವು ದೇಶದ ಹಿತವಲ್ಲವೆಂದು ಬೋಧಿಸುವ ನುರಿತ ಪ್ರಾಧ್ಯಾಪಕರು ಇರುತ್ತಾರೆ. ಇಂತಹ ಕಡೆ ತರಬೇತಿ ಪಡೆದವರು ನಮ್ಮ ಜನರನ್ನು ಕಣ್ಣೆತ್ತಿ ನೋಡಿಯಾರೆ ! ಇಷ್ಟು ಅಸಹನೀಯ ಕ್ರಮಗಳನ್ನು ಕೈಗೊಳ್ಳುತ್ತಿರುವ ಸರ್ಕಾರಕ್ಕೆ ಎಡಪಕ್ಷಗಳು ಎಚ್ಚರಿಕೆಯ ಮಾತನ್ನು ಸಹ ಹೇಳದಷ್ಟು ಮೂಕವಾದವೇಕೆ ಎಂಬುದು ವಿಚಾರ ಮಾಡಬೇಕಾದ ವಿಷಯ.

* * *

ಅದೇ ಅಮೆರಿಕಾದ ಇನ್ನೊಂದು ಗಮ್ಮತ್ತು ಇನ್ನೂ ಹೆಚ್ಚು ಅನೂಹ್ಯವಾದ ನಾಚಿಕೆಗೇಡಿನ ಪ್ರಸಂಗ. ಅಮೆರಿಕಾ-ಜಪಾನ್-ಭಾರತ ದೇಶಗಳ ನೌಕಾಸೈನ್ಯಗಳು ಜಂಟಿ ಕವಾಯತ್ತು ಮಾಡಿವೆ. ಅದೇನೂ ಅಷ್ಟು ಮಹತ್ವದ ಸಂಗತಿಯಲ್ಲ. ಮಹತ್ವದ ಸಂಗತಿ ಬೇರೆಯೇ ಇದೆ : ಕೆಲವು ವಾರಗಳ ಹಿಂದೆ ಭಾರತ ಮತ್ತು ಅಮೆರಿಕಾ ದೇಶಗಳ ವಾಯುಪಡೆಗಳು ಜಂಟಿ ಕವಾಯತ್ತು ನಡೆಸಿದವು. ಅದಾದ ನಂತರ ಅಮೆರಿಕಾ ವಾಯುಪಡೆಯ ಬಹಳ ಉನ್ನತ ಮಟ್ಟದ ಅಧಿಕಾರಿಯೊಬ್ಬರು ಹೇಳಿದ್ದಿದು : ಈಗಿನ ಕವಾಯತ್ತಿನಲ್ಲಿ ಅಮೆರಿಕಾದ ಎಫ್-೧೮ ವಿಮಾನಗಳನ್ನು ನಾವು ಬಳಸಿದೆವು. ಭಾರತದಲ್ಲಿ ಅವೇ ವಿಮಾನಗಳು ಇದ್ದಿದ್ದರೆ ನಮ್ಮ ಜಂಟಿ ಕವಾಯತ್ತು ಹೆಚ್ಚು ಯಶಸ್ಸು ಪಡೆಯುತ್ತಿತ್ತು. ಈಗಲಾದರೂ ಭಾರತವು ಎಫ್-೧೮ ವಿಮಾನಗಳನ್ನು ಪಡೆಯುತ್ತದೆಂದು ಆಶಿಸುತ್ತೇನೆ.

ಅಂದರೆ, ಜಂಟಿ ಕವಾಯತ್ತಿನ ಉದ್ದೇಶವು ಅಮೆರಿಕಾದ ಯುದ್ಧ ವಿಮಾನಗಳ ಮಾರಾಟ ಎಂದಂತಾಯಿತು. ಅವೇ ಯುದ್ಧ ವಿಮಾನಗಳನ್ನು ನಮ್ಮ ನೆರೆರಾಷ್ಟ್ರಗಳಿಗೂ ಮಾರುವ ಅಮೆರಿಕಾದ ವ್ಯವಹಾರ ಚಾತುರ್ಯ ಅಗಾಧವಾಗಿದೆ. ಆದರೆ ಅದನ್ನು ಅರ್ಥಮಾಡಿಕೊಳ್ಳಲು ನಮ್ಮ ರಾಷ್ಟ್ರದ ನಾಯಕರಿಗೆ ಸಾಧ್ಯವಾಗುವುದಿಲ್ಲವೆ ? ಅಥವಾ ಅರ್ಥಮಾಡಿಕೊಂಡರೆ ಅಮೆರಿಕಾದ ವಾಯುಪಡೆಯ ಉನ್ನತ ಅಧಿಕಾರಿಗಳಿಗೆ ಮುಜುಗರ ಉಂಟಾದೀತೆಂಬ ಅಳುಕೇನಾದರೂ ಉಂಟೊ ? ಎಲ್ಲೆಲ್ಲೂ ನಾರಾಯಣ ಮೂರ್ತಿಯವರ ಸಂತತಿಯವರೇ ಭಾರತದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿಯುತ್ತಿದ್ದಾರೆ. ವಸಾಹತು ಮನಸ್ಸುಗಳನ್ನು ನಮ್ಮಲ್ಲಿ ತುಂಬಿಕೊಂಡು ಅಸಹಾಯಕರಾಗಿ ಬೇರೆಯವರನ್ನು ದೂಷಿಸುವುದು ನಿರರ್ಥಕ. ಆದರೆ ಈ ಮನಸ್ಸುಗಳನ್ನು ಬದಲಾಯಿಸುವುದೆಂತು ? ನಮ್ಮ ಶಿಕ್ಷಣ ಕ್ರಮ ಹಾಗೂ ಮಾಧ್ಯಮಗಳು ಆ ಕಡೆಗೆ ಗಮನವನ್ನೇ ನೀಡಿಲ್ಲ. ಅದೇ ದೊಡ್ಡ ವ್ಯಸನ.

* * *

ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಅವರು ಚುನಾವಣಾ ರಾಜಕೀಯದಿಂದ ನಿವೃತ್ತರಾಗುತ್ತಾರಂತೆ. ಹಾಗೆ ಮಾಡುವ ಮೊದಲು ಪೊಲೀಸ್ ಇಲಾಖೆಯನ್ನು ಆರೆಸ್ಸೆಸ್‌ನವರ ಬಣಕ್ಕೆ ವಹಿಸಿಕೊಡುವ ಕ್ರಮವನ್ನು ತಡೆಗಟ್ಟುತ್ತಾರೆಂದು ಆಶಿಸಬಹುದೆ ?




# ಶ್ರಮವೂ ಬಂಡವಾಳ !

ಪ್ರೊ|| ಎಮ್. ಆರ್. ನಾಗರಾಜು

ಶ್ರಮ, ಕೌಶಲ್ಯಗಳು ಕೇವಲ ಬಂಡವಾಳಗಳಷ್ಟೇ ಅಲ್ಲ, ಹಣದೊಂದಿಗೆ ಬೆರೆತು ಉತ್ಪಾದನೆಗೆ ಕಾರಣವಾಗುವ ಅನಿವಾರ್ಯ ಅಗತ್ಯಗಳು ಹಾಗೂ ಖೋಟಾ ಆಗಲಾರದ ಸಾಚಾ ನೋವಿನ ಹೂಡಿಕೆಗಳು. ಕಾರ್ಮಿಕ ದಿನಾಚರಣೆಯ ಸಂದರ್ಭದಲ್ಲಿ 'ತಿನಲಿತ್ತದ್ದಕಿಂತಾ ಕಡಿಮೆ ತಿನ್ನುತ್ತಿರುವ' ದುಡಿಯುವ ಶಕ್ತಿ ಕುಂದಿದ ಕಾರಣದಿಂದಲೇ ಮೂಲೆಗುಂಪಾಗಿರುವ – ಶ್ರಮ ಹೂಡಿಕೆದಾರ ಬಂಧುಗಳಿಗೆ ಅಶ್ರುಪೂರ್ಣ ನಮನಗಳು.

'ಅವರ ಭಾಷಣದಲ್ಲಿ ಏನೇನೂ ಬಂಡವಾಳವಿಲ್ಲ' - ಎನ್ನುವ ಮಾತನ್ನು ಕೇಳುತ್ತಿರುತ್ತೇವೆ. ಭಾಷಣದಲ್ಲಿ ಅಂತಸ್ಸತ್ವವಿಲ್ಲ ಎಂದು ಆ ಮಾತಿನ ಅರ್ಥ. ಆದರೆ ಅರ್ಥಶಾಸ್ತ್ರದಲ್ಲಿ ಬಂಡವಾಳ ಎಂಬ ಮಾತಿಗೆ ಬೇರೆ ಅರ್ಥವಿದೆ. ಲಾಭಗಳಿಕೆಯ ಸಲುವಾಗಿ ಹೂಡಿದ ಹಣಕ್ಕೆ 'ಬಂಡವಾಳ' ಎಂದು ಅಲ್ಲಿ ಅರ್ಥೈಸಲಾಗುವುದು.

ಕೇವಲ ಹಣ ಹೂಡಿಕೆಯಿಂದ ಲಾಭ ಬರಲು ಸಾಧ್ಯವೆ ? ಬ್ಯಾಂಕಿನಲ್ಲಿ ಹಣ ಇಟ್ಟಾಗ ಬಡ್ಡಿ ಬರುತ್ತದೆ - ಆದ್ದರಿಂದ ಸಾಧ್ಯವಾಯಿತಲ್ಲ ಎಂದು ವಾದ ಮಾಡಬಹುದು. ಆದರೆ, ಹಾಗೆ ಬಂದದ್ದು ಲಾಭದ ಒಂದಂಶ ಮಾತ್ರ. ಲಾಭದ ಉಳಿದಂಶಗಳೂ, ಹಣದ ಉಪಯೋಗ ಮಾಡಿ ಉತ್ಪಾದನೆ ಮಾಡಲು ಕಾರಣರಾದ ಅನೇಕರಿಗೆ ವಿತರಣೆಯಾಗಿರುತ್ತವೆ.

ಇನ್ನೂ ಮುಗ್ಧವಾಗಿ ಆಲೋಚನೆ ಮಾಡೋಣ. ನಮ್ಮೂರಿನ ಕೆರೆಯಲ್ಲಿ ಜೇಡಿಮಣ್ಣಿದೆ. ಅದನ್ನು ಗೊಂಬೆಯಾಗಿ ಮಾಡಿ, ಮಾರಿದರೆ ಜೇಡಿಮಣ್ಣು ಮಾರಿದ್ದಕ್ಕಿಂತಲೂ ಹೆಚ್ಚು ಲಾಭ ಬರುತ್ತದೆ. ಆ ಲಾಭಕ್ಕೆ ಯಾರು ಯಾರು ಏನೆಲ್ಲಾ ವೆಚ್ಚ ಮಾಡುತ್ತಾರೋ ಅದೆಲ್ಲಾ ಒಂದರ್ಥದಲ್ಲಿ ಬಂಡವಾಳವೇ ಆಗಿರುತ್ತದೆ. ಜೇಡಿಮಣ್ಣಿನ ಬಳಿ ನೋಟಿನ ಕಂತೆಯನ್ನು ಇರಿಸಿದರೆ ಜೇಡಿಮಣ್ಣಿನ ಕಲಾಕೃತಿ ಆಗುವುದಿಲ್ಲ.

ಅಂದಮೇಲೆ ಕಲಾಕೃತಿಯನ್ನು ರೂಪಿಸಲು ತೊಡಗಿಸುವ ಮೂಲಾಂಶಗಳು ಇವು :

ನಿಸರ್ಗ ನೀಡುವ ಕಚ್ಚಾ ಸಾಮಗ್ರಿ, ಲಾಭದ ನಿರೀಕ್ಷೆಯಲ್ಲಿ ತೊಡಗಿಸುವ ಹಣ, ಕಲಾಕೃತಿಯನ್ನು ಮಾಡಬಹುದೆಂಬ ಅರಿವು, ಕಲಾಕೃತಿಯನ್ನು ತಯಾರಿಸುವ ಪರಿಶ್ರಮ, ತಯಾರಿಸಿದ ಕಲಾಕೃತಿಯ ವಿತರಣಾಜಾಲ, ಈ ವಹಿವಾಟನ್ನು ನೋಡಿಕೊಳ್ಳುವ ಆಡಳಿತಾಂಗ, ಕಲಾಕೃತಿಯ ಪ್ರಚಾರ ವ್ಯವಸ್ಥೆ- ಈ ಎಲ್ಲ ಹೂಡಿಕೆಗಳಿಂದ (ಬಂಡವಾಳಗಳಿಂದ) ಮತ್ತು ಹೂಡಿಕೆಗಳ ಹೊಂದಾಣಿಕೆಯಿಂದ ಉತ್ಪಾದನೆಯಾಗುವ ಗ್ರಾಹಕ ಸಾಮಗ್ರಿಗಳ ಗ್ರಾಹಕರಾದ ನಮಗೆ ಇರುವ ಲಕ್ಷ್ಯ ಒಂದೇ. ಎಷ್ಟು ಸಾಧ್ಯವೋ ಅಷ್ಟು ಉತ್ಕೃಷ್ಟವಾದ ಗುಣಮಟ್ಟದ ಗ್ರಾಹಕ ಸಾಮಗ್ರಿಯನ್ನು ಹೇಗಾದರೂ ಮಾಡಿ ಆದಷ್ಟೂ ಕಡಿಮೆ ದರದಲ್ಲಿ ಪಡೆದುಕೊಳ್ಳುವುದು. ನಾವೆಲ್ಲರೂ ಮಾಡುವುದು ಇದನ್ನೇ. ನಮ್ಮ ಪರಿಚಿತರು, ಪ್ರೀತಿಯ ದಾಕ್ಷಿಣ್ಯ, ಎಲ್ಲವನ್ನೂ ವಿನಿಯೋಗಿಸಿ ನಮ್ಮ ಹಣವನ್ನು ಪ್ರಶಸ್ತವಾಗಿ ವೆಚ್ಚ ಮಾಡುತ್ತೇವೆ. ಆದರೆ, ವೆಚ್ಚ ಮಾಡಿದ ಹಣದಿಂದ ಬಂದ ಲಾಭ ಹೂಡಿಕೆದಾರರ ಪೈಕಿ ಯಾರಿಗೆ ತಲುಪಿದೆ ? ಯಾರಿಗೆ ಅನ್ಯಾಯವಾಗಿದೆ ? – ಎಂಬ ಚಿಂತೆ ನಮ್ಮನ್ನು ಬಾಧಿಸುವುದೇ ಇಲ್ಲ. ಅದನ್ನೆಲ್ಲಾ ಸರ್ಕಾರ ನೋಡಿಕೊಳ್ಳುತ್ತದೆ ಎಂಬ ಭಾವನೆ ನಮ್ಮದು. ಸರ್ಕಾರವಾದರೋ ಈ ವಹಿವಾಟು ಸರಾಗವಾಗಿ ಸಾಗುವಂತೆ ನೋಡಿಕೊಳ್ಳುವತ್ತ ಆಸ್ಥೆ ವಹಿಸುವುದೇ ವಿನಾ ಗಳಿಕೆಯ, ವಿತರಣೆಯ, ನ್ಯಾಯದ ಕಡೆಗೆ ಅದರ ಲಕ್ಷ್ಯವಿಲ್ಲ. ಖಾಸಗಿ ಸಂಸ್ಥೆಯೊಂದು ಅಧಿಕ ಲಾಭ ಗಳಿಸಿದರೆ ಸರ್ಕಾರ ಈ ಸಂಸ್ಥೆ ಗಳಿಸಿದ ಲಾಭದ ಹಿಂದಿನ ನಷ್ಟ ಯಾರಿಗೆ ಆಗಿದೆ ಎಂಬುದನ್ನು ಗಮನಿಸುವುದಿಲ್ಲ. ಆ ಸಂಸ್ಥೆ ಗಳಿಸಿದ ಲಾಭವನ್ನು ಆ ಸಂಸ್ಥೆಯ ತಳ ರಚನೆಯ ಅಭಿವೃದ್ಧಿಗೆ ಬಳಕೆ ಮಾಡುವುದೋ, ಬಂಡವಾಳಗಾರರಿಗೆ ನೀಡುವುದೋ, ಉದ್ಯೋಗಿಗಳಿಗೆ ಹಂಚುವುದೋ ಎಂಬುದು ಆ ಸಂಸ್ಥೆಯ ಆಂತರಿಕ ವಿಚಾರವೆಂದು ಸರ್ಕಾರ ದೂರ ಸರಿದುಬಿಡುತ್ತದೆ. ಲೆಕ್ಕ ಪರಿಶೋಧಕರು ಆದಾಯ ವೆಚ್ಚವನ್ನು ಸರಿತೂಗಿಸುವರೇ ಹೊರತು ಈ ವಿವೇಚನೆಯನ್ನು ಪ್ರಶ್ನಿಸಲಾರರು. ಹೀಗಾಗಿ

ಉತ್ಪಾದನೆಯ ಲಾಭ ಯಾರಿಂದ ಬಂದಿತೆಂದು ಹೇಳುವಷ್ಟು ಸುಲಭವಾಗಿ ಯಾರಿಗೆ ತಲುಪಿತೆಂಬುದು ಯಾರೂ ಗಮನಹರಿಸದ ನಿಗೂಢ ರಹಸ್ಯ.

ಈ ಬಗೆಯ ಲೆಕ್ಕಾಚಾರದತ್ತ ಒಮ್ಮೆ ಗಮನ ಹರಿಸಿದರೆ ಸಾಕು, ಒಂದಂಶ ಸ್ಪಷ್ಟ. ಲಾಭಕ್ಕಾಗಿ ಹೂಡಿದ ನಿಸರ್ಗವು ಮೊದಲ ಶೋಷಿತ. ಉತ್ಪಾದನೆಯಿಂದ ಆಗುವ ಲಾಭದ ಪಾಲು ಹಾಗಿರಲಿ, ನಿಸರ್ಗದಲ್ಲಿ ಆದ ಏರುಪೇರಿನ ಅನ್ಯಾಯವನ್ನು ಮುನ್ನಾಸ್ಥಿತಿಗೆ ಅಲ್ಲದೆ ಹೋದರೂ ಸಹನೀಯವಾಗಿ ಉಳಿಸುವಷ್ಟು ಕೊಂಚ ಹಣವನ್ನಾದರೂ ಅದಕ್ಕೆ ವೆಚ್ಚ ಮಾಡುವುದಿಲ್ಲ. ಗಣಿ ಉದ್ಯಮದಿಂದ ಹಣ ಹೂಡಿಕೆ ಮತ್ತು ಲಾಭದ ಹಂಚಿಕೆ ಆಗುವುದೇನೋ ಸರಿ. (ಅದರ ಜಗಳ ರಾಜ್ಯದ ರಾಜಕೀಯದ ದಿಕ್ಕನ್ನೇ ನಿರ್ಧರಿಸುತ್ತದೆ). ಆದರೆ ಖನಿಜದ ಸಲುವಾಗಿ ಭೂಮಿಯನ್ನು ಬಗೆದು ಅದರ ಮೇಲ್ಪದರದ ಮೇಲೆ ಮಣ್ಣು ಸುರಿದಾಗ ಉಂಟಾಗುವ ಗುಡ್ಡ, ಆ ಗುಡ್ಡ ಮಳೆ ಬಂದಾಗ ಕೊಚ್ಚಿಹೋಗಿ ಆಸುಪಾಸಿನ ಕೃಷಿಕರಿಗೆ ಆಗುವ ನಷ್ಟ, ಇದರ ಹೊಣೆಯನ್ನು ಯಾರು ಹೊರಬೇಕು ? ಯಾರದೋ ಲಾಭಗಳಿಕೆಗಾಗಿ, ತಮ್ಮ ಪಾಡಿಗೆ ತಾವು ಬೇಸಾಯ ಮಾಡಿಕೊಂಡಿದ್ದವರು, ಅಲ್ಲಿನ ಜೀವಪರಿಸ್ಥಿತಿ, ವ್ಯವಸ್ಥೆ, ಬೆಲೆ ತೆರಬೇಕೆ ? ಪ್ರತಿಯೊಂದು ಉತ್ಪಾದನಾ ಘಟಕದ ಆಸುಪಾಸಿನಲ್ಲಿರುವ ಪ್ರಕೃತಿಗಾಗುವ ವಿಕೃತಿ, ಪ್ರಕೃತಿ ತಾನು ಹೂಡಿದ ಬಂಡವಾಳಕ್ಕೆ ಪ್ರತಿಯಾಗಿ ನಾವು ಪ್ರಕೃತಿಗೆ ನೀಡಿರುವ ಉಪೇಕ್ಷೆಯೇ ಕಾರಣ ಎಂದು ಹೇಳಬಹುದಲ್ಲವೆ ? ಪ್ರಕೃತಿಗಾದ ಈ ನಷ್ಟ ಆಸುಪಾಸಿನ ಪ್ರಕೃತಿ ಅವಲಂಬಿತರಿಗೆ ಆಗುವ ಆಘಾತ. ಅವರು ಸಂಘಟಿತರಾಗಿಲ್ಲದಿರುವ ಕಾರಣ ಅವರನ್ನು ಉಪೇಕ್ಷಿಸಿ ಹಣ ಹೂಡಿದವರು ತಮ್ಮ ಲಾಭದ ಪ್ರಗತಿಯ ಲೋಲಾಪ್ತಿಯಲ್ಲಿರುತ್ತಾರೆ.

ಎರಡನೆಯ ಹೂಡಿಕೆದಾರ ಶ್ರಮಿಕ. ಈತನ ಪರಿಶ್ರಮವನ್ನು ವೇತನ ನೀಡಿ ಕೊಂಡುಕೊಳ್ಳಲಾಗುತ್ತದೆ. ಹೀಗಾಗಿ ಆತನನ್ನು ಹೂಡಿಕೆದಾರ ಎಂದೇ ಪರಿಗಣಿಸಲಾಗುವುದಿಲ್ಲ. ಆದರೆ ಈ ಅಂಶ ಗಮನಿಸಿ: ಹೂಡಿದ ಬಂಡವಾಳ ಮೋಸದ ಗಳಿಕೆ ಇರಬಹುದು, ಕಪ್ಪು ಹಣವೂ ಇರಬಹುದು. ಪ್ರತಿ ಸಂಪದದ ಹಿಂದೆ ಅಪರಾಧವಿದೆ ಎಂಬ ಮಾತಿದೆ. ಹಾಗೆಂದಾಕ್ಷಣ ಬಂಡವಾಳ ಹೂಡುವವರೆಲ್ಲರೂ ಮೋಸದ ಹೂಡಿಕೆಯವರು ಎಂದು ಹೇಳದಿದ್ದರೂ ಅವರು ನೀಡಿರುವುದು ತಮ್ಮ ಶ್ರಮದ್ದಲ್ಲದ ಸಂಪತ್ತನ್ನು ಎಂಬುದನ್ನು ಗಮನಿಸಿ. ಆದರೆ ಉತ್ಪಾದನೆಯ ಕಾರ್ಯದಲ್ಲಿ ತೊಡಗಿಸುವ ಪರಿಶ್ರಮವೇನಾದರೂ ಖೋಟಾ ಆಗಿದ್ದರೆ ಉತ್ಪನ್ನ ತಯಾರಾಗುವುದೇ ಇಲ್ಲ ಎಂಬಂಶವನ್ನು ಗಮನಿಸಿ. ಉತ್ಪಾದನೆಯಲ್ಲಿ ಶ್ರಮಿಕ ತೊಡಗಿಸುವುದು ತನ್ನ ದೇಹಶ್ರಮ, ಬೆವರು ಹಾಗೂ ಆಯುಷ್ಯದ ಅಮೂಲ್ಯ ಕ್ಷಣಗಳು. ತನ್ನ ಕುಟುಂಬದ ಸದಸ್ಯರಿಗೆ ನ್ಯಾಯಯುತವಾಗಿ ಸೇರಬೇಕಾಗಿದ್ದ ಅವನ ಆಯುಷ್ಯದ ಭಾಗವನ್ನಾತ ಉತ್ಪಾದನೆಯಲ್ಲಿ ತೊಡಗಿಸುತ್ತಾನೆ. ಮಿಗಿಲಾಗಿ, ಬದುಕುವುದು ಅನಿವಾರ್ಯವಾಗಿ ತನ್ನ ಹೂಡಿಕೆಗೆ ತಕ್ಕಷ್ಟು ಬೆಲೆಯನ್ನು ಆತ ಕೇಳಲಾರ. ಆತನ

## ಭಾರತಕ್ಕೆ ಅಮೆರಿಕ ಯುವಕರ ಲಗ್ಗೆ



ಮಗನನ್ನು ಅಮೆರಿಕಾಕ್ಕೆ ಕಳಿಸ-
-ಬೇಕು ಅಂತಿದ್ರಿ?.. ನೋಡಿ
ಈಗ, ಅಲ್ಲಿಯವರೇ ಈಗ ಭಾರತಕ್ಕೆ
ಬರ್‍ತಿದ್ದಾರಂತೆ !?

ಶ್ರಮ ಹೂಡಿಕೆಯ ಬೆಲೆಯನ್ನು ಉತ್ಪನ್ನ ಮಾರಾಟ ಮಾಡಿದಾಗ ಬರುವ ಲಾಭ ನಿರ್ಧರಿಸಬೇಕು ತಾನೆ ? ಆದರೆ ಹಾಗಾಗುವುದಿಲ್ಲ. ಅಷ್ಟೇ ಅಲ್ಲ, ದುಡಿಮೆಗೆ ಆತನಿಗೆ ಪ್ರತಿಫಲ ನೀಡಲಾಗುವುದೇ ವಿನಾ ಆ ದುಡಿಮೆಯ ಪರಿಣಾಮವಾಗಿ ದೀರ್ಘಾವಧಿಯಲ್ಲಿ ಕಾಣಿಸಿಕೊಳ್ಳುವ ಜಾಡ್ಯಗಳಿಗೆ ಈ ಹೂಡಿಕೆದಾರನೇ ಹೊಣೆ ! ಪ್ರತಿ ಆರ್ಥಿಕ ವಹಿವಾಟಿನ ಪ್ರಗತಿಯ ಗೆಲುವಿನ ಹಿಂದೆ ಶ್ರಮ ಹೂಡಿಕೆದಾರನ ಆಕ್ರಂದನವಿದೆ ಎಂಬುದನ್ನು ಶ್ರಮಿಕರೂ ಗ್ರಾಹಕರೂ ಆಗಿರುವ ಬಹುತೇಕ ಜನರು ಪ್ರಶ್ನಿಸಿಕೊಂಡಿಲ್ಲ. ಅದನ್ನು ನೆನಪು ಮಾಡಿಕೊಡುವುದೇ ಶ್ರಮಿಕ ದಿನಾಚರಣೆಯ ಆಶಯ.

ಬಾಯಿಲ್ಲದೆ ಮೂಕವಾಗಿರುವ ನಿಸರ್ಗ, ಬಾಯಿದ್ದೂ ಅಸಹಾಯಕತೆಯಿರುವ ದುಡಿಯುವ ವರ್ಗ-ಇವರ ಅನಿವಾರ್ಯ ಹೂಡಿಕೆಯಿಂದ ಉತ್ಪತ್ತಿ ಆಗುವ ಹಣದಲ್ಲಿ ಪಾಲು ಹಾಗಿರಲಿ, ಉತ್ಪನ್ನಕ್ಕೆ ದೊರೆಯುವ ಪ್ರಶಸ್ತಿ, ಮಾನ್ಯತೆ, ಮುಲಾಜುಗಳೆಲ್ಲ ಹಣ ಹೂಡಿದವರಿಗೇ ಬರುತ್ತದೆ.

ಹಣ ವಿನಿಯೋಗಿಸಿ, ಶ್ರಮವನ್ನು ಕೊಂಚವೂ ಪಡದೆ, ಅದರ ಲಾಭ, ಮಾನ್ಯತೆ, ಅಧಿಕಾರ, ಪ್ರಶಸ್ತಿ - ಎಲ್ಲವನ್ನೂ ಆನಂದಿಸುವ ವರ್ಗದವರ ಮುಂದೆ ಮಂಕುತಿಮ್ಮನ ಕಗ್ಗ ಎತ್ತುವ ಈ ಪ್ರಶ್ನೆ ಅದೆಷ್ಟು ಪೇಲವ !

> ಅನ್ನವುಣುವಂದು ಕೇಳ್ : ಅದನು ಬೇಯಿಸಿದ ನೀರ್
> ನಿನ್ನ ದುಡಿತದ ಬೆಮರೋ ? ಪೆರರ ಕಣ್ಣೀರೋ ?
> ತಿನ್ನು ನೀಂ ಜಗಕೆ ತಿನಲಿತ್ತನಿತ; ಮಿಕ್ಕೂಟ
> ಜೀರ್ಣಿಸದ ಋಣಶೇಷ - ಮಂಕುತಿಮ್ಮ.

ಮೇಲಿನ ಆತ್ಮಸಾಕ್ಷಿ ನಮ್ಮನ್ನು ಕಾಡುತ್ತಿದೆಯೇ ? ಮಧ್ಯಮ ವರ್ಗದವರನ್ನೇ ಕಾಡದಿದ್ದ ಮೇಲೆ ಇದು ಸಿರಿವಂತರನ್ನು ಕಾಡುವುದೆ - ಆಲೋಚಿಸಿ.

ನಮ್ಮ ಮಕ್ಕಳನ್ನು ಮ್ಯಾನೇಜ್‌ಮೆಂಟ್ (ಆಡಳಿತ ನಿರ್ವಹಣೆ) ಕೋರ್ಸ್‌ಗಳಿಗೆ ಸೇರಿಸಲು ಹಂಬಲಿಸುತ್ತೇವೆ. ಹೂಡಿಕೆ ಕಡಿಮೆ; ಗಳಿಕೆ ಜಾಸ್ತಿ ಎಂದಲ್ಲವೆ ?

ಮೇಲೆ ಉದ್ಧರಿಸಲಾದ 'ಮಂಕುತಿಮ್ಮನ ಕಗ್ಗ' ಪದ್ಯದ ಆಶಯವನ್ನು ಒಪ್ಪುವುದಾದರೆ, ನಮ್ಮ ಬಡತನದ ಬಗೆಗೆ ನಾವು ಹೆಮ್ಮೆಪಟ್ಟುಕೊಳ್ಳಬೇಕು. ಏಕೆಂದರೆ ನಮ್ಮ ಬಡತನದಿಂದ ಸೀಮಿತ ಗ್ರಾಹಕರಾಗಿ ಪ್ರಕೃತಿಗೆ ಆಗುವ ಘಾಸಿಯನ್ನು ಕಡಿಮೆ ಮಾಡಿದ್ದೇವೆ; ದುಡಿವ ವರ್ಗಕ್ಕಾಗುವ ಪರಿಶ್ರಮವನ್ನು ಮಿತಗೊಳಿಸಿದ್ದೇವೆ. ಅಂತೆಯೇ ಭೋಗ ಜೀವನಾಪೇಕ್ಷೆಗಳನ್ನು ಅರ್ಥಾತ್ ಶ್ರೀಮಂತರನ್ನು ಕಂಡು ನಾವು ಹಾಗಾಗಲಿಲ್ಲವೆಂದು ಅಸೂಯೆಪಡದೆ ಅವರ ಬಗ್ಗೆ ಜುಗುಪ್ಸೆ ಪಟ್ಟುಕೊಳ್ಳಲೂಬೇಕು.

ಈಗಲೂ ಆಲೋಚಿಸೋಣ, ನಾವೆಲ್ಲರೂ 'ಜಗತ್ತಿಗೆ ತಿನಲಿತ್ತದ್ದಕ್ಕಿಂತ ಜಗತ್ತಿನಿಂದ ಹೆಚ್ಚು ಕಸಿದು ತಿಂದವರು.' ಈ ವಾಸ್ತವ ಶ್ರಮಿಕ ವರ್ಗದ ಬಗೆಗೆ ಗೌರವ ಸಹಾನುಭೂತಿ ತೋರುವ ವಿನಯವನ್ನು ನಮಗೆ ತಂದುಕೊಡಲಿ. ಕಾರ್ಖಾನೆಯ ಉತ್ಪನ್ನಕ್ಕೆ ಅಂತಾರಾಷ್ಟ್ರೀಯ ಮಾನ್ಯತೆ ದೊರೆತಾಗ ಕೇವಲ ಕಾರ್ಖಾನೆಯ ಮೇಲಧಿಕಾರಿಗೋ ಸಾರ್ವಜನಿಕ ಸಂಪರ್ಕಾಧಿಕಾರಿಗೋ ಅಭಿನಂದನೆ ಸಲ್ಲಿಸುವ ಬದಲು ಪ್ರಕೃತಿಗೂ ಇತರ ಹೂಡಿಕೆದಾರರಿಗೂ ಕೃತಜ್ಞತೆ ಸಲ್ಲಿಸುವ ಸೂಕ್ಷ್ಮಾಭಿಜ್ಞತೆಯನ್ನು ತರಲಿ. ಉತ್ಪಾದನೆಯ ಗುಣಮಟ್ಟ ಅಂತಾರಾಷ್ಟ್ರೀಯ ಮಾನ್ಯತೆ ಪಡೆದರೂ ದುಡಿವ ವರ್ಗಕ್ಕೆ ದೊರೆವ ಪ್ರತಿಫಲ ಸ್ಥಳೀಯ ಮಟ್ಟದಿಂದ ಅಂತಾರಾಷ್ಟ್ರೀಯ ಮಟ್ಟವಿರಲಿ, ಕೊಂಚವೂ ಮೇಲೇರದಿರುವ ಕಟುವಾಸ್ತವ ನಮ್ಮನ್ನು ಬಾಧಿಸುವುದೆ ?

ಶ್ರಮ, ಕೌಶಲ್ಯಗಳು ಕೇವಲ ಬಂಡವಾಳಗಳಷ್ಟೇ ಅಲ್ಲ, ಹಣದೊಂದಿಗೆ ಬೆರೆತು ಉತ್ಪಾದನೆಗೆ ಕಾರಣವಾಗುವ ಅನಿವಾರ್ಯ ಅಗತ್ಯಗಳು ಹಾಗೂ ಖೋಟಾ ಆಗಲಾರದ ಸಾಚಾ ನೋವಿನ ಹೂಡಿಕೆಗಳು. ಕಾರ್ಮಿಕ ದಿನಾಚರಣೆಯ ಈ ಸಂದರ್ಭದಲ್ಲಿ 'ತಿನಲಿತ್ತದ್ದಕಿಂತ ಕಡಿಮೆ ತಿನ್ನುತ್ತಿರುವ', ದುಡಿಯುವ ಶಕ್ತಿ ಕುಂದಿದ ಕಾರಣದಿಂದಲೇ ಮೂಲೆಗುಂಪಾಗಿರುವ -ಶ್ರಮ ಹೂಡಿಕೆದಾರ ಬಂಧುಗಳಿಗೆ ಅಶ್ರುಪೂರ್ಣ ನಮನಗಳು.

**ಪ್ರೊ॥ ಎಮ್. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು

### ಆಟ

ಹೌದು, ಆಡುತಿವೆ
ಗರಿಕೆ ಗರಿಕೆಗಳೊಡನೆ
ಮುತ್ತಿನಂಥ ಮಂಜುಹನಿಗಳು !

**ರತ್ನಾಕರ ಶೆಟ್ಟಿ**
ಮುಂಬಯಿ

# ಹೆಮ್ಮೆ

**ನ**ಮ್ಮ ಅಥವಾ ನಮ್ಮವರ ಏನಾದರೊಂದು ಮಹತ್ಸಾಧನೆ ನಮ್ಮ ಅರಿವಿಗೆ ಬಂದು, ಅದರಿಂದ ನಾವು ಸಂತೋಷಗೊಂಡು ಬೀಗತೊಡಗಿದರೆ, ಅದು ಹೆಮ್ಮೆ ಎನ್ನಿಸಿಕೊಳ್ಳುತ್ತದೆ. ಹಾಗೆ ಹೆಮ್ಮೆಪಡುವುದು ಒಂದು ಅವಗುಣ ಎಂದು ಯಾರೂ ಪರಿಗಣಿಸುವುದಿಲ್ಲ. ಆದರೆ, ಆ ಹೆಮ್ಮೆ ಮೇಲರಿಮೆಗೆ ಎಡೆಗೊಟ್ಟು, ಅದರ ಪರಿಣಾಮವಾಗಿ ಇತರರನ್ನು ಕೀಳಾಗಿ ಕಾಣತೊಡಗಿದರೆ, ಅದು ಗರ್ವ, ಅಹಂಕಾರ ಎನ್ನಿಸಿಕೊಳ್ಳುತ್ತದೆ. ಅದು ನಿಜವಾಗಿಯೂ ಒಂದು ಅವಗುಣ. ಹೆಮ್ಮೆ ಮತ್ತು ಗರ್ವಗಳಿಗಿರುವ ವ್ಯತ್ಯಾಸ ನಿಜವಾದುದು; ಆದರೆ ಸೂಕ್ಷ್ಮವಾದುದು.

ನಾವು ಹೆಮ್ಮೆಪಡಲು ಕಾರಣವಾದ ನಮ್ಮ ಯಾವುದೇ ಹೆಚ್ಚುಗಾರಿಕೆ ನಿಜವಾದುದೂ ಸಮರ್ಥನೀಯವಾದುದೂ ಆಗಿರಬೇಕು. ಆಗ ಮಾತ್ರ ಅದಕ್ಕೆ ಬೆಲೆ. ಅನೇಕ ವೇಳೆ ಕೆಲವರು, ಬಹುತೇಕ ಕೀಳರಿಮೆಯ ಕಾರಣ ಆ ಕೀಳರಿಮೆಯನ್ನು ಮುಚ್ಚಿಹಾಕುವ ಪ್ರಯತ್ನದಲ್ಲಿ ಹುಸಿ 'ಮಹತ್ಸಾಧನೆ'ಯೊಂದನ್ನು ಕಲ್ಪಿಸಿಕೊಂಡು, ಅದರ ಬಗ್ಗೆ ಹೆಮ್ಮೆ ಪಡುವುದುಂಟು. ಹಾಗೆ ಮಾಡುವುದು ಅಗ್ಗದ ನಡವಳಿಕೆ; ತಿಳಿದವರ ದೃಷ್ಟಿಯಲ್ಲಿ ಅದು ನಗೆಪಾಟಲು. ಕೆಲವು ವರ್ಷಗಳ ಹಿಂದೆ ಮೈಸೂರಿನಲ್ಲಿ ಯಾರದೋ ಮನೆಯಲ್ಲಿ ಸಿಕ್ಕಿದ ಹಲವು ಶತಮಾನಗಳಷ್ಟು ಹಿಂದಿನ ತಾಳೆಗರಿ ಗ್ರಂಥದಲ್ಲಿ ವಿಮಾನವನ್ನು ರಚಿಸುವ ಸಂಪೂರ್ಣ ವಿವರಗಳು ಇವೆ ಎಂಬ ಮತ್ತು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ವಿಜ್ಞಾನಿಗಳು ಅದನ್ನು ಓದಿ ದಿಗ್ಭ್ರಮೆಗೊಂಡರೆಂಬ ಸುದ್ದಿ ಎಲ್ಲ ವರ್ತಮಾನ ಪತ್ರಿಕೆಗಳಲ್ಲಿಯೂ ದಪ್ಪ ಅಕ್ಷರಗಳಲ್ಲಿ ಕಾಣಿಸಿಕೊಂಡಿತು. ಹಲವು ಶತಮಾನಗಳಷ್ಟು ಹಿಂದಿನ ನಮ್ಮ ಪೂರ್ವಿಕರಿಗೆ ವಾಯುಯಾನ ಗೊತ್ತಿತ್ತು ಎಂದು ಕೆಲವು 'ದೇಶಭಕ್ತರು' ಗುಲ್ಲೆಬ್ಬಿಸಿದರು. ಎರಡು ಮೂರು ದಿನ ಎಲ್ಲ ಪತ್ರಿಕೆಗಳಲ್ಲಿಯೂ ಗಲಾಟೆ ಮಾಡಿದ ಆ ಸುದ್ದಿ ಕ್ರಮೇಣ ಕ್ಷೀಣಗೊಂಡು ಎಲ್ಲವೂ ತಣ್ಣಗಾಯಿತು. ಈಗ ಬಹುಪಾಲು ಜನ ಅದನ್ನು ಮರೆತೇಬಿಟ್ಟಿದ್ದಾರೆ.

ಆ ಸುದ್ದಿ ಎಲ್ಲರ ಬಾಯಿಯಲ್ಲಿಯೂ ಸುಳಿದಾಡುತ್ತಿದ್ದಾಗ ನಮ್ಮಲ್ಲಿ ಕೆಲವರು, ಇತಿಹಾಸ ಪ್ರಜ್ಞೆ ಮತ್ತು ಸಾಮಾನ್ಯ ಪರಿಜ್ಞಾನ ಇದ್ದವರು, ಅಪಹಾಸ್ಯದ ನಗು ಸೂಸುತ್ತಾ ಸುದ್ದಿಯನ್ನು ತಳ್ಳಿಹಾಕಿದರು. ಏಕೆಂದರೆ, ವಾಯುಯಾನಕ್ಕೆ ಸಂಬಂಧಿಸಿದ ತಂತ್ರಜ್ಞಾನ ನಮ್ಮ ಪೂರ್ವಿಕರಿಗೆ ಕರಗತವಾಗಿದ್ದುದು ನಿಜವೇ ಆಗಿದ್ದರೆ, ಅದಕ್ಕೆ ನಿಕಟ ಸಂಬಂಧವಿರುವ ಮತ್ತು ಅದಕ್ಕೆ ಪೂರಕವಾದ ಇನ್ನೂ ಹಲವಾರು ತಂತ್ರಜ್ಞಾನಗಳು ಕರಗತವಾಗಿದ್ದಿರಬೇಕು. ಅತಿ ಹಗುರವಾದ ಲೋಹ ಮತ್ತು ಮಿಶ್ರಲೋಹಗಳಿಗೆ ಸಂಬಂಧಿಸಿದ ತಂತ್ರಜ್ಞಾನ; ಯಾನದಲ್ಲಿರುವ ವಿಮಾನಕ್ಕೆ ಸತತವಾಗಿ ಶಕ್ತಿಯನ್ನೊದಗಿಸುವ ಶಕ್ತಿ ಆಕರ ಮತ್ತು ಅದಕ್ಕೆ ಸಂಬಂಧಿಸಿದ ತಂತ್ರಜ್ಞಾನ ಇತ್ಯಾದಿ. ಆ ವಿವಿಧ ತಂತ್ರಜ್ಞಾನಗಳು ಆಗಿನವರಿಗೆ ಕರಗತವಾಗಿದ್ದವು ಎಂಬುದಕ್ಕೆ ಯಾವ ಸಾಕ್ಷ್ಯಾಧಾರವೂ ಇಲ್ಲದಿರುವಾಗ ವಾಯುಯಾನ ಅವರಿಗೆ ಗೊತ್ತಿತ್ತು ಎಂದು ನಂಬುವುದು ಮೂರ್ಖತನ.

ಭಾರತೀಯರು ನಿಜವಾಗಿಯೂ ಹೆಮ್ಮೆಪಡಬಹುದಾದ ಅನೇಕ ವಿಷಯಗಳಿವೆ. ನಮ್ಮ ಈ 'ದೇಶಭಕ್ತ'ರಲ್ಲಿ ಬಹುಪಾಲು ಜನರಿಗೆ ಬಹುಶಃ ಅವು ಗೊತ್ತಿಲ್ಲ. ಉದಾಹರಣೆಗೆ, ೦, ೧, ೨,....೯ ಎಂಬ ಹತ್ತು ಅಂಕಿಗಳನ್ನು ಬಳಸಿಕೊಂಡು ಯಾವ ಸಂಖ್ಯೆಯನ್ನು ಬೇಕಾದರೂ ಬರೆಯಬಹುದಷ್ಟೆ. ಸಂಖ್ಯೆಗಳನ್ನು ಬರೆಯುವ ಈ ಪದ್ಧತಿಯನ್ನು ಜಗತ್ತಿಗೆ ನೀಡಿದವರು ಭಾರತೀಯರು. ಬಾಲ್ಯದಿಂದಲೂ ನಾವು ಈ ಪದ್ಧತಿಯನ್ನು ಲೀಲಾಜಾಲವಾಗಿ ಬಳಸುತ್ತಿರುವುದರಿಂದ ಇದೇನು ದೊಡ್ಡ ವಿಷಯ ಎಂದು ನಮಗನ್ನಿಸಬಹುದು. ನಮ್ಮವರು ಜಗತ್ತಿಗೆ ನೀಡಿರುವ ಈ ಕೊಡುಗೆ ಎಷ್ಟು ಅಮೂಲ್ಯವಾದುದೆಂಬುದು ನಮಗೆ ಮನವರಿಕೆಯಾಗಬೇಕಾದರೆ, ಯೂರೋಪಿಯನ್ನರು ಈ ಪದ್ಧತಿಯನ್ನು ಪರಿಚಯ ಮಾಡಿಕೊಳ್ಳುವುದಕ್ಕೆ ಮುಂಚೆ ಅವರು ಹೇಗೆ ತೊಳಲಾಡುತ್ತಿದ್ದರು ಎಂಬುದನ್ನು ತಿಳಿದುಕೊಳ್ಳಬೇಕು.

ಕ್ರಿಸ್ತಪೂರ್ವ ಕೆಲವು ಶತಮಾನಗಳಷ್ಟು ಹಿಂದಿನಿಂದಲೂ ನಮ್ಮವರು ಅಂಕಿಗಳನ್ನು ಬಳಸುತ್ತಿರುವರಾದರೂ ಯೂರೋಪಿಯನ್ನರಿಗೆ ಕ್ರಿ.ಶ. ಸುಮಾರು ಏಳನೆಯ ಶತಮಾನದವರೆಗೂ ಅಂಕಿಗಳ ಪರಿಚಯವೇ ಇರಲಿಲ್ಲ. ಸಂಖ್ಯೆಗಳನ್ನು ಬರೆಯಲು ಅವರು ವರ್ಣಮಾಲೆಯ ಅಕ್ಷರಗಳಿಗೆ ಬೇರೆ ಬೇರೆ ಬೆಲೆಗಳನ್ನು ಕೊಟ್ಟು ಅವುಗಳ ನೆರವಿನಿಂದ ಸಂಖ್ಯೆಗಳನ್ನು ಬರೆಯಲು ತೊಡಕು ತೊಡಕಾದ ಪದ್ಧತಿಗಳನ್ನು ಏರ್ಪಡಿಸಿಕೊಂಡಿದ್ದರು. ಅವುಗಳ ಪೈಕಿ ರೋಮನ್ ಪದ್ಧತಿ ಎಂಬುದನ್ನು ಈಗಲೂ ಕೆಲವು ಸಂದರ್ಭಗಳಲ್ಲಿ ಸೀಮಿತವಾಗಿ ಉಪಯೋಗಿಸುತ್ತಿರುವುದರಿಂದ ಅದರ ಪರಿಚಯ ನಮಗಿದೆ. ಆ ಪದ್ಧತಿಯಲ್ಲಿ I = ಒಂದು, V = ಐದು, X = ಹತ್ತು, L = ಐವತ್ತು, C = ನೂರು, D = ಐನೂರು, M = ಸಾವಿರ. ಪುಸ್ತಕದ ಅಧ್ಯಾಯಗಳ ಕ್ರಮಸಂಖ್ಯೆಗಳನ್ನು ಸೂಚಿಸುವುದಕ್ಕೆ, ಇತರ ಅಂಥ ಬೇರಾವುದಾದರೂ ಕ್ರಮಸಂಖ್ಯೆಗಳನ್ನು ಸೂಚಿಸುವುದಕ್ಕೆ ಮಾತ್ರ ಈ ರೋಮನ್ ಪದ್ಧತಿಯನ್ನು ಬಳಸುತ್ತಿರುವುದರಿಂದ ಅಷ್ಟೇನೂ ತೊಂದರೆಯಾಗುವುದಿಲ್ಲ. ದೊಡ್ಡ ದೊಡ್ಡ ಸಂಖ್ಯೆಗಳನ್ನು ಈ ಪದ್ಧತಿಯಲ್ಲಿ ಬರೆಯುವುದು ಪ್ರಯಾಸಕರ. ೧೮೭೬ ಎಂಬುದು ರೋಮನ್ ಪದ್ಧತಿಯಲ್ಲಿ MDCCCLXXVI ಆಗುತ್ತದೆ. ಇನ್ನೂ ದೊಡ್ಡ ಸಂಖ್ಯೆಗಳನ್ನು ಬರೆಯುವುದು ಹೇಗೆ? ಕೂಡುವುದು, ಕಳೆಯುವುದು, ಗುಣಿಸುವುದು ಮುಂತಾದವನ್ನು ನಿಭಾಯಿಸುವುದು ಹೇಗೆ? ಯೂರೋಪಿಯನ್ನರು ಆಗ ಎಷ್ಟು ಕಷ್ಟಪಡುತ್ತಿದ್ದರೋ ಅನ್ನಿಸುತ್ತದೆ. ಅಂಕಿಗಳ ನೆರವಿನಿಂದ ಸಂಖ್ಯೆಗಳನ್ನು ಬರೆಯುವ ನಮ್ಮ ಪದ್ಧತಿಯ ಪರಿಚಯ ಅವರಿಗೆ ಆದಾಗ, ಅವರು ನೆಮ್ಮದಿಯ ನಿಟ್ಟುಸಿರು ಬಿಟ್ಟಿರಬಹುದು. ಕ್ರಿ.ಶ. ೭೦೦-೧೧೦೦ರ ಅವಧಿಯಲ್ಲಿ ನಮ್ಮಿಂದ ಈ ಪದ್ಧತಿಯನ್ನು ಕಲಿತ ಅರಬ್ಬರು ಯೂರೋಪ್‌ಗೆ ಹೋಗಿ ಅಲ್ಲಿಯವರಿಗೆ ಅದನ್ನು ಕಲಿಸಿದರು. ಅದರಿಂದಾಗಿ ಯೂರೋಪ್‌ನಲ್ಲಿ ಇಂದು ಈ ಅಂಕಿಗಳನ್ನು ಹಿಂದು-ಅರ್‍ಯಾಬಿಕ್ ಅಂಕಿಗಳು ಎಂದು ಕರೆಯುತ್ತಾರೆ.

ಈ ಸಂಖ್ಯಾ ಪದ್ಧತಿಗೆ ಆಧಾರ ಹತ್ತು, ಆದುದರಿಂದ ಇದು ದಶಮಾನ ಪದ್ಧತಿ ಎನ್ನಿಸಿಕೊಂಡಿದೆ. ದಶಮಾನ ಪದ್ಧತಿಯಲ್ಲಿ ಸಂಖ್ಯೆಯೊಂದನ್ನು ಬರೆದಾಗ, ಸಂಖ್ಯೆಯಲ್ಲಿ

**ಯೂರೋಪಿಯನ್ ರಾಷ್ಟ್ರಗಳು ನಾವಿಕ ರಾಷ್ಟ್ರಗಳಾದುದು, ಅವುಗಳ ನಡುವೆ ಪೈಪೋಟಿ ಹುಟ್ಟಿ, ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಅವು ಉತ್ತರ ಮತ್ತು ದಕ್ಷಿಣ ಅಮೆರಿಕ ಖಂಡಗಳಿಗೆ, ಆಫ್ರಿಕ, ಏಷ್ಯಾ ಮತ್ತು ಆಸ್ಟ್ರೇಲಿಯ ಖಂಡಗಳಿಗೆ ಯಾನ ಮಾಡಿ, ವಸಾಹತುಗಳನ್ನು ಸ್ಥಾಪಿಸಿ, ಸಾಮ್ರಾಜ್ಯಶಾಹೀ ರಾಷ್ಟ್ರಗಳಾದುದು ಒಂದು ಐತಿಹಾಸಿಕ ಆಕಸ್ಮಿಕ. ವಸಾಹತುಗಳನ್ನು ಶೋಷಿಸಿ ಅವು ಸಂಪದ್ಭರಿತ ರಾಷ್ಟ್ರಗಳಾದುವು. ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಗೆ ಪ್ರೋತ್ಸಾಹ ದೊರೆತು ಅವು ಮುಂದುವರಿದ ರಾಷ್ಟ್ರಗಳಾದುವು; ಶೋಷಣೆಗೊಳಗಾದ ನಮ್ಮ ದೇಶದಂಥ ಅನೇಕ ದೇಶಗಳು ಹಿಂದುಳಿದ ದೇಶಗಳಾದುವು. ಇಪ್ಪತ್ತನೆಯ ಶತಮಾನದಲ್ಲಿ ಪರಿಸ್ಥಿತಿ ಬದಲಾಯಿಸಿದೆ. ದಾಸ್ಯದಲ್ಲಿದ್ದ ದೇಶಗಳು ಒಂದೊಂದಾಗಿ ಸ್ವತಂತ್ರ ರಾಷ್ಟ್ರಗಳಾಗಿ, ಪ್ರಗತಿಯತ್ತ ಹೆಜ್ಜೆ ಇಡುತ್ತಿವೆ. ನಮ್ಮ 'ದೇಶಭಕ್ತ'ರು ಈ ವಸ್ತುನಿಷ್ಠ ದೃಷ್ಟಿಯನ್ನು ಬೆಳೆಸಿಕೊಂಡು, ನಾವು ಯಾವುದರ ಬಗ್ಗೆ ಸಮರ್ಥನೀಯವಾಗಿ ಹೆಮ್ಮೆಪಡಬಹುದೋ ಅದಕ್ಕೆ ಮಾತ್ರ ತಮ್ಮ ಹೆಮ್ಮೆಯನ್ನು ಸೀಮಿತಗೊಳಿಸುವುದು ಆರೋಗ್ಯಕರ.**

**ಪ್ರೊ॥ ಜೆ. ಆರ್. ಲಕ್ಷ್ಮಣರಾವ್**

'ಒಂದು' ಎಷ್ಟಿವೆ ಎಂಬುದನ್ನು ಬಲತುದಿಯ ಅಂಕಿ ಹೇಳುತ್ತದೆ. 'ಹತ್ತು'ಗಳು ಎಷ್ಟಿವೆ ಎಂಬುದನ್ನು ಅದರ ಹಿಂದಿರುವ ಅಂಕಿ ಹೇಳುತ್ತದೆ. ಅದರ ಹಿಂದಿನ ಅಂಕಿ 'ನೂರು'ಗಳನ್ನೂ ಅದರ ಹಿಂದಿನದು 'ಸಾವಿರ'ಗಳನ್ನೂ ಹೇಳುತ್ತವೆ. ಹೀಗೆ ಸಾಗುವುದರಿಂದ ಎಷ್ಟೇ ದೊಡ್ಡ ಸಂಖ್ಯೆಯಾದರೂ ಸರಿಯೇ, ಅದನ್ನು ಈ ಪದ್ಧತಿಯಲ್ಲಿ ಸುಲಭವಾಗಿ ಬರೆದುಬಿಡಬಹುದು. ಹಾಗೆ ಬರೆದದ್ದನ್ನು ಅಷ್ಟೇ ಸುಲಭವಾಗಿ ಓದಿಬಿಡಬಹುದು. ಯಾವುದಾದರೂ ಸಂಖ್ಯೆಯಲ್ಲಿ ನೂರುಗಳಿಲ್ಲದಿದ್ದರೆ ನೂರರ ಸ್ಥಾನದಲ್ಲಿ ೦ (ಸೊನ್ನೆ) ಎಂಬ ಅಂಕಿಯನ್ನು ಬರೆಯುವುದು ಈ ಪದ್ಧತಿಯ ಕ್ರಮ. ನಾಲ್ಕು ಸಾವಿರದ ಇಪ್ಪತ್ತಮೂರರಲ್ಲಿ ನೂರುಗಳಿಲ್ಲವಾದ್ದರಿಂದ ಅದು ೪೦೨೩. ಅಂತೆಯೇ ಮೂರು ಸಾವಿರದ ಆರುನೂರಾಎಂಟರಲ್ಲಿ ಹತ್ತುಗಳಿಲ್ಲದಿರುವುದರಿಂದ ಅದು ೩೬೦೮. ಏನೂ ಇಲ್ಲ ಎಂಬುದನ್ನು ಸೂಚಿಸಲು ಅಂಕಿಯೊಂದನ್ನು ಬಳಸುವ ಈ ಕಲ್ಪನೆ ದಶಮಾನ ಪದ್ಧತಿಯ ಬಹುಮುಖ್ಯ ಅಂಶವಾಗಿರುವುದರಿಂದ ಅನೇಕ ಗಣಿತಶಾಸ್ತ್ರಜ್ಞರು 'ದಶಮಾನ ಪದ್ಧತಿ'ಗಿಂತ ಹೆಚ್ಚಾಗಿ 'ಸೊನ್ನೆ'ಗೆ ಹೆಚ್ಚಿನ ಪ್ರಾಮುಖ್ಯ ನೀಡಿ 'ಸೊನ್ನೆ' ಎಂಬುದು ಭಾರತದ ಅಮೂಲ್ಯ ಕೊಡುಗೆ ಎನ್ನುವುದುಂಟು.

ಭಾರತೀಯರು ಹೆಮ್ಮೆಪಡಬಹುದಾದ ಇನ್ನೊಂದು ಮಹತ್ಸಾಧನೆ ಎಂದರೆ ನಾವು ನಮ್ಮ ಭಾಷೆಗಳಿಗೆ ನಿರ್ಮಿಸಿಕೊಂಡಿರುವ ಲಿಪಿಗಳು. ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳಲ್ಲಿ ಮತ್ತು ಅರ‍್ಯಾಬಿಕ್, ಪರ್ಷಿಯನ್ ಭಾಷೆಗಳಲ್ಲಿ ಯಾವುದಾದರೊಂದು ಪದವನ್ನು ಬರೆಯಬೇಕಾದಾಗ, ಯಾವ ಯಾವ ಅಕ್ಷರಗಳನ್ನು ಸೇರಿಸಿದರೆ ಆ ಪದ ಆಗುತ್ತದೆ (ಸ್ಪೆಲಿಂಗ್) ಎಂದು ಗೊತ್ತಿದ್ದರೆ ಮಾತ್ರ ಅದನ್ನು ಬರೆಯಲು ಸಾಧ್ಯ. ಬರೆದಿರುವ ಯಾವುದೇ ಪದವನ್ನು ಓದಬೇಕಾಗಿ ಬಂದಾಗ ಅದನ್ನು ಹೇಗೆ ಉಚ್ಚರಿಸಬೇಕು ಎಂದು ಗೊತ್ತಿರಬೇಕು. ಭಾರತೀಯ ಭಾಷೆಗಳಲ್ಲಿ ಹಾಗಲ್ಲ. ಕಿವಿಯಲ್ಲಿ ಕೇಳಿದ ಯಾವ ಪದವೇ ಆಗಲಿ, ಅದನ್ನು ಬರೆದುಬಿಡಬಹುದು; ಬರೆದಿರುವ ಯಾವ ಪದವೇ ಆಗಲಿ, ಅದನ್ನು ಓದಬಹುದು. ಅದು ಸಾಧ್ಯವೇಕೆಂದರೆ, ಭಾರತೀಯ ಭಾಷೆಗಳ ಲಿಪಿಗಳು ಉಚ್ಚರಣ ಶಾಸ್ತ್ರದ (phonetics) ಆಧಾರದ ಮೇಲೆ ರೂಪುಗೊಂಡಂಥವು. ಭಾಷಾ ವಿಜ್ಞಾನ (linguistics) ಮತ್ತು ಅದರ ಶಾಖೆಯಾದ ಉಚ್ಚರಣಶಾಸ್ತ್ರ ಅಥವಾ ಸ್ವನವಿಜ್ಞಾನ (phonetics) ಬೆಳೆದುಬಂದಿರುವುದು ಕಳೆದ ಒಂದೆರಡು ಶತಮಾನಗಳಲ್ಲಿ. ಆದರೆ, ಅದಕ್ಕೆ ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ನಮ್ಮವರು ಉಚ್ಚರಣಶಾಸ್ತ್ರದ ತತ್ವಗಳನ್ನು ಗುರುತಿಸಿ, ಮನನ ಮಾಡಿ, ಅವುಗಳ ಆಧಾರದ ಮೇಲೆ ಲಿಪಿಯನ್ನು ನಿರ್ಮಿಸಿಕೊಂಡಿದ್ದರು ಎಂಬುದರಲ್ಲಿ ಸಂದೇಹವಿಲ್ಲ. ನಮಗೆ ಇದುವರೆಗೆ ಸಿಕ್ಕಿರುವ ಅತ್ಯಂತ ಪ್ರಾಚೀನ ಲಿಪಿ ಕ್ರಿ.ಪೂ. ಮೂರನೆಯ ಶತಮಾನದ ಅಶೋಕನ ಶಾಸನಗಳಲ್ಲಿ ಕಾಣಬರುವ ಬ್ರಾಹ್ಮೀ ಲಿಪಿ. ಅದರ ಅಕ್ಷರಗಳನ್ನು ಸ್ವಲ್ಪ ಸ್ವಲ್ಪ ಮಾರ್ಪಡಿಸಿಕೊಂಡು ಉಪಯೋಗಿಸುತ್ತಿರುವಂಥವೇ ಇಂದಿನ ಭಾರತೀಯ ಲಿಪಿಗಳು. ಇಂದು ಸಂಸ್ಕೃತ ಹಾಗೂ ಹಿಂದಿ ಭಾಷೆಗಳಿಗೆ ಬಳಸುತ್ತಿರುವ ದೇವನಾಗರಿ ಲಿಪಿ ಮತ್ತು ಅದರಿಂದ ಜನಿಸಿದ ಬಂಗಾಳೀ, ಗುಜರಾತೀ ಮುಂತಾದ ಉತ್ತರ ಭಾರತೀಯ ಲಿಪಿಗಳೂ ಅಷ್ಟೆ. ಕನ್ನಡ, ತೆಲುಗು ಮುಂತಾದ ದಕ್ಷಿಣ ಭಾರತೀಯ ಲಿಪಿಗಳೂ ಅಷ್ಟೇ.

ಮೊದಲನೆಯದಾಗಿ ಸ್ವರಗಳು ಮತ್ತು ವ್ಯಂಜನಗಳಿಗಿರುವ ವ್ಯತ್ಯಾಸವನ್ನು ಗುರುತಿಸಿದ ನಮ್ಮ ಪೂರ್ವಿಕರು ವರ್ಣಮಾಲೆಯಲ್ಲಿ ಅವುಗಳನ್ನು ಪ್ರತ್ಯೇಕಿಸಿ ಇಟ್ಟರು. ಭಾರತೀಯ ಭಾಷೆಗಳ ವರ್ಣಮಾಲೆಗಳಲ್ಲಿ ವಿನಾ ಬೇರೆ ಯಾವ ವರ್ಣಮಾಲೆಯಲ್ಲೂ ಹೀಗೆ ಪ್ರತ್ಯೇಕಿಸಿಲ್ಲ. ಗಂಟಲು, ನಾಲಿಗೆ, ಅಂಗುಳು ಮತ್ತು ತುಟಿಗಳನ್ನು ಬಳಸದೆಯೇ ಉಚ್ಚರಿಸಬಹುದಾದ ಅ ಆ ಇ ಈ ಮುಂತಾದವು ಸ್ವರಗಳು. ಉಳಿದವು ವ್ಯಂಜನಗಳು. ಎರಡನೆಯದಾಗಿ, ವ್ಯಂಜನಗಳಲ್ಲಿ ವರ್ಗೀಯ ವ್ಯಂಜನಗಳು ಮತ್ತು ಅವರ್ಗೀಯ ವ್ಯಂಜನಗಳು ಎಂಬ ಎರಡು ಬಗೆಯನ್ನು ಗುರುತಿಸಿದರು. ಒಂದೊಂದು ವರ್ಗದಲ್ಲಿಯೂ ಐದು ಅಕ್ಷರಗಳಿರುವ ಕ, ಚ, ಟ, ತ, ಪ ಎಂದು ಐದು ವರ್ಗಗಳನ್ನು ಗುರುತಿಸಿ, ಉಳಿದವನ್ನು ಅವರ್ಗೀಯ ವ್ಯಂಜನಗಳು ಎಂದು ಕರೆದು ವರ್ಣಮಾಲೆಯ ಕೊನೆಯಲ್ಲಿ ಅವುಗಳನ್ನಿಟ್ಟರು. ಕ, ಚ, ಟ, ತ, ಪ ವರ್ಗಗಳನ್ನು ವರ್ಣಮಾಲೆಯಲ್ಲಿ ಆ ಅನುಕ್ರಮದಲ್ಲಿಡುವುದಕ್ಕೂ ಕಾರಣವಿದೆ. ಕ ವರ್ಗದ ವ್ಯಂಜನಗಳು ಬಾಯಿಯಲ್ಲಿ ಅತ್ಯಂತ ಒಳಗಡೆ ಗಂಟಲಿನಲ್ಲಿ ಹುಟ್ಟುತ್ತವೆ. ಅಲ್ಲಿಂದ ಸ್ವಲ್ಪ ಮುಂದೆ ಇರುವ ಅಂಗುಳು ಭಾಗವನ್ನು ನಾಲಗೆ ಸಂಧಿಸಿ ಚ ವರ್ಗದ ವ್ಯಂಜನಗಳನ್ನು ಉತ್ಪತ್ತಿ ಮಾಡುತ್ತದೆ. ಇನ್ನೂ ಮುಂದಿರುವ ಅಂಗುಳಿನ ಏಣನ್ನು ನಾಲಿಗೆಯ ತುದಿ ಸಂಧಿಸಿ ಟ ವರ್ಗದ ವ್ಯಂಜನಗಳನ್ನು ಉತ್ಪತ್ತಿ ಮಾಡುತ್ತದೆ. ತ ವರ್ಗದ ವ್ಯಂಜನಗಳನ್ನು ಉತ್ಪತ್ತಿ ಮಾಡಲು ನಾಲಗೆ ಮೇಲುಸಾಲಿನ ಹಲ್ಲುಗಳ ಒಳಮೈಯನ್ನು ಸಂಧಿಸಲೇಬೇಕಾಗುತ್ತದೆ. ಪ ವರ್ಗದ ವ್ಯಂಜನಗಳು ಹುಟ್ಟುವುದು ತುಟಿಗಳ ಪರಸ್ಪರ ಸಂಪರ್ಕದಿಂದ. ಪ್ರತಿಯೊಂದು ವರ್ಗದಲ್ಲಿಯೂ ಮೊದಲ ಎರಡು ಅಕ್ಷರಗಳು ಅಘೋಷ (un-voiced) ವಾದುದರಿಂದ ಪಿಸುಮಾತಿನಲ್ಲಿ ಉಚ್ಚರಿಸಬಹುದು. ಅನಂತರದ ಎರಡು ಅಕ್ಷರಗಳು ಘೋಷ (voiced)ವಾದ್ದರಿಂದ ಅವುಗಳನ್ನು ಪಿಸುಮಾತಿನಲ್ಲಿ ಉಚ್ಚರಿಸಲು ಆಗುವುದಿಲ್ಲ. ಕೊನೆಯ ಅಕ್ಷರ ನಾಸಿಕ (nasal) ಅಂದರೆ ಮೂಗಿನ ನೆರವಿನಿಂದ ಉಚ್ಚರಿಸಬೇಕಾಗುವುದು. ಐದು ವರ್ಗಗಳಲ್ಲಿಯೂ ಅಘೋಷ ಮತ್ತು ಘೋಷ ಅಕ್ಷರಗಳ ಪೈಕಿ ಮೊದಲನೆಯದು ಅಲ್ಪಪ್ರಾಣ (un-aspirated); ಎರಡನೆಯದು ಮಹಾಪ್ರಾಣ (aspirated). ಎರಡು ಸಾವಿರ ವರ್ಷಗಳಿಗೂ ಹಿಂದೆ ಸ್ವನ ವಿಜ್ಞಾನದ ತತ್ವಗಳ ಆಧಾರದ ಮೇಲೆ ನಿರ್ಮಿಸಿದ ಇಂಥ ಸುವ್ಯವಸ್ಥಿತ ಲಿಪಿಯನ್ನು ನಮ್ಮವರು ಬಳಕೆಗೆ ತಂದ ಬಗ್ಗೆ ನಾವು ಹೆಮ್ಮೆಪಡಬೇಡವೇ ?

ಭಾರತೀಯರು ಇನ್ನೂ ಹಲವಾರು ವಿಷಯಗಳ ಬಗ್ಗೆ ಹೆಮ್ಮೆಪಡಬಹುದು. ನಮ್ಮ ಪೂರ್ವಿಕರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರುವ ಕೃಷಿ ಗಮನಾರ್ಹವಾದುದು. ಅವರು ರಚಿಸಿರುವ ಮಹಾಕಾವ್ಯಗಳು, ನಾಟಕಗಳು ಮುಂತಾದವಕ್ಕೆ ಸರಿಸಾಟಿಯಾದ ವಿದೇಶೀ ಕೃತಿಗಳು ತುಂಬ ವಿರಳ. ನಮ್ಮ ದೇಶದಲ್ಲಿ ವಿಕಸಿಸಿರುವ ಎರಡು ಸಂಗೀತ ಪದ್ಧತಿಗಳಾದ ಉತ್ತರಾದಿ ಮತ್ತು ದಕ್ಷಿಣಾದಿ, ಎರಡರಲ್ಲೂ ಪ್ರಮುಖ ಪಾತ್ರ ವಹಿಸುವ ಮತ್ತು ಭಾರತೀಯ ಸಂಗೀತಕ್ಕೆ ವಿಶಿಷ್ಟವಾದ 'ರಾಗ'ದ ಪರಿಕಲ್ಪನೆ ಅದ್ಭುತವಾದುದೆಂದು ಪಾಶ್ಚಿಮಾತ್ಯರು ಅದಕ್ಕೆ ಮಾರುಹೋಗಿದ್ದಾರೆ. ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ಶಿಲ್ಪಕೃತಿಗಳು ಜಗದ್ವಿಖ್ಯಾತವಾಗಿವೆ.

ನಮ್ಮವರಲ್ಲಿ ಅನೇಕರಿಗೆ ಇದೆಲ್ಲದರ ಬಗ್ಗೆ ಅರಿವು ಇದ್ದಂತೆ ಕಾಣುವುದಿಲ್ಲ. ಹತ್ತೊಂಬತ್ತನೆಯ ಶತಮಾನ ಮತ್ತು ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಯೂರೋಪಿಯನ್ ರಾಷ್ಟ್ರಗಳು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಧಿಸಿದ ಅಸಾಮಾನ್ಯ ಪ್ರಗತಿಯನ್ನು ಕಂಡು ಕೀಳರಿಮೆ ಬೆಳೆಸಿಕೊಂಡ ಆ ಮಂದಿ ಬಾಲಿಶವಾಗಿ, ''ಇದು ಹೊಸದೇನಲ್ಲ ನಮ್ಮ ಪೂರ್ವಿಕರಿಗೆ ಇದೆಲ್ಲ ಗೊತ್ತಿತ್ತು'' ಎಂದೂ ''ವೇದಗಳಲ್ಲಿ ಇದೆಲ್ಲ ಇದೆ'' ಎಂದೂ ಬಡಾಯಿ ಕೊಚ್ಚಿಕೊಂಡು ನಗೆಪಾಟಲಾಗುತ್ತಿದ್ದಾರೆ.

ಶಾಂತಚಿತ್ತರಾಗಿ ಯೋಚಿಸಿದರೆ, ನಮಗೆ ಈ ಬಗೆಯ ಕೀಳರಿಮೆ ಬೇಕಿಲ್ಲವೆಂಬ ವಿವೇಕ ಮೂಡುತ್ತದೆ. ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್, ಪೋರ್ಚುಗಲ್, ನೆದರ್‌ಲ್ಯಾಂಡ್ಸ್ ಮುಂತಾದ ಹಲವಾರು ರಾಷ್ಟ್ರಗಳಿಗೆಲ್ಲ ನೌಕಾಯಾನ ಕೈಗೊಳ್ಳಲು ಪ್ರಶಸ್ತವಾದ ಕಡಲಕರೆ ಯಥೇಚ್ಛವಾಗಿದ್ದು, ಆ ಯೂರೋಪಿಯನ್ ರಾಷ್ಟ್ರಗಳು ನಾವಿಕ ರಾಷ್ಟ್ರಗಳಾದುದು, ಅವುಗಳ ನಡುವೆ ಪೈಪೋಟಿ ಹುಟ್ಟಿ, ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಅವು ಉತ್ತರ ಮತ್ತು ದಕ್ಷಿಣ ಅಮೆರಿಕ ಖಂಡಗಳಿಗೆ, ಆಫ್ರಿಕ, ಏಷ್ಯಾ ಮತ್ತು ಆಸ್ಟ್ರೇಲಿಯ ಖಂಡಗಳಿಗೆ ಯಾನ ಮಾಡಿ, ವಸಾಹತುಗಳನ್ನು ಸ್ಥಾಪಿಸಿ, ಸಾಮ್ರಾಜ್ಯಶಾಹೀ ರಾಷ್ಟ್ರಗಳಾದುದು ಒಂದು ಐತಿಹಾಸಿಕ ಆಕಸ್ಮಿಕ. ವಸಾಹತುಗಳನ್ನು ಶೋಷಿಸಿ ಅವು ಸಂಪದ್ಭರಿತ ರಾಷ್ಟ್ರಗಳಾದುವು. ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಗೆ ಪ್ರೋತ್ಸಾಹ ದೊರೆತು ಅವು ಮುಂದುವರಿದ ರಾಷ್ಟ್ರಗಳಾದುವು; ಶೋಷಣೆಗೊಳಗಾದ ನಮ್ಮ ದೇಶದಂಥ ಅನೇಕ ದೇಶಗಳು ಹಿಂದುಳಿದ ದೇಶಗಳಾದುವು. ಇಪ್ಪತ್ತನೆಯ ಶತಮಾನದಲ್ಲಿ ಪರಿಸ್ಥಿತಿ ಬದಲಾಯಿಸಿದೆ. ದಾಸ್ಯದಲ್ಲಿದ್ದ ದೇಶಗಳು ಒಂದೊಂದಾಗಿ ಸ್ವತಂತ್ರ ರಾಷ್ಟ್ರಗಳಾಗಿ, ಪ್ರಗತಿಯತ್ತ ಹೆಜ್ಜೆ ಇಡುತ್ತಿವೆ. ನಮ್ಮ 'ದೇಶಭಕ್ತ'ರು ಈ ವಸ್ತುನಿಷ್ಠ ದೃಷ್ಟಿಯನ್ನು ಬೆಳೆಸಿಕೊಂಡು, ನಾವು ಯಾವುದರ ಬಗ್ಗೆ ಸಮರ್ಥನೀಯವಾಗಿ ಹೆಮ್ಮೆಪಡಬಹುದೋ ಅದಕ್ಕೆ ಮಾತ್ರ ತಮ್ಮ ಹೆಮ್ಮೆಯನ್ನು ಸೀಮಿತಗೊಳಿಸುವುದು ಆರೋಗ್ಯಕರ.

**ಪ್ರೊ|| ಜೆ. ಆರ್. ಲಕ್ಷ್ಮಣರಾವ್**
ಸ್ಮೃತಿ, ೧೨ನೆಯ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು - ೫೭೦ ೦೦೯

## ಸ್ವರ ಮಂಜರಿ

ಮರಕಪ್ಪೆಯ ಹಾಡು
ಆಗಲೆ ಎಲೆಯ ಮೇಲೆ
ಬಳಿಯಲ್ಲಾರೂ ಇಲ್ಲ!

**ರತ್ನಾಕರ ಶೆಟ್ಟಿ**
ಮುಂಬಯಿ




## ಶ್ರೀಲಂಕಾಗೆ ಅಮೆರಿಕಾ ಪ್ರವೇಶ ?

**ಈ** ವರ್ಷದ ಮಾರ್ಚ್ ೫ರಂದು ಶ್ರೀಲಂಕಾ ಮತ್ತು ಅಮೆರಿಕಾ ಸರಕಾರಗಳು ಯಾವ ಸದ್ದುಗದ್ದಲವೂ ಇಲ್ಲದೆ ಒಪ್ಪಂದವೊಂದಕ್ಕೆ ಸಹಿ ಹಾಕಿದುವು. ಎರಡೂ ದೇಶಗಳ ನಡುವಣ ಈ ಒಪ್ಪಂದ ವಸ್ತುತಃ ಶ್ರೀಲಂಕಾವನ್ನು ಅಮೆರಿಕಾದ ಯುದ್ಧನೆಲೆಯನ್ನಾಗಿಸುತ್ತದೆ. ಮಿಲಿಟರಿ ಸರಕುಗಳ ಶೇಖರಣೆ ಮತ್ತು ದುರಸ್ತಿ ಕುರಿತ ಈ ಒಪ್ಪಂದದ ಪ್ರಕಾರ ಶ್ರೀಲಂಕಾ ಸರಕಾರ ಅಮೆರಿಕಾದ ನೌಕಾಸೇನೆಯ ಯುದ್ಧನೌಕೆಗಳು ಮತ್ತು ವಾಯುಸೇನೆಯ ವಿಮಾನಗಳಿಗೆ ಇಂಧನ ಪೂರೈಕೆ ಸೌಲಭ್ಯವನ್ನೂ, ಇತರ ಬಗೆಯ ಸೇವೆಯನ್ನೂ ಒದಗಿಸುತ್ತದೆ. ಅಮೆರಿಕಾಗೆ ಶ್ರೀಲಂಕಾದಲ್ಲಿ ಅಗತ್ಯವಾದ ಯುದ್ಧ ಸಾಮಗ್ರಿಗಳನ್ನು ಶೇಖರಿಸಿಡಲೂ ಅವಕಾಶವಿದೆ. ಶ್ರೀಲಂಕಾದ ರಕ್ಷಣಾ ಕಾರ್ಯದರ್ಶಿ ಮತ್ತು ಅಮೆರಿಕಾದ ರಾಯಭಾರಿ ರಾಜಧಾನಿ ಕೊಲಂಬೋದಲ್ಲಿ ಅಂಕಿತ ಹಾಕಿದ ಈ ಒಪ್ಪಂದ ಕುರಿತು ಪ್ರಕಟಣೆ ನೀಡಿದ್ದು ಅಮೆರಿಕಾದ ರಾಯಭಾರಿ ಕಚೇರಿ, ಶ್ರೀಲಂಕಾ ಸರಕಾರವಲ್ಲ. ನಮ್ಮ ನೆರೆಯ ರಾಷ್ಟ್ರವೊಂದು ಮುಂದೆ ನಮ್ಮ ದೇಶವನ್ನು ಬಾಧಿಸಬಹುದಾದಂಥ ರಕ್ಷಣಾ ವಲಯದ ಒಪ್ಪಂದ ಮಾಡಿಕೊಂಡಿರುವುದು ನಮ್ಮ ಮಾಧ್ಯಮಗಳಲ್ಲಿ ಸುದ್ದಿಯಾಗಲೇ ಇಲ್ಲ. ಭಾರತ ಸರಕಾರದ ವಿದೇಶಾಂಗ ಸಚಿವಾಲಯವೂ ಕೂಡ ಇದರ ಬಗ್ಗೆ ಪ್ರತಿಕ್ರಿಯಿಸಲಿಲ್ಲ! ಪ್ರಾಯಶಃ ಇದಕ್ಕೆ ಕಾರಣ ಬುಷ್ ಸರಕಾರಕ್ಕೆ ಮುಜುಗರವಾದೀತು ಎಂದಿರಬೇಕು. ಈ ಒಪ್ಪಂದ ಮುಂದೆ ಹಿಂದೂ ಮಹಾಸಾಗರ ಪ್ರದೇಶದಲ್ಲಿ ಅಮೆರಿಕಾದ ಇನ್ನೊಂದು ಸೇನಾನೆಲೆಯ ಸ್ಥಾಪನೆಗೆ ಎಡೆಮಾಡಿಕೊಡಲು ಸಾಧ್ಯ.

**ಸೀಯಾರ್ಕೆ**

ಎರಡನೇ ಮಹಾಯುದ್ಧದ ನಂತರ ಶೀತಯುದ್ಧ ಪ್ರಾರಂಭವಾದ ಸಂದರ್ಭದಲ್ಲಿ ಪ್ರಪಂಚದಲ್ಲಿ ಮೂರನೆಯ ವಿಶಾಲವಾದ ಮಹಾಸಾಗರವಾಗಿರುವ ಹಿಂದೂ ಮಹಾಸಾಗರ (ಇಂಡಿಯನ್ ಓಷನ್) ಮಿಲಿಟರಿ ಪೈಪೋಟಿಗೆ ತಾಣವಾಗಿತ್ತು. ೭೩,೦೦೦,೦೦೦ ಚ.ಕಿ.ಮೀ. ವಿಸ್ತಾರವಿರುವ ಈ ಮಹಾಸಾಗರ ಅಮೆರಿಕಾದ ನೌಕಾಸೇನೆಯ ಆಡುಂಬೊಲವಾಗಿದೆ. ಅಮೆರಿಕಾದ ಸಪ್ತಮ ನೌಕಾದಳ ಇಲ್ಲಿ ನೆಲೆಗೊಂಡು ಐವತ್ತು ವರ್ಷಗಳಿಗೆ ಮೇಲಾಗಿದೆ. ಈ ಕುಖ್ಯಾತ ನೌಕಾದಳಕ್ಕೆ ಸೇರಿದ ಯುದ್ಧ ನೌಕೆಗಳು ಹಿಂದೂ ಮಹಾಸಾಗರದ ಆಸುಪಾಸಿನಲ್ಲಿ ಇರುವ ದೇಶಗಳಿಗೆ ಆತಂಕಕಾರಿಯಾಗಿವೆ. ೧೯೭೧ರಲ್ಲಿ ಈ ನೌಕಾದಳಕ್ಕೆ ಸೇರಿದ ಯುದ್ಧ ನೌಕೆ ಬಾಂಗ್ಲಾದೇಶ ವಿಮೋಚನಾ ಸಂಘರ್ಷದ ಸಮಯದಲ್ಲಿ ಬಂಗಾಳ ಕೊಲ್ಲಿ ಪ್ರದೇಶದಲ್ಲಿ ಪ್ರವೇಶಿಸಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇದಲ್ಲದೆ ಅಮೆರಿಕಾ ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಪಡೆದುಕೊಂಡ ಡೀಗೋ ಗಾರ್ಸಿಯಾ ದ್ವೀಪದಲ್ಲಿ ಸುಭದ್ರವಾದ ಕೋಟೆಯನ್ನೇ ನಿರ್ಮಿಸಿಕೊಂಡಿದೆ. ಇಷ್ಟಲ್ಲದೆ ಈ ಸಾಗರದ ಆಸುಪಾಸಿನ ಹಲವು ದೇಶಗಳಲ್ಲಿ ಅಮೆರಿಕಾ ತನ್ನ ಸೇನಾನೆಲೆಗಳನ್ನು ಹೊಂದಿದೆ. ಇವೆಲ್ಲ ಅಸ್ತಿತ್ವಕ್ಕೆ ಬಂದದ್ದು ಕಮ್ಯುನಿಸಮ್ ಮುನ್ನಡೆಯನ್ನು ತಡೆಯುವುದರ ಉದ್ದೇಶದಿಂದ. ಇದರ ಹಿಂದೆ ಹೊಸದಾಗಿ ಸ್ವತಂತ್ರಗೊಂಡ ದೇಶಗಳಿಗೆ 'ದೊಡ್ಡಣ್ಣ' ನೀಡುತ್ತಿದ್ದ ಎಚ್ಚರಿಕೆಯ ಸಂದೇಶವೂ ಅಡಗಿತ್ತು. ಶೀತಯುದ್ಧ ಮುಗಿದಿದ್ದು, ಕಮ್ಯುನಿಸಮ್ ಭೀತಿ ಇಲ್ಲದಿದ್ದರೂ ಯಥಾಸ್ಥಿತಿ ಮುಂದುವರಿಯುತ್ತಿದೆ; ಏಕೆಂದರೆ ಅಮೆರಿಕಾ ಒಂದು ಕಡೆ ಮೂಗು ತೂರಿಸಿದರೆ ಸಾಮಾನ್ಯವಾಗಿ ಹಿಂತೆಗೆಯುವುದಿಲ್ಲ.

ಶ್ರೀಲಂಕಾದಲ್ಲಿ ಅಗತ್ಯವಾದ ಮಿಲಿಟರಿ ಸೌಲಭ್ಯಗಳನ್ನು ಪಡೆದುಕೊಳ್ಳಲು ಅಮೆರಿಕಾ ಹಿಂದೆಯೂ ಪ್ರಯತ್ನಿಸಿತ್ತು. ಹಿಂದೂ ಮಹಾಸಾಗರವನ್ನು ಶಾಂತಿವಲಯವನ್ನಾಗಿಸಬೇಕು ಎನ್ನುವ ಚಳವಳಿ ಕಳೆದ ಶತಮಾನದ ಎಪ್ಪತ್ತು ಎಂಬತ್ತರ ದಶಕದಲ್ಲಿ ತೀವ್ರವಾಗಿದ್ದುದರಿಂದ ಆ ಪ್ರಯತ್ನ ಫಲಿಸಿರಲಿಲ್ಲ. ಈ ಮಹಾಸಾಗರದ ಆಸುಪಾಸಿನ ದೇಶಗಳ ಸ್ವಾತಂತ್ರ್ಯ, ಸಾರ್ವಭೌಮತ್ವಗಳಿಗೆ ಆತಂಕಕಾರಿಯಾಗಿರುವ ಅಮೆರಿಕಾದ ಸಪ್ತಮ ನೌಕಾದಳ ಹಾಗೂ ಇತರ ನೆಲೆಗಳು ವಿಸರ್ಜನೆಗೊಂಡು ಹಿಂದಕ್ಕೆ ಹೋಗಬೇಕು ಮತ್ತು ಈ ಪ್ರದೇಶ ಶಾಂತಿವಲಯ ವಾಗಬೇಕು ಎನ್ನುವ ಚಳವಳಿ ಮತ್ತೆ ಪುನರುಜ್ಜೀವನಗೊಳ್ಳಬೇಕಾಗಿದೆ. ತರಾತುರಿಯಲ್ಲಿ ಈಗ ಶ್ರೀಲಂಕಾದೊಂದಿಗೆ ಮಾಡಿಕೊಂಡಿರುವ ಒಪ್ಪಂದಕ್ಕೆ ಕಾರಣ ಅಫ್ಘಾನಿಸ್ತಾನ ಮತ್ತು ಇರಾಕ್‌ಗಳಲ್ಲಿ ಅಮೆರಿಕಾ ಎದುರಿಸುತ್ತಿರುವ ಕ್ಲಿಷ್ಟ ಪರಿಸ್ಥಿತಿ.

ಕಳೆದ ಶತಮಾನದ ಐವತ್ತರ ದಶಕದಲ್ಲೇ ಅಮೆರಿಕಾ ಪಾಕಿಸ್ತಾನವನ್ನು ಎಳೆದುಕೊಂಡಂತೆ ಶ್ರೀಲಂಕಾವನ್ನು ಮಿಲಿಟರಿ ಕೂಟದಲ್ಲಿ ಸೆಳೆಯಲು ಬಯಸಿತ್ತು. ಆದರೆ ಜನತೆಯ ಒತ್ತಾಯದಿಂದ ಅಲಿಪ್ತನೀತಿ ಅಂಗೀಕರಿಸಿದ ಶ್ರೀಲಂಕಾ ಬಲೆಗೆ ಬೀಳಲಿಲ್ಲ. ಆದರೆ ಕಮ್ಯುನಿಸಮ್ ವಿರುದ್ಧ ಪ್ರಚಾರ ನಡೆಸಲು ಅಮೆರಿಕಾದ 'ವಾಯ್ಸ್ ಆಫ್ ಅಮೆರಿಕಾ' ಬಾನುಲಿ ಕೇಂದ್ರದ ಸ್ಥಾಪನೆಗೆ ಶ್ರೀಲಂಕಾ ಅವಕಾಶ ನೀಡಿತು. ಮೊದಲು ಅಮೆರಿಕಾ ಈ ಕೇಂದ್ರದ ಸ್ಥಾಪನೆಗೆ ಭಾರತವನ್ನು ಕೋರಿತ್ತು. ಆದರೆ ಭಾರತ ಸರಕಾರ ತಿರಸ್ಕರಿಸಿದ್ದರಿಂದ ಅದು ಶ್ರೀಲಂಕಾವನ್ನು ಒಲಿಸಿಕೊಂಡಿತು. ಈ ಕೇಂದ್ರದ ಸ್ಥಾಪನೆಯನ್ನು ಭಾರತ ಆಗ ತೀವ್ರವಾಗಿ ವಿರೋಧಿಸಿತ್ತು. ಇದಾದ ನಂತರ ಅಮೆರಿಕಾ ಶ್ರೀಲಂಕಾದ ಉತ್ತರ ಭಾಗದಲ್ಲಿ ಟ್ರಿಂಕೋಮಲಿ ಎಂಬ ಪ್ರದೇಶದಲ್ಲಿ ನೌಕಾ ನೆಲೆ ಸ್ಥಾಪನೆಗೆ ಪ್ರಯತ್ನಿಸಿತು. ತೀವ್ರ ವಿರೋಧ ಬಂದದ್ದರಿಂದ ಅಮೆರಿಕಾ ಅದನ್ನು ಕೈಬಿಟ್ಟಿತ್ತು. ಈಗ ಮತ್ತೆ ಹಿಂಬಾಗಿಲಿನಿಂದ ಬಂದು ಅಮೆರಿಕಾ ತನ್ನ ಯೋಜನೆಯನ್ನು ಕಾರ್ಯಗತಮಾಡಲು ಮೊದಲ ಹೆಜ್ಜೆ ಇರಿಸಿದೆ. ಈ ಆತಂಕಕಾರಿ ಬೆಳವಣಿಗೆಯನ್ನು ವಿರೋಧಿಸಿ ಹಿಮ್ಮೆಟ್ಟಿಸಬೇಕಾಗಿದೆ.

## ಇರಾಕ್ – ಆಕ್ರಮಣದಲ್ಲಿ ನಾಲ್ಕು ವರ್ಷ

**ಅ**ಮೆರಿಕಾದ ಆಕ್ರಮಣಕ್ಕಿಂತ ಸರ್ವಾಧಿಕಾರಿ ಸದ್ದಾಮ್ ಹುಸೇನನ ಆಡಳಿತವೇ ಮೇಲು ಎಂದು ಇರಾಕಿನ ಜನರಿಗೆ ಅನಿಸಿದ್ದರೆ ಅತಿಶಯವೇನಿಲ್ಲ. ನಾಲ್ಕು ವರ್ಷಗಳ ವಿದೇಶೀ ದುರಾಕ್ರಮಣದ ದಿನಗಳಲ್ಲಿ ಇರಾಕ್ ರಣರಂಗವಾಗಿಯೇ ಮುಂದುವರಿಯುತ್ತಿದೆ. ಕಾರುಬಾಂಬ್‌ಗಳ ಸ್ಫೋಟ, ಅಲ್ಲಲ್ಲಿ ಗುಂಡಿನ ಆರ್ಭಟ, ಸಾವು-ನೋವುಗಳು ಸಂಭವಿಸದ ದಿನವೇ ಇಲ್ಲ ಆ ನಾಡಿನಲ್ಲಿ. ಅಮೆರಿಕಾ ದುರಾಕ್ರಮಣಕಾರಿ ದಾಳಿ ನಡೆಸಿದಂದಿನಿಂದ ಇಂದಿನವರೆಗೆ ಇರಾಕಿನಲ್ಲಿ ಸುಮಾರು ಆರು ಲಕ್ಷಕ್ಕೂ ಹೆಚ್ಚು ಮಂದಿ ಅಸು ನೀಗಿದ್ದಾರೆ. ಇಷ್ಟಾದರೂ ಭಂಡ, ಭ್ರಷ್ಟ ಅಧ್ಯಕ್ಷ ಜಾರ್ಜ್ ಬುಷ್ ಸೋಲನ್ನೊಪ್ಪಿಕೊಂಡು ಸೇನೆಯನ್ನು ವಾಪಸು ಕರೆಸಿಕೊಳ್ಳಲು ಸಿದ್ಧವಾಗಿಲ್ಲ. ಇನ್ನೆಷ್ಟು ಮಂದಿ ಇರಾಕಿಯರ ರಕ್ತ ಕೋಡಿ ಹರಿಸಬೇಕೆಂದಿದ್ದಾನೋ ಈತ! ಪ್ರಪಂಚದ ಎಲ್ಲ ಶಾಂತಿಪ್ರಿಯ, ಪ್ರಜಾಪ್ರಭುತ್ವ ಮನೋವೃತ್ತಿಯ ಜನ ಒಕ್ಕೊರಲಿನಿಂದ ಇರಾಕಿನಿಂದ ಕಾಲ್ತೆಗೆಯಿರಿ ಎಂದು ಅಮೆರಿಕಾಕ್ಕೆ ಕರೆ ನೀಡಿದ್ದಾರೆ. ಸಭೆ, ಮೆರವಣಿಗೆಗಳನ್ನು ನಡೆಸಿದ್ದಾರೆ ಪ್ರಪಂಚದಲ್ಲಿ ಎಲ್ಲೆಡೆಯಲ್ಲಿ. ಆದರೂ ಇರಾನಿನ ಮೇಲೆ ದಾಳಿ ನಡೆಸುವ ಸನ್ನಾಹದಲ್ಲಿ ಪಾತಕಿ ಬುಷ್ ಈ ಕರೆಯನ್ನು ಆಲಿಸಲು ಸಿದ್ಧವಿಲ್ಲ.

ಅಮೆರಿಕಾ ಇರಾಕಿನ ಮೇಲೆ ದಾಳಿ ನಡೆಸಿ ಈ ವರ್ಷ ಮಾರ್ಚ್ ೨೦ಕ್ಕೆ ನಾಲ್ಕು ವರ್ಷ ತುಂಬಿತು. ವಿಯೆಟ್ನಾಮ್ ನಂತರ ಅಮೆರಿಕಾ ಕಾಲು ಮುರಿದುಕೊಂಡಿರುವುದು ಇರಾಕಿನಲ್ಲಿ. ಜಾರ್ಜ್ ಬುಷ್‌ನ ಈ ದುಸ್ಸಾಹಸಕ್ಕೆ ಬೆಂಬಲ ನೀಡಿ ಸೇನೆ ಕಳಿಸಿದ್ದ ಯೂರೋಪಿನ ಕೆಲವು ದೇಶಗಳು ಈಗಾಗಲೆ ತಮ್ಮ ಸೇನೆಗಳನ್ನು ಹಿಂದಕ್ಕೆ ಕರೆಸಿಕೊಂಡಿವೆ. ಆದರೆ ದುರಹಂಕಾರದಿಂದ ಮೆರೆಯುತ್ತಿರುವ ಬುಷ್ ಸರಕಾರ ದುರಾಕ್ರಮಣ ಮುಂದುವರಿಸಲು ನಿರ್ಧರಿಸಿದೆ. ಪ್ರಪಂಚದ ಅತಿ ಹಳೆಯ

೧೬ನೇ ಪುಟಕ್ಕೆ

# ಸಹಪಾಠಿ ತೇಜಸ್ವಿ



**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**

ಇದೇ ಏಪ್ರಿಲ್ ೫ರಂದು ಗುರುವಾರ ಮಧ್ಯಾಹ್ನ ಪೂರ್ಣಚಂದ್ರ ತೇಜಸ್ವಿಯವರ ನಿಧನದ ವಾರ್ತೆ ಕೇಳಿ ಆಘಾತ ಗೊಂಡ ಅಸಂಖ್ಯಾತ ಕನ್ನಡಿಗರಲ್ಲಿ ನಾನೂ ಒಬ್ಬ. ೧೯೫೮-೬೨ರ ನಡುವೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಆನರ್ಸ್, ಎಂ.ಎ. ತರಗತಿಗಳಲ್ಲಿ ನಾನು ಕೂಡ ತೇಜಸ್ವಿಯ ಸಹಪಾಠಿಯಾಗಿದ್ದೆ. ಈತ ಮಹಾಕವಿ ಕುವೆಂಪು ಅವರ ಮಗನೆಂಬುದು ನಮಗೆಲ್ಲ ಗೊತ್ತೇ ಇತ್ತು. ತರಗತಿಯಲ್ಲಿ ಕನ್ನಡ ಸಾಹಿತ್ಯ ಸಂದರ್ಭಗಳಿಗೆ ಹೇಗೆ ಪ್ರತಿಕ್ರಿಯಿಸುತ್ತಾರೆಂದು ತಿಳಿಯಲು ನಮಗೆಲ್ಲ ಕುತೂಹಲ. ಆದರೆ ತೇಜಸ್ವಿ ಮಾತ್ರ ತರಗತಿಯಲ್ಲಿ ಮಾತೇ ಆಡುತ್ತಿರಲಿಲ್ಲ. ಸಾಮಾನ್ಯವಾಗಿ ಈತ ಕೂರುತ್ತಿದ್ದುದು ಹಿಂದಿನ ಸಾಲಿನಲ್ಲಿ. ತೇಜಸ್ವಿಯನ್ನು ಪರಿಚಯ ಮಾಡಿಕೊಡುವಾಗ ಯಾರಾದರೂ ಈತ ಮಹಾಕವಿ ಕುವೆಂಪು ಅವರ – ಆ ವೇಳೆಗೆ ಕುವೆಂಪು ಮೈಸೂರು ವಿಶ್ವವಿದ್ಯಾನಿಲಯದ 'ವೈಸ್ ಛಾನ್ಸಲರ್' ಆಗಿದ್ದರು – ಮಗನೆಂಬ ಮಾತನ್ನು ಒತ್ತಿಹೇಳಿದರೆ ತೇಜಸ್ವಿ ಮುಜುಗರಪಟ್ಟುಕೊಳ್ಳುತ್ತಿದ್ದರು.

ಬಿಳಿ ಪೈಜಾಮ, ಅರ್ಧತೋಳಿನ ಬಿಳಿ ಷರಟು, ಕಾಲಿಗೆ ಸಾದಾ ಚಪ್ಪಲಿ, – ಹೊರತಾಗಿ ಬೇರೆ ಉಡುಪಿನಲ್ಲಿ ತೇಜಸ್ವಿ ಕಾಲೇಜಿಗೆ ಬಂದುದನ್ನು ನಾನು ಕಾಣೆ. ಮಹಾರಾಜ ಕಾಲೇಜಿನ ಎದುರಿಗೇ 'ವೈಸ್ ಛಾನ್ಸಲರ್' ಬಂಗಲೆ; ಆದರೆ ತೇಜಸ್ವಿ ಯಾವಾಗ ಮನೆಯಿಂದ ಬರುತ್ತಾರೆ, ಯಾವಾಗ ಮನೆ ಸೇರಿಕೊಳ್ಳುತ್ತಾರೆ, ಅಲ್ಲಿಂದ ಮತ್ತೆಲ್ಲಿ ಹೋಗುತ್ತಾರೆ ಎಂಬುದು ಸಹಪಾಠಿಗಳಿಗೆ ತಿಳಿದಿರಲಿಲ್ಲ. ಹಾಗೆ ನೋಡಿದರೆ ತೇಜಸ್ವಿ ಬೆರೆಯುತ್ತಿದ್ದುದು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ಕಡಿದಾಳ್ ಶಾಮಣ್ಣ, ಕೋಣಂದೂರು ಲಿಂಗಪ್ಪ, ಆಮೇಲೆ ಇಂಗ್ಲಿಷ್ ವಿದ್ಯಾರ್ಥಿ ಬಿ. ಎನ್. ಶ್ರೀರಾಮ್ ಇವರೊಡನೆ. ತೇಜಸ್ವಿಗೆ ತುಂಬ ಜಂಬವಿರ ಬಹುದು ಎಂಬ ಅನಿಸಿಕೆಯಿಂದ ಅಥವಾ ನಮ್ಮದೇ ಆದ ಸಂಕೋಚದಿಂದ – ನಮಗೆ ಈತನೊಡನೆ ಹೆಚ್ಚಿನ ಸಲಿಗೆಯಿರಲಿಲ್ಲ. 'ಕೇಶೀರಾಜನ ಗರಡಿಯಲ್ಲಿ ಪಳಗಿ' ಶಬ್ದಮಣಿದರ್ಪಣ ಪಾಠ ಮಾಡುತ್ತಿದ್ದ ವರದರಾಜರಾಯರನ್ನು ಕಂಡರೆ ತೇಜಸ್ವಿಗೆ ಎಲ್ಲಿಲ್ಲದ ಭಯ. ಅಕಸ್ಮಾತ್ ಎದುರಿಗೆ ಬಂದರೆ, ಎಲ್ಲಿ ಯಾವ ವ್ಯಾಕರಣ ಸೂತ್ರವನ್ನು ಕೇಳಿಬಿಡುತ್ತಾರೋ ಎಂದು ಅಂಜಿದ ಪ್ರೈಮರಿ ಶಾಲೆಯ ವಿದ್ಯಾರ್ಥಿಯಂತೆ ತಲೆತಪ್ಪಿಸಿಕೊಂಡುಬಿಡುತ್ತಿದ್ದ ಈತ.

ಕನ್ನಡ ಎಂ.ಎ. ತರಗತಿಗಳು ಮಹಾರಾಜ ಕಾಲೇಜಿನಿಂದ 'ಮಾನಸ ಗಂಗೋತ್ರಿ'ಗೆ ಸ್ಥಳಾಂತರವಾದ ಮೇಲೆ ತೇಜಸ್ವಿ ಕೂಡ, ನಮ್ಮಲ್ಲಿ ಹೆಚ್ಚು ಜನರ ಹಾಗೆ, ಸೈಕಲ್ ತುಳಿದುಕೊಂಡು ಬರುತ್ತಿದ್ದರು. ಒಂದೇ ಒಂದು ಬಾರಿ ಗೆಳೆಯ ಎ. ಎಸ್. ಜಯರಾಂ ಜೊತೆಯಲ್ಲಿ ಕುವೆಂಪು ಅವರ ನಿವಾಸ 'ಉದಯರವಿ'ಗೆ ಹೋಗಿದ್ದೆ. ಜಯರಾಂಗೆ ಸಂಗೀತದಲ್ಲಿ ಸ್ವಲ್ಪ ಆಸಕ್ತಿಯಿತ್ತು. ಆಗ ತೇಜಸ್ವಿ ವೀಣೆಯನ್ನೋ, ಸಿತಾರನ್ನೋ ಅಭ್ಯಾಸ ಮಾಡುತ್ತಿದ್ದರು. ಹದಿನೈದು ಇಪ್ಪತ್ತು ನಿಮಿಷ ತೇಜಸ್ವಿಯ ಕೋಣೆಯಲ್ಲಿದ್ದೆವು; ಆತ ವೀಣೆಯನ್ನೋ, ಸಿತಾರನ್ನೋ ನುಡಿಸಿ, ತೋರಿಸಿದರೆಂದು ನೆನಪು. ತಾವೇ ಫೋಟೋ ತೆಗೆದ ಮಲೆನಾಡಿನ ಹಲವು ಬಗೆಯ ಹಕ್ಕಿಗಳ ಚಿತ್ರಗಳನ್ನು ತೋರಿಸಿದರು. ಅವರ ಮನೆಗೆ ಹೋದರೂ ನಾವು ಕುವೆಂಪು ಅವರನ್ನು 'ಸಂದರ್ಶಿಸಲಿಲ್ಲ'; ಅವರು ಒಳಗೆಲ್ಲೋ ತಮ್ಮ ಕೋಣೆಯ ಏಕಾಂತದಲ್ಲಿ ಅಭ್ಯಾಸನಿರತರಾಗಿದ್ದರೆಂದು ತೋರುತ್ತದೆ. ಈಚೆಗೆ ನನ್ನ ಕೆಲವು ಗೆಳೆಯರು ಕುವೆಂಪು ಮನೆಗೆ ಹೋದಾಗ ತಾವು ಅವರೊಡನೆ ತೆಗೆಸಿಕೊಂಡು ಅಥವಾ ತೆಗೆಸಿದ ಫೋಟೋಗಳನ್ನು ತೋರಿಸಿದ ಮೇಲೆ ನಾನೂ ಹಾಗೆ ಮಾಡಬಹುದಿತ್ತಲ್ಲವೆ – ಎನಿಸಿದ್ದುಂಟು.

ಪ್ರಾಯಶಃ ನಾವು ಎಂ.ಎ. ತರಗತಿಯಲ್ಲಿರುವಾಗಲೆ ಪ್ರಜಾವಾಣಿ ಪತ್ರಿಕೆಯ ವಾರ್ಷಿಕ ಕಥಾ ಸ್ಪರ್ಧೆಯಲ್ಲಿ ತೇಜಸ್ವಿಯ 'ಲಿಂಗ ಬಂದ' ಕಥೆಗೆ ಪ್ರಥಮ ಬಹುಮಾನ ದೊರೆತು ಆ ಕಥೆ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಕಥೆಯ 'ಸಾಂಕೇತಿಕತೆ'ಯನ್ನು ಕುರಿತು ನಮ್ಮನಮ್ಮಲ್ಲೇ ಚರ್ಚಿಸಿದ್ದೆವು.

೧೯೬೬ನೇ ವರ್ಷದ ಕಡೆಯ ಭಾಗದಲ್ಲಿರಬೇಕು. ನಾನು ಕೆ.ಜಿ.ಎಫ್. ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗ ತೇಜಸ್ವಿಯ 'ಲಗ್ನಪತ್ರಿಕೆ' ಬಂದಿತ್ತು. ಸ್ವತಃ ಕುವೆಂಪು ಅವರೆ ಬರೆದ, ಬ್ಲಾಕ್ ಮಾಡಿಸಿ 'ಇನ್‌ಲ್ಯಾಂಡ್ ಲೆಟರ್' ಮೇಲೆ ಪ್ರತಿ ಮಾಡಿಸಿದ ಕರೆಯೋಲೆ. 'ನನ್ನ ಮಗ ತೇಜಸ್ವಿ ಮತ್ತು ಶ್ರೀಮತಿ ರಾಜೇಶ್ವರಿ ಅವರ ಮದುವೆ ಚಿತ್ರಕೂಟದಲ್ಲಿ ನಡೆಯುತ್ತದೆ. (ದಿನಾಂಕ ಮರೆತುಹೋಗಿದೆ). ತಾವು ತಮಗೆ ಅನುಕೂಲವಾದಾಗ, ವಿರಾಮವಾದಾಗ 'ಚಿತ್ರಕೂಟಕ್ಕೆ' ಆಗಮಿಸಿ ದಂಪತಿಗಳ ಆತಿಥ್ಯ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇವೆ' ಎಂಬುದು (ನೆನಪಿರುವಂತೆ) ಕಾಗದದ ಒಕ್ಕಣೆ. ಕೆಳಗೆ 'ಕುವೆಂಪು' ಎಂದು ಹಸ್ತಾಕ್ಷರ. ಕುವೆಂಪು ಅವರ ಕೈಬರಹವನ್ನು ಹಲವು ವರ್ಷಗಳವರೆಗೆ ರಕ್ಷಿಸಿಟ್ಟಿದ್ದೆ.

ತೇಜಸ್ವಿ ಬರವಣಿಗೆಯನ್ನಾರಂಭಿಸಿದ್ದು ೧೯೫೦-೭೦ರ ನವ್ಯಸಾಹಿತ್ಯದ ಉಚ್ಛ್ರಾಯದ ದಿನಗಳಲ್ಲಿ. ಕಾವ್ಯ, ಕಥೆ, ಕಾದಂಬರಿಗಳೆಲ್ಲದರಲ್ಲೂ 'ನವ್ಯ ಸಂಪ್ರದಾಯ'ದ್ದೇ ಅಟಾಟೋಪ. ಸಂಕೀರ್ಣವೂ ನಿಗೂಢವೂ ಆದ 'ಸಾಂಕೇತಿಕತೆ'ಯಿಲ್ಲದ ಬರವಣಿಗೆ ಸಾಹಿತ್ಯವೇ ಅಲ್ಲ ಎಂಬಂಥ ಉಗ್ರವಾದಿಗಳದೇ ಆಗ ಮೇಲುಗೈ. ತೇಜಸ್ವಿ ಕೂಡ 'ನಿಗೂಢ ಮನುಷ್ಯರು', 'ಸ್ವರೂಪ', 'ಯಮಳ ಪ್ರಶ್ನೆ'ಗಳನ್ನು, ವ್ಯಾಖ್ಯಾನಕಾರರ ನೆರವಿಲ್ಲದೆ ಅರ್ಥ ಮಾಡಿಕೊಳ್ಳಲಾರದಂಥ, ಸಂಕೀರ್ಣ ಸಂಕೇತಗಳ ಸಂಪ್ರದಾಯದಲ್ಲೇ ರಚಿಸಿದರು. ಆದರೆ ಬಹುಬೇಗನೆ ಸಾಹಿತ್ಯ ಕೃತಿಗಳಲ್ಲಿ ಸಾಂಕೇತಿಕತೆಯು ಹೇಗೆ ಬರಬೇಕೆಂಬ ಬಗೆಗೆ ತೇಜಸ್ವಿ ಗಂಭೀರವಾಗಿ ಯೋಚಿಸಿದಂತೆ ತೋರುತ್ತದೆ. 'ಹುಲಿಯೂರಿನ ಸರಹದ್ದು' ಕಥಾಸಂಕಲನಕ್ಕೆ ಬರೆದ 'ಹೊಸ ದಿಗಂತದ ಕಡೆಗೆ' ಎಂಬ ಪ್ರಸ್ತಾವನೆಯಲ್ಲಿ ಅವರು – ''ಸಾಹಿತ್ಯದಲ್ಲಿ ನಾವು ಯಾಂತ್ರಿಕ ಸಾಂಕೇತಿಕತೆಯೊಂದನ್ನು ಸಂಪ್ರದಾಯ ಮಾಡಿಕೊಂಡು ಸಹೃದಯ ಸ್ತೋಮವನ್ನು ಸೀಮಿತಗೊಳಿಸಿಕೊಳ್ಳುವುದೇ ಸಾಹಿತ್ಯ ರಚನೆಯ ಉದ್ದೇಶಗಳಲ್ಲಿ ಒಂದನ್ನಾಗಿ ಮಾಡಿಕೊಂಡರೆ ಅದು ರೋಗಗ್ರಸ್ತ ನಾಗರಿಕತೆಯ ಪರಾಕಾಷ್ಠೆ ಎಂದಷ್ಟೇ ಹೇಳಬೇಕಾಗುತ್ತದೆ'' ಎಂದಿದ್ದಾರೆ. ಬೆಂಗಳೂರಿನ ವಿಚಾರ ಸಂಕಿರಣವೊಂದರಲ್ಲಿ ನಾನು 'ತೇಜಸ್ವಿ ಸಾಹಿತ್ಯ ಮತ್ತು ಸಿದ್ಧಾಂತ' ಎಂಬ ಪ್ರಬಂಧ ಮಂಡಿಸುವಾಗ ಈ ಅಭಿಪ್ರಾಯವನ್ನು ವಿವರವಾಗಿ ಚರ್ಚಿಸಿದ್ದೆ.

೧೯೮೭ರಲ್ಲಿ ಎರಡನೇ ಪಿ.ಯು. ತರಗತಿಗೆ ತೇಜಸ್ವಿಯವರ 'ಕರ್ವಾಲೊ' ಕಾದಂಬರಿಯನ್ನು ಪಠ್ಯ ಪುಸ್ತಕವಾಗಿ ಗೊತ್ತುಪಡಿಸಿದಾಗ ಗ್ರಂಥವನ್ನು ಟಿಪ್ಪಣಿಸಹಿತ ಪಠ್ಯಪುಸ್ತಕವಾಗಿ ಸಂಪಾದಿಸುವ ಕೆಲಸ ನನ್ನ ಪಾಲಿಗೆ ಬಂತು. ಮೂಲಕೃತಿಯಲ್ಲಿ 'ಆಕ್ಷೇಪಾರ್ಹ' ಅಂಶಗಳಿದ್ದರೆ ಅವುಗಳನ್ನು ಕೈಬಿಡಬೇಕೆಂಬುದು ಪಠ್ಯಪುಸ್ತಕ ಸಮಿತಿಯ ತೀರ್ಮಾನ. 'ಕರ್ವಾಲೊ' ಕಾದಂಬರಿಯಲ್ಲಿ ಪೀಠ ಎಂಬಾತನ ಬಾಯಲ್ಲಿ ಮುಸಲ್ಮಾನರ ಆಚಾರಕ್ಕೆ ಸಂಬಂಧಿಸಿದ ಕೆಲವು ಮಾತುಗಳು ಬರುತ್ತವೆ; ಹಾಗೆಯೇ ಹಾವುಗೊಲ್ಲರ ಎಂಕ್ಟನು ಆಡುವ ಒಂದೆರಡು ಮಾತು ಅಸಭ್ಯವಾಗಿವೆ. ಆದರೆ, ತಮ್ಮ ಕೃತಿಯಲ್ಲಿ ಯಾವುದೇ ಮಾತನ್ನು ಕೈಬಿಡಲು ಅಥವಾ ಬದಲಾಯಿಸಲು ತೇಜಸ್ವಿ ಒಪ್ಪಿಗೆ ಕೊಡಲಿಲ್ಲ. ಆಗ ಪಿ.ಯು. ನಿರ್ದೇಶಕರು (ಅಥವಾ ಉಪ ನಿರ್ದೇಶಕರು) ಶ್ರೀ ದಖನಿ (ಇವರ ಪೂರ್ತಿ ಹೆಸರು ನೆನಪಿಲ್ಲ) ಎಂಬುವವರು. ಕರ್ವಾಲೊ ವಿಚಾರವನ್ನು ಇವರ ಗಮನಕ್ಕೆ ತರಬೇಕೆಂದು ಹೋದ ನಾನು ಮತಧರ್ಮದ ಮಾತೇ ಪುಸ್ತಕದಲ್ಲಿ ಬರಬಾರದೆಂದರೆ ಹೇಗೆ? – ಎಂದು ಪ್ರಶ್ನಿಸಿದೆ. ಕಾಕತಾಳೀಯ ವೆಂಬಂತೆ ಅದೇ ದಿನ 'ಡೆಕನ್ ಹೆರಾಲ್ಡ್' ಪತ್ರಿಕೆಯಲ್ಲಿ ಪ್ರಕಟವಾದ ಒಂದು ಕಥೆಯಿಂದ ಉದ್ರಿಕ್ತರಾದ ಕೆಲವು

ಜನ ಪತ್ರಿಕಾ ಕಛೇರಿಗೆ ಕಲ್ಲು ತೂರಿ, ದಾಳಿಮಾಡಿದ ಸುದ್ದಿ ಬಂದಿತ್ತು. ಆತ 'ಯಾವುದೇ ಜಾತಿ-ಮತದ ಆಚಾರಗಳ ಪ್ರಸ್ತಾಪ ಮಾಡಲು ವೈಯಕ್ತಿಕವಾಗಿ ನನ್ನದೇನೂ ಅಭ್ಯಂತರ ವಿಲ್ಲ; ಆದರೆ ನಾಳೆ ಇದನ್ನೇ ನೆಪಮಾಡಿಕೊಂಡು ನಮ್ಮ ಕಛೇರಿಯ ಮೇಲೆ ದಾಳಿ ಮಾಡಿದರೆ ಏನು ಮಾಡುವುದು ?' ಎಂದರು. ಅನಿವಾರ್ಯವಾಗಿ ಆತನ ವಾದವನ್ನು ಒಪ್ಪಿಕೊಳ್ಳಲೇಬೇಕಾಯ್ತು. ಎಂಕ್ಟನ 'ಅಸಹ್ಯ' ನುಡಿಗಳ ವಿಚಾರವೂ ಹೀಗೆಯೇ ಜಟಿಲವಾಗಿತ್ತು. ಅಂತೂ ಕಡೆಗೆ ಸಾಕಷ್ಟು ಜಗ್ಗಾಟದನಂತರ ಕಾದಂಬರಿಯಲ್ಲಿನ ಕೆಲವು ಮಾತುಗಳನ್ನು ಕೈಬಿಟ್ಟು ಪಠ್ಯಪುಸ್ತಕವಾಗಿ ಪುನರ್ಮುದ್ರಿಸಲು ತೇಜಸ್ವಿ ಒಪ್ಪಿಗೆ ಕೊಟ್ಟರು.



ಕರ್ವಾಲೊ ಕಾದಂಬರಿಯ ಹಾರುವ ಓತಿಯನ್ನು ಕುರಿತು ಪತ್ರಿಕೆಗಳ ಮೂಲಕ ಸಾಕಷ್ಟು ವಾದವಿವಾದಗಳು ನಡೆದವು. ಜೀವವಿಜ್ಞಾನದ ದೃಷ್ಟಿಯಿಂದ ಹಾರುವ ಓತಿಯು 'ನಿಜವಲ್ಲವೇ ಅಲ್ಲ' ಎಂದು ಕೆಲವರು; ತಾವೇ ಅದನ್ನು ಕಂಡಿರುವುದಾಗಿ ಮತ್ತೆ ಕೆಲವರು ವಾದಿಸಿದರು. 'ಚಿದಂಬರ ರಹಸ್ಯ' ಕಾದಂಬರಿಯನ್ನು ಓದುಗರಿಗೆ ಪರಿಚಯಿಸುವ ಸಂದರ್ಭದಲ್ಲಿ ತೇಜಸ್ವಿ ಹಾರುವ ಓತಿಯ ವೈಜ್ಞಾನಿಕ ಸತ್ಯತೆಯ ಬಗೆಗೆ ಬಂದ ಆಕ್ಷೇಪಕ್ಕೆ ಉತ್ತರಿಸುವಂತೆ ''...ಧಾರ್ಮಿಕ ವಿಧಿಗಳು, ಪ್ರೇಮ ಪ್ರಕರಣಗಳು ಮುಂತಾದವುಗಳಿಗಿಂತ ಭಿನ್ನವಾದ ಕಥಾಭಿತ್ತಿಯೊಂದರಲ್ಲಿ ಮಾನವರ ನಡವಳಿಕೆಯನ್ನು ನಿರೂಪಿಸಬೇಕೆಂಬುದು, ಕನ್ನಡ ಸಾಹಿತ್ಯಕ್ಕೆ ಪ್ರಾಣಿಶಾಸ್ತ್ರ ಸಹ ಸ್ಫೂರ್ತಿ ಕೊಡಬಲ್ಲುದು ಎಂದು ತೋರಿಸುವುದು ನನ್ನ ಉದ್ದೇಶವಾಗಿತ್ತು'' – ಎಂದು ಸ್ಪಷ್ಟಪಡಿಸಿದರು. ಕರ್ವಾಲೊ ಪಠ್ಯಪುಸ್ತಕಕ್ಕೆ ನಾನು ಬರೆದ ಟಿಪ್ಪಣಿಯನ್ನು ತೇಜಸ್ವಿ ಓದಿದ್ದಾರೆಂಬುದು ನನಗೆ ತಿಳಿದುದು ಹಲವು ವರ್ಷಗಳ ಅನಂತರ.

ಐದು ವರ್ಷಗಳ ಹಿಂದೆ ನವಕರ್ನಾಟಕ ಸಾಹಿತ್ಯ ಸಂಪದ ಮಾಲಿಕೆಯ ಹನ್ನೆರಡು ಪುಸ್ತಕಗಳ ಬಿಡುಗಡೆ ಸಮಾರಂಭವನ್ನು ಚಿಕ್ಕಮಗಳೂರಿನಲ್ಲಿ ಏರ್ಪಡಿಸಲಾಗಿತ್ತು. ತೇಜಸ್ವಿ ಅಂದಿನ ಮುಖ್ಯ ಅತಿಥಿ. ಡಾ|| ಎಚ್. ಎಂ. ಮಹೇಶ್ವರಯ್ಯನವರು ತೇಜಸ್ವಿ ಬದುಕು ಬರಹವನ್ನು ಕುರಿತು ಬರೆದ ಪುಸ್ತಕ ಮತ್ತು ನಾನು ಯಶವಂತ ಚಿತ್ತಾಲರನ್ನು ಕುರಿತು ಬರೆದ ಪುಸ್ತಕಗಳೂ ಆ ದಿನ ಬಿಡುಗಡೆಯಾಗಲಿದ್ದವು. ಹೀಗಾಗಿ ತೇಜಸ್ವಿಯನ್ನು ಭೇಟಿಯಾಗುವ ಒಂದು ಅವಕಾಶವೊದಗಿತು. ತೇಜಸ್ವಿ ತಮ್ಮ ಬರವಣಿಗೆಯ ಬಗೆಗಾಗಲಿ, ಅಂದು ಬಿಡುಗಡೆಯಾದ ಪುಸ್ತಕಗಳ ಬಗೆಗಾಗಲಿ ಏನೂ ಮಾತಾಡಲಿಲ್ಲ. ''ಕೇವಲ ಪ್ರಶಸ್ತಿ ವಿಜೇತರ ಬಗೆಗೆ ಪುಸ್ತಕಗಳನ್ನು ಹೊರತಂದರೆ ಸಾಲದು; ಕನ್ನಡದ ಎಷ್ಟೋ ಉತ್ತಮ ಲೇಖಕರಿಗೆ ಯಾವ ಪ್ರಶಸ್ತಿಯೂ ಬಂದಿರುವುದಿಲ್ಲ; ಅಂಥವರನ್ನೂ ಗುರುತಿಸಿ, ಅವರ ಬಗ್ಗೆ ಬರೆಸಿ ಪ್ರಕಟಿಸಿ ಮಾರಾಯರಾ'' ಎಂದು ಪ್ರಕಾಶಕರಿಗೆ ಸಲಹೆ ಮಾಡಿದರು. ವೇದಿಕೆಯಿಂದ ಇಳಿದುಬಂದು ನನ್ನ ಪಕ್ಕದಲ್ಲಿ ಕುಳಿತರು. ಹಳೆಯ ಸಹಪಾಠಿಗಳನ್ನೆಲ್ಲ ನೆನಪು ಮಾಡಿಕೊಂಡು ಮಾತಾಡಿದೆವು. ಬಿ. ಕೆ. ತಿಮ್ಮಪ್ಪ ತೀರ ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡರು; ಜಿ. ಶಂ. ಪರಮಶಿವಯ್ಯ ಈಗಿಲ್ಲ. ಹೀಗೆಯೇ ಮಾತಾಡುತ್ತಿದ್ದೆವು. ರಾತ್ರಿ ಡಾ|| ಜೆ. ಪಿ. ಕೃಷ್ಣೇಗೌಡರ ಮನೆಯಲ್ಲಿ ಏರ್ಪಡಿಸಿದ್ದ ಭೋಜನಕೂಟಕ್ಕೂ ನಿಲ್ಲದೆ ಅವಸರದಲ್ಲಿ ಕಾರು ಹತ್ತಿ ಹೊರಟುಹೋದರು ತೇಜಸ್ವಿ.

ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಅಷ್ಟೆ; ತೇಜಸ್ವಿ ಹೆಚ್ಚು ಮಾತುಗಾರರಲ್ಲ. ನಾವು 'ಒಳ್ಳೆಯ ಮಾತುಗಾರ' ಎನ್ನುತ್ತೇವಲ್ಲ, ಅಂಥವರನ್ನು ಕಂಡರೆ ಅವರಿಗೆ ಏನೋ ಒಂದು ರೀತಿಯ ಜುಗುಪ್ಸೆ. ಸೂಕ್ಷ್ಮ ಸಂವೇದನೆಗಳನ್ನು ಕೂಡ ಮಾತಿಗೆ ಇಳಿಸಬಲ್ಲವರನ್ನು ಕಂಡಾಗ 'He can vocalize anything' ಎಂದು ಸ್ವಲ್ಪ ತಿರಸ್ಕಾರದ ಧ್ವನಿಯಲ್ಲೇ ಹೇಳುತ್ತಿದ್ದರು. ಒಂದು ಮಾತಿನಲ್ಲಿ ಹತ್ತು ವಿಶೇಷಣಗಳನ್ನು ಬಳಸುವುದನ್ನು 'verbal diarrhoea' ಎನ್ನುತ್ತಿದ್ದರು.

ಕುವೆಂಪು ಅವರ 'ಜೈ ಭಾರತ ಜನನಿಯ ತನುಜಾತೆ' ಕವಿತೆಯನ್ನು ನಾಡಗೀತೆಯಾಗಿ ಅಂಗೀಕರಿಸಿದ ಸಂದರ್ಭದಲ್ಲಿ ನಡೆದ ವಾದವಿವಾದಗಳು ಕನ್ನಡಿಗರಿಗೆ ಪರಿಚಯವಿದೆ. ಶಂಕರ, ರಾಮಾನುಜ, ವಿದ್ಯಾರಣ್ಯ, ಬಸವೇಶ್ವರರ ಜೊತೆಯಲ್ಲಿ ಮಧ್ವಾಚಾರ್ಯರ ಹೆಸರನ್ನೂ ಸೇರಿಸಬೇಕಾಗಿತ್ತೆಂದೂ, ಕವಿಯಿಂದ ಆಗಿರುವ ಈ ಲೋಪವನ್ನು ಸರಿಪಡಿಸಬೇಕೆಂದೂ ಕೆಲವರು ಪಟ್ಟುಹಿಡಿದರು. ಆದರೆ, ತೇಜಸ್ವಿ ಮೂಲ ಕವಿತೆಯಲ್ಲಿ ಯಾವ ಬದಲಾವಣೆ ಮಾಡಲೂ ಸುತರಾಂ ಒಪ್ಪಲಿಲ್ಲ. ಕುವೆಂಪು ತಾತ್ವಿಕವಾಗಿಯೂ ಮಧ್ವಾಚಾರ್ಯರ ಹೆಸರನ್ನು ಸೇರಿಸಲು ಸಿದ್ಧರಿರಲಿಲ್ಲ ಎಂಬುದು ತೇಜಸ್ವಿಯ ನಿಲುವು. ಸಾಕಷ್ಟು ವಾದವಿವಾದಗಳಾದ ಮೇಲೆ ಅಂತೂ ಏನೋ ಒಂದು ತೀರ್ಮಾನವಾಯಿತು, ವಿವಾದ ತಣ್ಣಗಾಯಿತಷ್ಟೆ. ಆಗ ನಡೆದ ಒಂದು ಘಟನೆ :

ಮೂಡಿಗೆರೆಯ ಸಮೀಪದಲ್ಲೇ ನನ್ನ ಕಿರಿಯ ಬಂಧುವೊಬ್ಬನು – ಜೀವವಿಜ್ಞಾನದಲ್ಲಿ ವಿಶೇಷ ಅಧ್ಯಯನ ಮಾಡಿದವನು – ಪ್ರೌಢಶಾಲಾ ಮುಖ್ಯೋಪಾಧ್ಯಾಯನಾಗಿದ್ದಾನೆ; ಆಗಾಗ ತೇಜಸ್ವಿಯನ್ನು ಭೇಟಿಮಾಡುತ್ತಿದ್ದ ಇಲ್ಲವೇ ದೂರವಾಣಿಯ ಮೂಲಕ ಮಾತಾಡುತ್ತಿದ್ದ ಆತ, ನಾಡಗೀತೆಯ ವಿವಾದದ ಬಗೆಗೆ ಪ್ರಸ್ತಾಪಿಸಿದಾಗ, ತೇಜಸ್ವಿ ''ಕೆಲವು ಹಿರಿಯರನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಬಾರದೆಂದು ಸುಮ್ಮನಾದೆ'' ಎಂದು ಹೇಳಿ ಅಷ್ಟಕ್ಕೆ ನಿಲ್ಲಿಸದೆ ''ಇವೆಲ್ಲ ಕೆಲವು ಕೆಟ್ಟ (ಅಥವಾ ಕಳ್ಳ) ಬ್ರಾಹ್ಮಣರ ಕಿತಾಪತಿ'' ಎಂದರಂತೆ. ಈತನೂ ಅಷ್ಟಕ್ಕೆ ಬಿಡದೆ 'ಕೆಟ್ಟ ಬ್ರಾಹ್ಮಣರ ಜೊತೆಗೆ ಕೆಟ್ಟ ಗೌಡರೂ ಸೇರಿಕೊಂಡರಲ್ಲ' ಎಂದನಂತೆ. ಇಬ್ಬರೂ ಗಟ್ಟಿಯಾಗಿ ನಕ್ಕುಬಿಟ್ಟರು. ತೇಜಸ್ವಿ ನಗುತ್ತಿದ್ದಂತೆ ಹಾಗೆ ನಗಬೇಕೆನಿಸಿದಾಗ ಹ ಹ ಹ, ಹೊ ಹೊ ಹೊ – ಎಂದು ನಗುವುದು.

ಆ ನಗು, ಆ ವಿಶಿಷ್ಟ ಪ್ರತಿಭೆ, ಸತ್ಯಾನ್ವೇಷಣೆಯ ಇಂಗದ ದಾಹ ಇನ್ನೆಲ್ಲಿ! ಕೇವಲ ಔಪಚಾರಿಕವಾದ ಮಾತಲ್ಲ – ನಾಡುನುಡಿಗಳಿಗೆ ತುಂಬಲಾರದ ನಷ್ಟ ತೇಜಸ್ವಿಯ ನಿಧನ.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ತಿರುವು, ಕೆ. ಆರ್. ರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

---

*೧೪ನೇ ಪುಟದಿಂದ (ವಿಶ್ವ ವೀಕ್ಷಣೆ)*

ಪ್ರಜಾಪ್ರಭುತ್ವ ರಾಷ್ಟ್ರ ಎಂದು ಕರೆದುಕೊಳ್ಳುವ ಅಮೆರಿಕಾದಲ್ಲಿ ಪ್ರಜಾಭಿಪ್ರಾಯಕ್ಕೆ ಮನ್ನಣೆಯೇ ಇಲ್ಲ. ಪ್ರಜಾಪ್ರತಿನಿಧಿಗಳೆನಿಸಿಕೊಂಡಿರುವ ಅಮೆರಿಕಾದ ಸೆನೆಟ್ ಮತ್ತು ಕಾಂಗ್ರೆಸ್ ಸದಸ್ಯರಿಗೆ ಅಧ್ಯಕ್ಷರ ಸರ್ವಾಧಿಕಾರ ಎದುರಿಸಲು ವ್ಯವಧಾನವೇ ಇಲ್ಲ. ಅವರು ತಮ್ಮ ಸದನದಲ್ಲಿ ಏನೇ ತೀರ್ಮಾನ ಕೈಗೊಂಡರೂ ಅಧ್ಯಕ್ಷರು ಅದನ್ನು ಮುಲಾಜಿಲ್ಲದೆ ತಳ್ಳಿ ಹಾಕಬಹುದು. ಹಾಗಿದ್ದರೆ ಇದೆಂಥಾ ಪ್ರಜಾಪ್ರಭುತ್ವ ? ಅಧ್ಯಕ್ಷೀಯ ಸರ್ವಾಧಿಕಾರ ತಾನೆ ? ಈಚೆಗೆ ಅಮೆರಿಕಾದ ಸೆನೆಟ್ ಸಭೆ ಮತ್ತು ಕಾಂಗ್ರೆಸ್ ಸದನವು ಇರಾಕಿನಿಂದ ಮುಂದಿನ ವರ್ಷ (೨೦೦೮) ಏಪ್ರಿಲ್ ತಿಂಗಳೊಳಗೆ ಅಮೆರಿಕಾದ ಸೇನೆಗಳನ್ನು ವಾಪಸು ಕರೆಸಿಕೊಳ್ಳಬೇಕೆಂದು ತೀರ್ಮಾನವನ್ನು ಅಂಗೀಕರಿಸಿವೆ. ಪ್ರಯೋಜನವೇನು ? ಬುಷ್ ಈಗಾಗಲೇ ಅದನ್ನು ತಿರಸ್ಕರಿಸಲು ನಿರ್ಧರಿಸಿದ್ದಾನೆ. ಯಾವುದೇ ಕಾರಣಕ್ಕೂ ಆಕ್ರಮಣ ತೆರವು ಮಾಡಲು ಆತ ಸಿದ್ಧನಿಲ್ಲ.

ವಿಯೆಟ್ನಾಮ್ ಯುದ್ಧದ ದಿನಗಳನ್ನು ನೆನಪಿಗೆ ತರುವ ಬೃಹತ್ ಪ್ರದರ್ಶನಗಳು ಯೂರೋಪಿನ ದೇಶಗಳು ಮತ್ತು ಅಮೆರಿಕಾಗಳಲ್ಲಿ ಮಾರ್ಚ್ ೨೦ರಂದು ಇರಾಕ್ ಆಕ್ರಮಣದ ನಾಲ್ಕನೇ ವರ್ಷದಲ್ಲಿ ನಡೆದಿವೆ. ಅವರ ಬೇಡಿಕೆ ಅಮೆರಿಕಾ ಇರಾಕಿನಿಂದ ಕಾಲ್ತೆಗೆಯಬೇಕು ಎಂದು. ಅಮೆರಿಕಾದ ರಾಜಧಾನಿ ವಾಷಿಂಗ್ಟನ್‌ನಲ್ಲಿ ಕೊರೆಯುವ ಚಳಿಯಲ್ಲಿ ೧೦,೦೦೦ ಮಂದಿ ಪ್ರದರ್ಶನ ನಡೆಸಿದ್ದಾರೆ. ನ್ಯೂಯಾರ್ಕ್ ನಗರದಲ್ಲಿ ೭೦,೦೦೦ ಜನ ಪ್ರದರ್ಶನದಲ್ಲಿ ಭಾಗವಹಿಸಿದ್ದಾರೆ. ಇಂಥ ಪ್ರದರ್ಶನಗಳು ಪ್ರಪಂಚದ ಅನೇಕ ದೇಶಗಳಲ್ಲಿ ನಡೆದಿವೆ. ಜನತೆಯ ಹೋರಾಟವೊಂದೇ ಬುಷ್‌ನ ದುಸ್ಸಾಹಸಗಳನ್ನು ತಡೆಯಲು ಈಗಿರುವ ಸಾಧನ. ಮುಂದಿನ ದಿನಗಳಲ್ಲಿ ಈ ಹೋರಾಟವನ್ನು ತೀವ್ರಗೊಳಿಸುವುದು ಎಲ್ಲ ಶಾಂತಿಪ್ರಿಯರ, ಪ್ರಜಾಪ್ರಭುತ್ವವಾದಿಗಳ ಕರ್ತವ್ಯವಾಗಿದೆ.

**ಸೀಯಾರ್ಕೆ**
'ಜೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫



# ಸಿರಿಯ ಗರ

ಬಿ. ಜಿ. ಚೆನ್ನೇಶ್ ಹೊನ್ನಾಳಿ

ಶಿವಣ್ಣ ಕಣ್ಣು ಮುಚ್ಚಿದ. ನಿಂಗಣ್ಣ ಅವನನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದ. ಶಿವಣ್ಣ ಹೀಗೆ ಕಣ್ಣು ಮುಚ್ಚಿದ ಎಂದರೆ ಅವನ ತಲೆಯೊಳಗೆ ದಾರಿ ಹೊಳೆಯುತ್ತಿದೆಯೆಂದೇ ಅರ್ಥ. ಕೆಲವು ನಿಮಿಷಗಳು ಯೋಚಿಸಿದ ಬಳಿಕ ಗಂಭೀರವಾಗಿ ಶಿವಣ್ಣ ನುಡಿದ,

''ನೋಡು ನಿಂಗಣ್ಣ, ಈ ವಸಂತಪ್ಪನಿಗೊಂದು ಗತಿ ಕಾಣಿಸ್ಲೇಬೇಕು, ನೀನು ಒಪ್ಪೋದಾದ್ರೆ ಹೇಳ್ತೀನಿ.''

''ಏನು ಹೇಳೋ, ನನಗೂ ಈ ವಸಂತಪ್ಪನ ಕಡೀಂದ ರೋಸಿಹೋಗಿದೆ.''

''ಹೊಳೆ ತುಂಬಿ ಹರೀತಿದೆಯಂತೆ.''

''ಹೌದು, ನಾನು ನಿನ್ನೆ ಸಂಜೆ ಹೋಗಿದ್ನಲ್ಲ ನೋಡಿದೆ, ಈ ಸಾರಿ ಭರ್ತಿ ನೀರು ಬಂದಿದೆ.''

''ವಸಂತಪ್ಪ ಪ್ರತಿದಿನ ಸಾಯಂಕಾಲ ಹೊಳೆಯಾಚೆ ಇರೋ ಮೆಣಸಿನ ಹೊಲಕ್ಕೆ ಹೋಗ್ತಾನೆ, ದುರಾಸೆ ಮನುಷ್ಯ, ಒಂದು ದಿನ ಇದ್ರೂ ಹೊಳೆ ದಾಟಿಹೋಗಿ ಓಡಿಸಿ ಬರ್ತಾನೆ.''

''ಅಲ್ಲೋ ಶಿವಣ್ಣಾ, ನೀನು ಏನೋ ವಿಷಯ ಹೇಳ್ತೀನಿ ಅಂತೇಳಿ ಏನೇನೊ ಮಾತಾಡ್ತಿಯಲ್ಲ?''

''ಅದಕ್ಕೇ ನಾನು ಹೇಳ್ತಿರೋದು. ಇವತ್ತು ಅಮಾವಾಸ್ಯೆಯಾಗಿರೋದ್ರಿಂದ ಇವತ್ತು ನಾಳೆ ಹೊಳೆಯತ್ತ ಯಾರೂ ಹೋಗೊಲ್ಲ'' ಅಂತಂದು ಹಕ್ಕೆ ಮನೆಯ ಸುತ್ತಲೂ ಒಮ್ಮೆ ಕಣ್ಣಾಯಿಸಿ ಬಾಗಿಲ ಕಡೆ ನೋಡಿದ. ಯಾರೂ ಇರದದ್ದನ್ನು ಗಮನಿಸಿ ನಿಂಗಣ್ಣನ ಕಿವಿಯಲ್ಲಿ ನಿಧಾನವಾಗಿ ಉಸುರಿದ.

''ನಾಳೆ ಸಾಯಂಕಾಲ ವಸಂತಪ್ಪ ಹೊಳೆಯತ್ತ ಹೋಗಿ ಹೊಳೆ ದಾಟುವಾಗ ಪಕ್ಕದ ಸುಳಿಯಲ್ಲಿ ತಳ್ಳಿಬಿಡೋದು.''

ಶಿವಣ್ಣನ ಸಲಹೆ ಕೇಳಿ ಒಂದು ಕ್ಷಣ ದಂಗಾದರೂ ನಿಂಗಣ್ಣ ಸಾವರಿಸಿಕೊಂಡ. ಒಂದು ಕಿರುಬಂಡಿ ದಾರಿಗಾಗಿ ಅವನ ಹತ್ತಿರ ಕಾದಿ ಕಾದಿ ಸಾಕಾಗಿತ್ತು. ಊರಿನವರ ಹಾಗೂ ಮಾನವೀಯತೆ ದೃಷ್ಟಿಯಿಂದ ನ್ಯಾಯ ನಮ್ಮ ಕಡೆಗಿದ್ದರೂ, ಹಣ, ರಾಜಕೀಯ ಬಲದಿಂದ ಸುಳ್ಳು ದಾಖಲೆ ಸೃಷ್ಟಿಸಿ ಹೈಕೋರ್ಟಿನಲ್ಲಿ ಗೆದ್ದಿದ್ದ. ನಾಳೆ ತೀರ್ಪು ಅಧಿಕೃತವಾಗಿ ಊರಲ್ಲಿ ತಿಳಿದರೆ ನಾವು ಸತ್ತಂತೆಯೇ ಸರಿ. ದುಷ್ಟನಾದ ವಸಂತಪ್ಪನನ್ನು ಮಟ್ಟ ಹಾಕಲೇಬೇಕಾಗಿತ್ತು. ಯೋಚಿಸಿ ಆ ಸಲಹೆಗೆ ಒಪ್ಪಿಕೊಂಡ.

''ನೋಡು ಶಿವಣ್ಣ, ಸಣ್ಣ ಸುಳಿವೂ ಗೊತ್ತಾಗದ ಹಾಗೆ ಇರಬೇಕು'' ಎಂದು ಹೇಳುವುದನ್ನು ಮಾತ್ರ ನಿಂಗಣ್ಣ ಮರೆಯಲಿಲ್ಲ. ''ಸರಿ ಆಯ್ತು'' ಎಂದು ಒಬ್ಬರಿಗೊಬ್ಬರು ಮುಖ ನೋಡಿಕೊಂಡು ಹೊರಡಬೇಕೆನ್ನುವಷ್ಟರಲ್ಲಿ ನಿಂಗಣ್ಣನ ಮಗ ರಾಜ ಓಡೋಡಿ ಬಂದವನೇ,

''ಅಪ್ಪಯ್ಯ, ಅಪ್ಪಯ್ಯ ದೊಡ್ಡ ಮನೆ ವಸಂತಪ್ಪಾರು ಹೊಳೆಯಲ್ಲಿ ಬಿದ್ದು ಸತ್ರಂತೆ'' ಎಂದು ಒಂದೇ ಉಸಿರಿಗೆ ಹೇಳಿದ. ಕ್ಷಣಕಾಲ ಅಣ್ಣ ತಮ್ಮಂದಿರಿಬ್ಬರೂ ದಂಗಾಗಿ, ಸಾವರಿಸಿಕೊಂಡು ನಿಧಾನವಾಗಿ ಮತ್ತೊಮ್ಮೆ ಕೇಳಿ ಸ್ಪಷ್ಟಪಡಿಸಿಕೊಂಡರು.

''ಸರಿ ನೀನು ಹೋಗು'' ಎಂದು ಹೇಳಿದ ನಿಂಗಣ್ಣ ಶಿವಣ್ಣನ ಮುಖ ನೋಡಿದ. ಶಿವಣ್ಣನೂ ನಿಂಗಣ್ಣನ ಮುಖ ನೋಡಿದ.

* * *

ವಸಂತಪ್ಪ ಹೊಳೆಯಲ್ಲಿ ಮುಳುಗಿದನಂತೆ, ಹೌದೇ? ಅಯ್ಯೋ ಪುಣ್ಯಾತ್ಮ ಹೋಗಿಬಿಟ್ನೇ? ಅಲ್ಲಾರೀ, ಆಸೆಗೂ ಒಂದು ಮಿತಿಯಿದೆ. ತುಂಬಿದ ಹೊಳೆನಾ ಯಾರಾದರೂ ಈಜುತ್ತಾರೇನ್ರೀ? ಇರೋವರೆಗೂ ಆಸ್ತಿ, ಹಣ, ಕೋರ್ಟು, ಕಚೇರಿ, ರಾಜಕೀಯ ಅಂತ ಬಡಕೊಂಡ. ಕೊನೆಗಾಲದಲ್ಲಿ ಅನ್ಯಾಯವಾಗಿ ಹೊಳೆ ಪಾಲಾದ್ನ? ಹೊಳೆಯಾಚೆ ಇರೋ ಅವರ ಹೊಲಕ್ಕೆ ದನ ಬಂದಿದ್ದವಂತೆ ಕಣ್ರಿ; ಅವನ್ನ ಓಡಿಸಲಿಕ್ಕೆ ಅಂತೇಳಿ ತುಂಬಿದ ಹೊಳೆಗೆ ಹಾರಿದ್ರಂತೆ. ತುಂಬಿದ ಹೊಳೇನ ಈಜಲಿಕ್ಕೆ ಆಗುತ್ತೇನ್ರೀ, ಪಾಪ ಹೋಗಿಬಿಟ್ಟ, ದೊಡ್ಡ ಮನೇರ ಮನೆತನಕ್ಕೆ ಆಧಾರ ಸ್ತಂಭವಾಗಿದ್ದ, ಇನ್ಮುಂದೆ ದೊಡ್ಮನೆ ತನ್ನ ಕಳೇನೆ ಕಳಕೊಳ್ತದೆ. ಇನ್ನು ಮಂಜಣ್ಣ ಮತ್ತವರ ತಮ್ಮಂದಿರು ಚೆನ್ನಾಗಿ ಚಿಗೀತಾರೆ. ಬಹಳ ವರ್ಷಕ್ಕೆ ಒಬ್ಬ ಗಂಡು ಮಗನ್ನ ಪಡೆದಿದ್ದ, ಅವನೇಳ್ಗೆ ನೋಡುವ ಭಾಗ್ಯ ಇಲ್ಲ ಅವನಿಗೆ. ಪಾಪ ಅವರವರ ಹಣೆಬರಹ... ಹೀಗೆ ಒಬ್ಬೊಬ್ಬರದು ಒಂದೊಂದು ರೀತಿಯ ತರಾವರಿ ಮಾತುಗಳು.

ಪಾಪದ ಹಳ್ಳಿಯ ದೊಡ್ಡ ಮನೆ ವಸಂತಪ್ಪ ಕುಮುದ್ವತಿ ಹೊಳೆಯಿಂದಾಚೆ ಇರುವ ತನ್ನ ಮೆಣಸಿನ ಹೊಲದಲ್ಲಿದ್ದ ದನಗಳನ್ನು ಓಡಿಸಬೇಕೆಂದು ಅಮಾವಾಸ್ಯೆಯ ದಿನ ತುಂಬಿದ ಹೊಳೆಯಲ್ಲಿ ಅರ್ಧ ಈಜಿ, ಸುಳಿಗೆ ಸಿಕ್ಕು ಕೊನೆಗೆ ಈಜಲಾಗದೆ ಹೆಣವಾಗಿ ಮುಂದೂರಲ್ಲಿ ಸಿಕ್ಕಿದ್ದ. ವಸಂತಪ್ಪನ ಸಾವಿನ ವಿಷಯ ಕ್ಷಣದಲ್ಲೇ ಇಡೀ ಊರಿಗೆ ಹಬ್ಬಿತು. ಒಂದು ಕ್ಷಣ ಇಡೀ ಊರು ನಿಟ್ಟುಸಿರುಬಿಟ್ಟಿತು.

* * *

ಪಾಪದ ಹಳ್ಳಿ ಶಿಕಾರಿಪುರದಿಂದ ಮಾಸೂರು ರಸ್ತೆಯಲ್ಲಿರುವ ಹಲವಾಗಿಲನ್ನು ದಾಟಿ ಎರಡು ಮೈಲು ನಡೆದುಹೋದರೆ ಸಿಗುತ್ತದೆ, ಸುಮಾರು ಮುನ್ನೂರು ಮನೆಗಳ ಹಿಂದುಳಿದ ಊರು. ಹಲವಾಗಿಲಿನಿಂದ ಊರಿನವರೆಗೂ ತೀರಾ ಕಿರಿದಾದ ಮಣ್ಣಿನ ರಸ್ತೆ, ಅಕ್ಕಪಕ್ಕದಲ್ಲಿ ಗದ್ದೆ, ತೋಟಗಳು, ಊರಿಂದ ಪಶ್ಚಿಮಕ್ಕೆ ಒಂದೂವರೆ ಮೈಲು ದೂರದಲ್ಲಿ ಕುಮುದ್ವತಿ ನದಿ ಹರಿಯುತ್ತದೆ. ಊರಿನಲ್ಲಿ ಲಿಂಗಾಯತ ಮನೆಗಳೇ ಹೆಚ್ಚು, ಉಳಿದಂತೆ ಕುರುಬರು, ಲಂಬಾಣಿಗರು. ಊರ ಹೊರಗೆ ದಾರಿಯಲ್ಲೇ ಮಾದಿಗರ ಕೇರಿಯಿದೆ. ಊರಿನಲ್ಲಿ ಈ ತುದಿಯ ಮಾರಿಗುಡಿಯಿಂದ ಆ ತುದಿಯ ಕೇರಿಯವರೆಗೆ

ಇರುವ ದೊಡ್ಡ ಕೇರಿಯೇ ಮುಖ್ಯವಾದದ್ದು. ಉಳಿದಂತೆ ಮೂರುನಾಲ್ಕು ಸಣ್ಣ ಪುಟ್ಟ ಕೇರಿಗಳಿವೆ. ಊರ ಈ ತುದಿಯಲ್ಲಿ ಬಸವಣ್ಣ ದೇವರ ಗುಡಿ. ದೊಡ್ಡ ಕೇರಿಯ ಮಧ್ಯದಲ್ಲಿರುವುದೇ ಹದಿನೈದು ಅಂಕಣದ ಕೆಂಪು ಹಂಚಿನ ಮನೆ. ಊರಿಗೆ ಸಾಹುಕಾರನಾದ ವಸಂತಪ್ಪ ಮತ್ತವನ ಇಬ್ಬರು ತಮ್ಮಂದಿರು – ಸಿದ್ದಪ್ಪ, ಗಂಗಪ್ಪರ ಮನೆ, ಇದನ್ನು ದೊಡ್ಡ ಮನೇರ ಮನೆತನ ಎನ್ನುತ್ತಾರೆ. ಈ ಊರಲ್ಲಿ ಪ್ರತಿ ಮನೆಗೂ ಒಂದೊಂದು ಮನೆತನದ ಹೆಸರುಗಳು : ಕೆಂಚಳ್ಳರ ಮನೆ, ಬೆಳ್ಳುಳ್ಳಿಯವರ ಮನೆ, ಕಡೆಮನಿಯವರ ಮನೆ, ಮಾಸೂರರ ಮನೆ... ಇತ್ಯಾದಿ. ಈ ದೊಡ್ಡ ಮನೆಯವರ ಪಕ್ಕದ ಪೂರ್ವಕ್ಕಿರುವುದೇ ಅಣ್ಣ ತಮ್ಮಂದಿರಾದ ನಿಂಗಣ್ಣ, ಶಿವಣ್ಣ ಹಾಗೂ ಶಂಕರರ ಸಣ್ಣಳ್ಳಿಯವರ ಮನೆ. ಈ ಇಬ್ಬರ ಮನೆಗಳಿಗೂ ಒಂದು ಕಿರಿದಾರಿಯ ಸಲುವಾಗಿ ಪ್ರತಿದಿನ ಕಾದಾಟ ನಡೆದೇ ಇತ್ತು. ಕೇಸು ಊರ ಪಂಚಾಯಿತಿಯಿಂದ ಹಿಡಿದು ಹೈ ಕೋರ್ಟಿನವರೆಗೂ ಹೋಗಿತ್ತು. ಹೈಕೋರ್ಟಿನ ತೀರ್ಪು ಇಂದೇ ನಮ್ಮ ಪರವಾಗಿ ಬರುತ್ತೆ ಎಂದು ಬೀಗುತ್ತ ವಸಂತಪ್ಪ ತನ್ನ ಸಾವನ್ನ ತಾನೇ ತಂದುಕೊಂಡಿದ್ದ.

* * *

ಶಂಕರ ಭತ್ತದ ಹುಲ್ಲು ತುಂಬಿದ ಗಾಡಿಯನ್ನು ಹೊಡೆದುಕೊಂಡು ಬಂದ. ಮನೆಯ ಎದುರಿರುವ ಹಕ್ಕೆ ಮನೆಯ ಹಿಂದಿನ ಕೊಪ್ಪಲಿನಲ್ಲಿ ಬಣವೆ ಹಾಕಬೇಕಾಗಿತ್ತು. ಮುಖ್ಯ ರಸ್ತೆಯಿಂದ ಅಡ್ಡ ರಸ್ತೆಯಲ್ಲಿ ಸ್ವಲ್ಪ ಮುಂದೆ ಹೋದರೆ ವಸಂತಪ್ಪನ ದನದ ಕೊಟ್ಟಿಗೆ ಮತ್ತದಕ್ಕೆ ಸೇರಿದ ಹಿತ್ತಲು. ಮಧ್ಯದ ಇವರ ಹಿತ್ತಿಲನ್ನು ದಾಟಿ ತಮ್ಮ ಹಿತ್ತಿಲಿಗೆ ಹೋಗಬೇಕಾಗಿತ್ತು. ಇದು ತಲೆತಲಾಂತರದಿಂದ ನಡೆದುಕೊಂಡು ಬಂದಿತ್ತು. ಗಾಡಿಯನ್ನು ಹಿತ್ತಿಲಿಗೆ ಬಿಡಲಿಕ್ಕೆ ಎತ್ತುಗಳ ಹಗ್ಗ ಹಿಡಿದು ಎಡಕ್ಕೆ ತಿರುಗಿಸಿದರೆ ಶಂಕರನಿಗೆ ಎದುರಾದವನು ವಸಂತಪ್ಪ. ತಮ್ಮ ಎತ್ತುಗಳನ್ನು ದಾರಿಯಲ್ಲಿ ಕಟ್ಟಿಕೊಂಡು ಆಳುಗಳಿಂದ ಮೈತೊಳೆಸುತ್ತಿದ್ದ. ವಸಂತಪ್ಪ ಶಂಕರನನ್ನು, ತುಂಬಿದ ಗಾಡಿಯನ್ನು ಕೆಟ್ಟದಾಗಿ ನೋಡಿದ. ದುಡಿಮೆಯಲ್ಲಿ ತಮ್ಮ ಸರಿಸಮಾನಕ್ಕೆ ಬರುತ್ತಿದ್ದ ನಿಂಗಣ್ಣ ಮತ್ತವನ ತಮ್ಮಂದಿರನ್ನು ಕಂಡರೆ ಒಳಗೊಳಗೆ ಕೆಂಡ ಕಾರುತ್ತಿದ್ದ ವಸಂತಪ್ಪ. ವಸಂತಪ್ಪನೇ ದಾರಿಯಲ್ಲಿ ನಿಂತಿದ್ದರಿಂದ ಶಂಕರ ಸೌಜನ್ಯಕ್ಕಾಗಿ ಹಗ್ಗ ಹಿಡಿದು ಸ್ವಲ್ಪ ಹೊತ್ತು ಕಾದ. ಕೊನೆಗೆ ವಸಂತಪ್ಪ ಸರಿಯದೇ ಇದ್ದಾಗ ಬೆಳಗಿನಿಂದ ಹೊಲದಲ್ಲಿ ಕೆಲಸ ಮಾಡಿ ಸುಸ್ತಾದ ಎತ್ತುಗಳಿಗೆ ನೀರು ಕುಡಿಸಿ ಮೇವು ಹಾಕಬೇಕಾದ್ದರಿಂದ ನೋಡಿಯೂ ನೋಡದಂತಿದ್ದ ವಸಂತಪ್ಪನವರಿಗೆ,

''ಸ್ವಲ್ಪ ದಾರಿ ಬಿಡ್ತೀರಾ ?'' ಎಂದು ಕೇಳಿದ.

ಮುಖವನ್ನು ಕೆಟ್ಟದಾಗಿ ಮಾಡಿಕೊಂಡ ವಸಂತಪ್ಪ ತಿನ್ನುವವನಂತೆ ಶಂಕರನನ್ನು ನೋಡಿ,

''ಸರಿ, ಈಗ ಹೋಗು, ಇನ್ಮುಂದೆ ನಮ್ಮಿತ್ತಲಲ್ಲಿ ಓಡಾಡಬೇಡಿ'' ಎಂದ.

ಶಂಕರ ದೊಡ್ಡಣ್ಣ ಹೇಳದೆ ಏನೂ ಮಾಡುವವನು ಅಲ್ಲ, ಮಾತನಾಡುವವನೂ ಅಲ್ಲ. ಸುಮ್ಮನೆ ಗಾಡಿ ತಂದು ಎತ್ತುಗಳನ್ನು ಬಿಚ್ಚಿ ಹಕ್ಕೆ ಮನೆಯಲ್ಲಿ ಕಟ್ಟಿ ಹುಲ್ಲನ್ನು ಕೆಡವಿ ಊಟಕ್ಕೆ ಮನೆಗೆ ಬಂದ.

ರಾತ್ರಿ ನಿಂಗಣ್ಣ ಮತ್ತವನ ತಮ್ಮಂದಿರು ಊಟ ಮಾಡುವಾಗ ಸಂಜೆ ವಸಂತಪ್ಪ ಹೇಳಿದ್ದನ್ನು ಶಂಕರ ಹೇಳಿದ. ನಿಂಗಣ್ಣ ಹುಬ್ಬೇರಿಸಿ, ''ಯಾಕಂತೆ ? ಇದರ ಮೇಲೂ ಕಣ್ಣುಬಿತ್ತಾ ಅವಂದು ?'' ಎಂದ. ಕಣ್ಣುಗಳನ್ನು ಕೆಂಪಾಗಿಸಿಕೊಂಡ ಶಿವಣ್ಣ,

''ಏನಂತೆ ಆ ಬೋಸುಡಿಮಗಂದು ? ಅವರಪ್ಪಂದಂತ ದಾರಿ. ಇಷ್ಟು ವರ್ಷ ಕತ್ತೆ ಹಲ್ಲು ಉಜ್ಜುತ್ತಿದ್ನಂತ ? ಅದೇನು ಈಗ್ಲೇ ಕೇಳಿಬಿಡ್ತೀನಿ ತಡಿ'' ಎಂದು ಏಳುತ್ತಿದ್ದಂತೆ ತಮ್ಮನ ಒರಟಾದ ಸ್ವಭಾವ ತಿಳಿದ ನಿಂಗಣ್ಣ,

''ನೀನೀಗ ಊಟ ಮಾಡು, ನಾನು ನಿಧಾನವಾಗಿ ವಿಚಾರಿಸ್ತೀನಿ'' ಎಂದು ಸಮಾಧಾನ ಪಡಿಸಿದ. ಊಟಕ್ಕೆ ಬಡಿಸುತ್ತಿದ್ದ ನಿಂಗಣ್ಣನ ಹೆಂಡತಿ ಸಾವಿತ್ರಮ್ಮ,

ಮಧ್ಯಾಹ್ನ ಮುಡುಕಿಯ ತೆಂಗಿನಮರದಿಂದ ಕಾಯಿ ಬಿದ್ದಾಗ ತಗೊಂಡರೆ ವಸಂತಪ್ಪ ''ಇನ್ಮುಂದೆ ತೆಂಗಿನ ಕಾಯಿ ಬಿದ್ದರೆ ತಗೋಬೇಡಿ'' ಎಂದು ಹೇಳಿದ್ದನ್ನು ಕೇಳಿದಳು. ಶಿವಣ್ಣನ ರಕ್ತ ಕುದಿಯತೊಡಗಿತು.

''ಕೇಳಿದೇನಣ್ಣ, ಮರ ಮುಡಿಕಿ ಮಧ್ಯ ಇದ್ದು ಇಬ್ಬರಿಗೂ ಸೇರಿದೆ, ಹಿಂದೇನೆ ಊರಿನವರೆಲ್ಲ ಸೇರಿ ಪಂಚಾಯ್ತಿ ಮಾಡಿ ಕಾಯಿ ಯಾರ ಕಡೀಕೆ ಬೀಳ್ತೋವು ಅವನ್ನ ಅವರವರು ತಗೊಂಡುಬಿಡಿ. ಜಗಳಾನೇ ಇರಲ್ಲ, ಅಂತೇಳಿದಾರೆ. ಅದನ್ನೆಲ್ಲ ಮರ್ತು ತಿರುಬೋಕಿ ನನ್ಮಗ ಇಲ್ಲದ್ದೆ ದೌಲತ್ತ ನಡಸ್ತಾನೆ. ಇವಂದು ತೀರ ಅತಿಯಾಯ್ತು'' ಅನ್ನುತ್ತಾ ಒಂದೇ ಸಮನೆ ಕೆಂಡಕಾರಿದ. ನಿಂಗಣ್ಣನೆ ಶಿವಣ್ಣನನ್ನು ಸಮಾಧಾನಪಡಿಸಿ,

''ನಾನು ಎಲ್ಲಾ ವಿಚಾರಿಸ್ತೀನಿ, ನೀವು ಮಾತ್ರ ಗಲಾಟೆ ಮಾಡಬಾರದು'' ಎಂದು ತಮ್ಮಂದಿರಿಗೆ ಕಟ್ಟಪ್ಪಣೆ ಮಾಡಿದ.

* * *

''ಏನ್ರೀ ನೀವು ಸರಿಯಾಗಿ ಊಟಾನೇ ಮಾಡ್ಲಿಲ್ಲ?'' ಅಡಿಗೆ ಕೆಲಸ ಮುಗಿಸಿ ಬಂದ ಸಾವಿತ್ರಮ್ಮ ನಿಂಗಣ್ಣನಿಗೆ ಎಲೆ ಅಡಿಕೆ ಕೊಡುತ್ತಾ ಕೇಳಿದಳು.

''ಇಲ್ಲ ಕಣೆ, ತಮ್ಮಂದಿರು, ನೀನು ವಸಂತಪ್ಪನ ವಿಚಾರ ಹೇಳಿದ ಮೇಲೆ ಏಕೋ ಬೇಸರವಾಯ್ತು. ಈ ವಸಂತಪ್ಪನಿಗೆ ಏನಾಗಿದೆ ಅಂತೇನಿ. ತಾನೂ ಸುಖವಾಗಿರೋಲ್ಲ, ಇನ್ನೊಬ್ಬರನ್ನೂ ಸುಖವಾಗಿರೋಕ್ಕೂ ಬಿಡೋಲ್ಲ'' ಎಂದು ಎಲೆಡಿಕೆ ಜಗಿಯುತ್ತಾ ನುಡಿದ ನಿಂಗಣ್ಣ.

''ಅವರ ತಮ್ಮಂದಿರು, ಹೆಂಗಸರು ತುಂಬಾ ಒಳ್ಳೆಯವರು ಕಣ್ರೀ, ಇವರೊಬ್ಬರೇ ಹಿಂಗಾಡೋದು, ಮಧ್ಯಾಹ್ನ ಎಷ್ಟು ಕೆಟ್ಟದಾಗಿ ಮಾತಾಡಿದ್ರು ಅಂತೀರಿ'' ಎನ್ನುತ್ತಾ ಸಾವಿತ್ರಮ್ಮ ಪಕ್ಕದಲ್ಲಿ ಮಲಗಿದ ಮಗ ರಾಜನ ಹೊದಿಕೆಯನ್ನು ಸರಿಪಡಿಸಿದಳು. ಗಂಡನ ಮುಖವನ್ನೊಮ್ಮೆ ಸಣ್ಣ ಬೆಳಕಿನಲ್ಲಿ ನೋಡಿದ ಸಾವಿತ್ರಮ್ಮ,

''ರೀ, ನೀವು ತುಂಬಾ ಯೋಚನೆ ಮಾಡ್ಬೇಡ್ರೀ, ಎಲ್ಲಾ ಸರಿಹೋಗುತ್ತೆ. ಊರಲ್ಲಿ ಯಜಮಾನ್ರೇನೂ ಸತ್ತಿಲ್ಲ, ನಾಲ್ಕು ಜನ ಹೇಳೇ ಹೇಳ್ತಾರೆ, ಸರಿ ಯಾವುದು, ತಪ್ಪು ಯಾವುದು ಅಂತ. ನೀವು ಮಲಕ್ಕೋಳ್ರಿ'' ಎಂದು ಹೇಳಿ ಬೆಳಗಿನಿಂದ ಕೆಲಸ ಮಾಡಿ ಸುಸ್ತಾಗಿದ್ದ ಸಾವಿತ್ರಮ್ಮ ನಿದ್ದೆ ಹೋದಳು.

ನಿಂಗಣ್ಣ ಹಿಂದಿನ ದಿನಗಳನ್ನು ಮೆಲಕು ಹಾಕಿದ.

ತಂದೆ ತಾಯಿಯರನ್ನು ಕಳೆದುಕೊಂಡು ಇರುವ ಇಬ್ಬರು ತಮ್ಮಂದಿರನ್ನು ನೋಡಿಕೊಳ್ಳುತ್ತಾ ತುಂಬಾ ಬಡತನದಿಂದಲೇ ಮೇಲೆ ಬಂದವನು ನಿಂಗಣ್ಣ. ತಂದೆ ಸಾಯುವಾಗ ಇದ್ದದ್ದು ಕೇವಲ ಒಂದು ಸಣ್ಣ ಮನೆ, ಎದುರಿನ ಹಕ್ಕೆ ಮನೆ, ಹಿತ್ತಿಲು, ನೀರಾವರಿಯ ೩ ಎಕರೆ ಹಾಗೂ ಹೊಳೆಯಾಚೆಯ ೪ ಎಕರೆ ಒಣಭೂಮಿ. ತಮ್ಮಂದಿರನ್ನು ಕಷ್ಟಪಟ್ಟು ಓದಿಸಿದ. ಶಿವಣ್ಣ ಶಿಕಾರಿಪುರದಲ್ಲಿ ಪಿ.ಯು.ಸಿ.ವರೆಗೆ ಓದಿದರೆ, ಶಂಕರ ಬಿ.ಎ.ವರೆಗೂ ಓದಿದ್ದಾನೆ. ಶಿವಣ್ಣನೇ ಅಣ್ಣನ ದುಡಿಮೆಯನ್ನು ನೋಡಲಾರದೆ ಕಾಲೇಜಿಗೆ ಶರಣು ಹೊಡೆದರೆ ಶಂಕರನಿಗೆ ಏಕೋ ಮುಂದೆ ಓದೇ ಹತ್ತಲಿಲ್ಲ, ಬಿಟ್ಟುಬಿಟ್ಟ. ಅಷ್ಟರಲ್ಲಿ ಮನೆಯ ಕೆಲಸವು ಬೇಕಾದಷ್ಟಿತ್ತು. ಊರಿನಲ್ಲಿ ಸ್ವಲ್ಪ ಹಣವಂತರಾದ ಬಸಪ್ಪನವರಿಂದ ಸಾಲ ಪಡೆದು ಎರಡು ಎಕರೆಗೆ ಅಡಿಕೆ, ತೆಂಗಿನ ತೋಟ ಕಟ್ಟಿದ ನಿಂಗಣ್ಣ ಹಿಂದಿರುಗಿ ನೋಡಲೇ ಇಲ್ಲ. ಅಡಿಕೆ, ತೆಂಗು ಚೆನ್ನಾಗಿ ಬೆಳೆದು ರೇಟು ಸಿಕ್ಕಿ ಕೈಹಿಡಿಯುತ್ತಿದ್ದಂತೆಯೇ ಒಂದು ಟ್ರ್ಯಾಕ್ಟರನ್ನು ತಗೊಂಡ. ಸೋಗೆ ಹುಲ್ಲಿನ ಹಕ್ಕೆ ಮನೆಯನ್ನು ಕೆಡವಿ ಹಂಚಿನ ಮನೆ ಕಟ್ಟಿಸಿದ. ಈ ಹೊತ್ತಿಗೆ ತಮ್ಮಂದಿರೂ ಹೆಗಲು ಕೊಟ್ಟದ್ದರಿಂದ ಊರ ಜನರಿಗೆ ಕಣ್ಣು ಕುಕ್ಕುವಂತಾದರು. ತೋಟದ ಪಕ್ಕ ಆರು ಎಕರೆ ಜಮೀನನ್ನು ಕೊಂಡುಕೊಂಡು ತೋಟ ಕಟ್ಟಿದ. ಸಾವಿತ್ರಮ್ಮನಿಗೆ ಸಾಕಷ್ಟು ಬಂಗಾರವನ್ನು ಮಾಡಿಸಿದ. ನೆಮ್ಮದಿಯಿಂದಿದ್ದು ಇನ್ನೇನು ತಮ್ಮಂದಿರಿಗೆ ಮದುವೆ ಮಾಡಿ ಅವರವರ ಪಾಲಿಗಿಂತ ಹೆಚ್ಚಿಗೇನೇ ಕೊಟ್ಟು ಎಲ್ಲರೂ ಒಂದೇ ಕಡೆಯೇ ಇರಬೇಕೆಂದು ಯೋಚಿಸುತ್ತಿದ್ದ.

ನಿಂಗಣ್ಣ ನಿದ್ದೆ ಹೋದ.

* * *

ವಸಂತಪ್ಪ ಮತ್ತವನ ತಮ್ಮಂದಿರಿಗೆ ಶ್ರೀಮಂತಿಕೆ ಪಿತ್ರಾರ್ಜಿತವಾಗಿಯೇ ಬಂದಿತ್ತು. ಜೊತೆಗೆ ಅವನ ಕುಯುಕ್ತಿಯೂ ಸೇರಿ ಅದು ಮತ್ತಷ್ಟು ಹೆಚ್ಚಾಗಿತ್ತು. ೪೦ ಎಕರೆ ನೀರಾವರಿ, ೧೨ ಎಕರೆ ತೋಟ, ಹೊಳೆಯಾಚೆಯ ೧೨ ಎಕರೆ ಒಣಭೂಮಿ, ೧೫ ಅಂಕಣದ ಮನೆ, ಎದುರಿನ ಸೋಗೆಯ ದನದ ಕೊಟ್ಟಿಗೆ, ಹಿತ್ತಲು, ೧೮ ತೊಲ ಬಂಗಾರ, ೨ ಟ್ರ್ಯಾಕ್ಟರು, ನಾಲ್ಕಾರು ಆಳುಗಳು ಎಲ್ಲಾ ಇದ್ದರು. ಎರಡನೆಯ ತಮ್ಮ ಸಿದ್ದಪ್ಪ ಮಕ್ಕಳಾಗಲಿಲ್ಲ ಎಂದು ಪಕ್ಕದ ಕೇರಿಯ ಶಾಂತಮ್ಮನನ್ನು ಇಟ್ಟುಕೊಂಡಿದ್ದ. ಮನೆ ಕೆಲಸ, ತೋಟವನ್ನು ಆತ ನೋಡಿಕೊಂಡರೆ ಟ್ರ್ಯಾಕ್ಟರ್‌ಗಳು ಹಾಗೂ ಗದ್ದೆ ಹೊಳೆಯಾಚೆಯ ಜಮೀನನ್ನು ಗಂಗಪ್ಪ ನೋಡಿಕೊಳ್ಳುತ್ತಿದ್ದ. ಈತನಿಗೆ ಒಬ್ಬ ಗಂಡು ಮಗ. ಆದರೆ ಇವರೆಂದೂ ಹಿರಿಯಣ್ಣನಿಗೆ ಎದುರಾಡಲಾರರು. ವಸಂತಪ್ಪನಿಗೆ ತುಂಬಾ ತಡವಾಗಿ ಒಂದು ಗಂಡು ಮಗು ಆಗಿತ್ತು. ವಸಂತಪ್ಪ ಮನೆಯ ಮೇಲುಸ್ತುವಾರಿ, ಊರಿನ ರಾಜಕೀಯ, ಕೋರ್ಟು, ಕಚೇರಿ ಎಂದು ಸದಾ ಶಿಕಾರಿಪುರ-ಶಿಮೊಗ್ಗಕ್ಕೆ ಹೋಗಿಬರುತ್ತಿದ್ದ. ಇತ್ತೀಚೆಗೆ ಗ್ರಾಮ ಪಂಚಾಯಿತಿ ಎಲಕ್ಷನಿನಲ್ಲಿ ಇದ್ದ ಬದ್ದ ಹಣ ಸುರಿದು ತಾನೇ ಅಧ್ಯಕ್ಷ ಕೂಡ ಆಗಿದ್ದ. ಜೊತೆಗೆ ಬಡ್ಡಿ ವ್ಯವಹಾರ ಬೇರೆ. ಊರಿನಲ್ಲಿರುವ ಬಡವರಿಗೆ ೫ ರಿಂದ ೧೦ರತನಕ ಅವರವರ ತುರ್ತು ನೋಡಿ ಕೊಡುತ್ತಿದ್ದ. ಕೊಡುವಾಗ ಅವರ ಹೊಲ ಮನೆಯ ಪತ್ರಗಳನ್ನು ಪಡೆಯುವುದನ್ನು, ಖಾಲಿ ಪೇಪರ್‌ಗಳಿಗೆ ಸಹಿ ಹಾಕಿಸಿಕೊಳ್ಳುವುದನ್ನು ಮರೆಯುತ್ತಿರಲಿಲ್ಲ. ಹೀಗೆ ಸಂಪಾದಿಸಿದ ಬಡ್ಡಿ, ಅಸಲು ತೀರಿಸಲಿಕ್ಕಾಗದೆ ಸಾಲಗಾರರು ಬಿಟ್ಟುಕೊಟ್ಟ ಜಮೀನು ಸುಮಾರು ೨೦ ಎಕರೆಯಷ್ಟಾದರೂ ಇದ್ದೀತು.

ವಸಂತಪ್ಪನ ವಿಶೇಷ ಎಂದರೆ ಪ್ರತಿ ಬೇಸಿಗೆಯಲ್ಲಿ ಮನೆಯ ದೊಡ್ಡ ಟ್ರೆಜರಿಯಲ್ಲಿರುವ ನೋಟುಗಳನ್ನು ಹಿತ್ತಲಿನ ಬಾವಿ ಕಟ್ಟೆಯ ಬಳಿ ಒಣಗಲು ಹಾಕುತ್ತಿದ್ದುದು. ಊರಿನ ಸಣ್ಣ ಪುಟ್ಟ ಜಗಳಗಳಿಗೆ ಇವನದೇ ಯಜಮಾನಿಕೆ. ಊರಿನಲ್ಲಿ ತನ್ನದೇ ನಡೆಯಬೇಕೆಂಬ ಹಟ.

ಪಕ್ಕದ ನಿಂಗಣ್ಣನವರು ತಮ್ಮ ಹಿತ್ತಲಲ್ಲೇ ಎತ್ತಿನ ಗಾಡಿಯನ್ನು ನಡೆಸುತ್ತಿದ್ದುದು ವಸಂತಪ್ಪನಿಗೆ ದುರಾಸೆಯಿಂದ ಸಹಿಸಲಾಗುತ್ತಿರಲಿಲ್ಲ. ಆ ಜಾಗದಲ್ಲಿ ಎರಡೂ ಟ್ರ್ಯಾಕ್ಟರು ಗಳನ್ನು ನಿಲ್ಲಿಸಲು ಮನೆ ಕಟ್ಟಬೇಕೆಂದು ಯೋಚಿಸುತ್ತಿದ್ದರು. ಆದರೆ ತಲೆತಲಾಂತರದಿಂದ ಓಡಾಡುತ್ತಿರುವ ಅವರನ್ನು ತಡೆಯುವುದೆಂತು ? ಇದನ್ನು ಬಿಡಿಸಲು ಸಣ್ಣ ತೊಡಕಿತ್ತು. ತಮ್ಮ ತಂದೆಯವರು ಹಾಗೂ ನಿಂಗಣ್ಣನವರ ತಂದೆಯ ಕಾಲದಲ್ಲಿ ಹೇಗಾದರೂ ಆಗಲಿ ಎಂದು ನಾಲ್ಕು ಜನ ಯಜಮಾನರೆದುರು ಬಿಳಿ ಕಾಗದದಲ್ಲಿ ಆ ಜಾಗದಲ್ಲಿ ''ಯಾವತ್ತೂ ನಿಂಗಣ್ಣ ಮತ್ತವನ ತಮ್ಮಂದಿರಿಗೆ ಹಿತ್ತಲಿಗೆ ಹೋಗಲು ಅವಕಾಶ ಮಾಡಿಕೊಡ ಬೇಕೆಂದೂ'' ಬರೆಸಿ ಇಬ್ಬರಲ್ಲೂ ಇಟ್ಟುಕೊಂಡಿದ್ದರು. ಇದೊಂದು ಆಧಾರ ಇಲ್ಲದಿದ್ದರೆ ವಸಂತಪ್ಪ ಯೋಚನೆಯನ್ನೇ ಮಾಡುತ್ತಿರಲಿಲ್ಲ. ಆದರೂ ಒಂದು ಸಾಧಾರಣ ಪತ್ರ ತಾನೇ ? ಇದೇ ಬೇಸಿಗೆಯಲ್ಲಿ ಆ ಜಾಗದಲ್ಲಿ ಟ್ರ್ಯಾಕ್ಟರ್‌ಗಳನ್ನು ನಿಲ್ಲಿಸಲು ಮನೆ ಕಟ್ಟಿಸಬೇಕೆಂದು ಯೋಚಿಸಿದ್ದರು.

* * *

''ಇನ್ಮುಂದೆ ಗಾಡಿಗೆ ದಾರಿಬಿಡಲ್ಲ ಅಂದ್ರಂತೆ'' ಬೆಳಗ್ಗೆ ಆಗತಾನೇ ರೊಟ್ಟಿ , ಪಲ್ಯ ತಿಂದು ಆರಾಮ ಕುರ್ಚಿಯ ಮೇಲೆ ಆ ದಿನದ ಪೇಪರ್ ಓದುತ್ತಿದ್ದ ವಸಂತಪ್ಪನವರನ್ನು ನಿಂಗಣ್ಣ ಕೇಳಿದ.

''ಹೌದು ಮತ್ತೆ, ನಮ್ಮ ಜಾಗದಲ್ಲಿ ನಿಮಗ್ಯಾಕೆ ಗಾಡಿಗೆ ದಾರಿ ಬಿಡಬೇಕು ? ನಾವಲ್ಲಿ ಟ್ರ್ಯಾಕ್ಟರ್‌ಗಳನ್ನು ನಿಲ್ಲಿಸಲಿಕ್ಕೆ ಮನೆ ಕಟ್ಟಿಸಬೇಕಾಗಿದೆ'' ಎಂದರು.

''ಹಿಂದಿನಿಂದಲೂ ನಾವಲ್ಲೇ ಓಡಾಡ್ತಾ ಬಂದಿದ್ದೀವಲ್ಲ? ಈಗ ನೀವು ಬಿಡಲ್ಲ ಅಂದರೆ ನಾವು ಹೇಗೆ ಓಡಾಡೋದು ?''

''ಅದಕ್ಕೆ ನಾನೇನ್ ಮಾಡ್ಲಿ? ನಮ್ಮ ಜಾಗದಲ್ಲಿ ನಾವು ಮನೆ ಕಟ್ತೀವಿ.''

''ನೋಡ್ಲಿಕ್ಕೆ ಜಾಗ ನಿಮ್ಮದೇ ಇರಬಹುದು, ಆದರೆ ಹಿಂದಿನಿಂದಲೂ ನಾವೆಲ್ಲ ಓಡಾಡ್ತಿದ್ದೀವಿ. ಅಲ್ಲದೆ ನಮ್ಮ ತಂದೆ ನಿಮ್ಮ ತಂದೆಯವರಿದ್ದಾಗ ಆ ಜಾಗದ ಕುರಿತು ಬರೆಸಿದ ಪತ್ರ ಸಹ ಇದೆ. ನಿಮ್ಮ ದುರಾಸೆಯಿಂದ ನಮಗೆ ತುಂಬಾ ಕಷ್ಟವಾಗುತ್ತೆ. ಯೋಚನೆ ಮಾಡಿ ವಸಂತಪ್ಪನೋರೆ.''

''ನೋಡು ನಿಂಗಣ್ಣ , ಪತ್ರ ನಮ್ಮತ್ರಾನೂ ಇದೆ. ನಮ್ಮ ತಂದೆ ಏನೋ ಆ ಟೈಮಲ್ಲಿ ಬರಕೊಟ್ರು. ಹಂಗಂತ ನಮ್ಮ ಜಾಗ ಬಿಟ್ಟುಕೊಡಕ್ಕಾದೀತೇ ? ಅದೊಂದು ಮಾತ್ರ ಸಾಧ್ಯವೇ ಇಲ್ಲ. ಅದೇನು ಮಾಡ್ಕೋತೀರೋ ಮಾಡ್ಕಹೋಗ್ರಿ.'' ಕಡ್ಡಿ ಮುರಿದಂತೆ ಮಾತಾಡಿದ ವಸಂತಪ್ಪನೆದುರು ಇನ್ನು ಮಾತಾಡಿ ಪ್ರಯೋಜನ ಇಲ್ಲ ಅಂತ ನಿಂಗಣ್ಣ ಮನೆಗೆ ಬಂದ.

''ಲೋ ಗಂಗಾ, ನಾನು ಹೊಳೆಯಾಚೆ ಇರೋ ಮೆಣಸಿನ ಹೊಲಕ್ಕೆ ಹೋಗಿ ಬರ್ತೀನಿ, ಸಿದ್ದ ಬಂದ್ರೆ ನಮ್ಮ ಜಾಗಕ್ಕೆ ಸರಿಯಾಗಿ ಬೇಲಿ ಹಾಕಲಿಕ್ಕೆ ಹೇಳಿಬಿಡು'' ಎಂದು ಹೆಂಡತಿಗೆ ಹೇಳಿ ಹೊರನಡೆದರು ವಸಂತಪ್ಪನವರು.

* * *

ಬಸವಣ್ಣ ದೇವರ ಗುಡಿಗೆ ಮನೆಗೊಬ್ಬರಂತೆ ಜನರು ಬಂದು ಸೇರುತ್ತಿದ್ದರು. ವಸಂತಪ್ಪ ನವರು ಗತ್ತಿನಲ್ಲಿ ಟವೆಲ್ ಆಡಿಸುತ್ತಾ ಕೂತಿದ್ದರೆ ತಮ್ಮಂದಿರು ದೂರದಲ್ಲಿ ಕೂತಿದ್ದರು. ನಿಂಗಣ್ಣನೇ ಊರಿನ ಯಜಮಾನರುಗಳಿಗೆ ಹೇಳಿ ಪಂಚಾಯ್ತಿ ಸೇರಿಸಿದ್ದ. ನಾಗಪ್ಪ, ಸಿದ್ದಬಸಪ್ಪ, ಬಸವಣ್ಯಪ್ಪ, ಯೋಗೇಶ್ವರಪ್ಪ, ಮಹೇಶ್ವರಪ್ಪನವರು ಮೊದಲಾದ ಯಜಮಾನರೆಲ್ಲ ಸೇರಿದ್ದರು.

''ನಿಂಗಣ್ಣ , ನಿಂದೇನು ಸಮಸ್ಯೆ ಹೇಳಪ್ಪ'' ಎಂದರು ಮಹೇಶ್ವರಪ್ಪ. ಎದ್ದುನಿಂತ ನಿಂಗಣ್ಣ ಹಿತ್ತಲಿನ ಜಾಗದ ಕಾರಣದಿಂದ ಇದುವರೆಗೂ ನಡೆದದ್ದೆಲ್ಲವನ್ನೂ ಹೇಳಿ ಪತ್ರ ತೋರಿಸಿ, ದಯಮಾಡಿ ನ್ಯಾಯ ಒದಗಿಸಿಕೊಡಬೇಕೆಂದು ಕೋರಿ ಕೈ ಮುಗಿದು ಕುಳಿತ.

''ಏನು ವಸಂತಪ್ಪನವರೆ ನೀವು ಹಿರಿಯರು, ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಮೇಲಾಗಿ ತಿಳಿದವರು, ನಿಮ್ಮಂಥವರಿಗೆ ಇಂಥ ವಿಷಯಗಳಲ್ಲಿ ಹೇಳ್ಲಿಕ್ಕೆ ನಮಗೂ ಬಾಯಿ ಕಟ್ಟುತ್ತೆ. ಏನು ಹೇಳ್ತೀರಿ ?'' ಎಂದು ಸಿದ್ದಬಸಪ್ಪನವರು ಎಲ್ಲಾ ಯಜಮಾನರ ಮುಖಗಳನ್ನೊಮ್ಮೆ ನೋಡಿದರು.

''ಬೆಳಿಗ್ಗೆ ನಿಂಗಣ್ಣನಿಗೆ ಹೇಳಿದ್ದೆ, ನಾನು ಈಗ್ಲೂ ಹೇಳೋದು. ನಮ್ಮ ತಂದೆ ಕಾಲದ ಪತ್ರ ಇರಬಹುದು, ಆದರೆ ನಾನು ಮಾತ್ರ ಯಾವ ಕಾರಣಕ್ಕೂ ಜಾಗ ಬಿಡೋದಿಲ್ಲ'' ಎಂದು ವಸಂತಪ್ಪ ಹೇಳಿದರು. ಹಿರಿಯರಾದ ಮಹೇಶ್ವರಪ್ಪ, ''ನೋಡು ವಸಂತಪ್ಪ, ನಿಮ್ಮ ತಂದೆ ಒಪ್ಪಿ ಬರೆಸಿದ ಪತ್ರಕ್ಕೆ ಒಪ್ಪಲಿಲ್ಲ ಅಂದ್ರೆ ನಿಮ್ಮ ತಂದೆಗೇ ನೀನು ದ್ರೋಹ ಬಗೆದಂಗಾಗ್ತದೆ. ಅಲ್ಲದೆ ನಿನಗೇನು ಕಮ್ಮಿಯಾಗಿದೆ ? ದನದ ಮನೆಯ ಪಕ್ಕದಲ್ಲಿ ಜಾಗ ಇದೆಯಲ್ಲ, ಅಲ್ಲಿ ಕಟ್ಟು ಟ್ರ್ಯಾಕ್ಟರ್‌ಗೆ ಮನೇನ'' ಎಂದರು. ಈ ಮಾತುಗಳಿಗೆ ಉಳಿದ ಯಜಮಾನರು ದನಿಗೂಡಿಸಿದರು.

''ಸಾಧ್ಯವೇ ಇಲ್ಲ, ಯಾರು ಹೇಳಿದ್ರೂ ನಾನು ಒಪ್ಪಲ್ಲ. ಅವರಿನ್ನೂ ತಕರಾರು ಮಾಡಿದ್ರೆ ಕೋರ್ಟಿನಲ್ಲಿ ಹೇಗೆ ಬಿಡಿಸ್ಕೋಬೇಕು ಅನ್ನದು ನನಗೆ ಚೆನ್ನಾಗಿ ಗೊತ್ತು'' ಎಂದು ಕೊನೆ ಮಾತಾಡಿದರು ವಸಂತಪ್ಪ.

''ಅದೇಗೆ ದಾರಿ ಬಿಡೊಲ್ಲವೋ ನಾವೂ ನೋಡ್ತೀವಿ. ನಾವೇನೂ ತಿಳೀದೆ ಕೈಕಟ್ಟಿ ಕೂರೋವ್ರಲ್ಲ'' ಎಂದು ಸಿಟ್ಟಿನಿಂದ ಎದ್ದ ಶಿವಣ್ಣನನ್ನು ಯಜಮಾನರು ಸಮಾಧಾನ ಮಾಡಿ ಕೂರಿಸಿದರು.

''ಸುಮ್ನೆ ಹಟ ಮಾಡಬೇಡ ಒಪ್ಕೋ ವಸಂತಪ್ಪ'' ಎಂದು ಯಜಮಾನರು ಮತ್ತೊಮ್ಮೆ ಒತ್ತಾಯಿಸಿದರು.

''ನನ್ನ ಪ್ರಾಣ ಹೋದ್ರೂ ಆ ಜಾಗ ಅವರಿಗೆ ಬಿಡೋದಿಲ್ಲ'' ಎಂದು ಒಂದೇ ಕ್ಷಣಕ್ಕೆ ಟವೆಲ್ ಕೊಡವಿಕೊಂಡು ತುಂಬಿದ ಸಭೆಯಿಂದ ಯಾರಿಗೂ ಮರ್ಯಾದೆ ಕೊಡದೆ ಹೊರಟೇಬಿಟ್ಟರು ವಸಂತಪ್ಪನವರು.

ಪಂಚಾಯ್ತಿ ಮುಗಿಯಿತು.

* * *

ಶಿಕಾರಿಪುರದ ಶಾಸಕ ಡಾಕಪ್ಪನವರು ಶಾಸನಸಭೆಗೆ ಆರಿಸಿ ಬಂದಿದ್ದಕ್ಕಾಗಿ ಊರಿನಲ್ಲಿ ಅಭಿನಂದನಾ ಸಭೆಯನ್ನಿಟ್ಟುಕೊಂಡಿದ್ದರು. ಅವರ ಗೆಲುವಿಗೆ ಅನ್ಯಾಯ ಮಾರ್ಗದಿಂದ ಸಾಕಷ್ಟು ಶ್ರಮಿಸಿದ್ದ ವಸಂತಪ್ಪನವರದೇ ಮುಂದಾಳತ್ವ. ಊರೊಳಗಿನ ರಸ್ತೆಗಳಿಗೆ ಡಾಂಬರು ಹಾಕಿಸುವುದು, ನಲ್ಲಿ ನೀರಿನ ವ್ಯವಸ್ಥೆ, ಕೆರೆಯ ಏರಿಯ ರಸ್ತೆಯನ್ನು ದುರಸ್ತಿಗೊಳಿಸುವುದು ಇತ್ಯಾದಿ ಊರಿಗೆ ಬೇಕಾದ ಅವಶ್ಯಕತೆಗಳನ್ನೆಲ್ಲಾ ವಸಂತಪ್ಪನವರು ಪಟ್ಟಿ ಮಾಡಿ ಮನವಿ ಸಲ್ಲಿಸಿದರು.

ಸಭೆ ಮುಗಿಯಿತು.

ಮಧ್ಯಾಹ್ನ ಶಾಸಕರಿಗೆ ವಸಂತಪ್ಪನವರ ಮನೆಯಲ್ಲಿ ಭರ್ಜರಿ ಊಟ. ವಸಂತಪ್ಪನವರು ಊಟದ ಮಧ್ಯೆ ಶಾಸಕರಿಗೆ ಹಿತ್ತಲಿನ ಜಾಗದ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿದರು.

''ಏನು ವಸಂತಪ್ಪ , ಎಲೆಕ್ಷನ್‌ನಲ್ಲಿ ನನಗೋಸ್ಕರ ನೀನು ಎಷ್ಟು ದುಡಿದಿದ್ದೀ ಅಂತ ನಂಗೊತ್ತಿಲ್ವ ? ನೀನು ಮಾಡಿದುಪಕಾರಕ್ಕೆ ಇದೇನ್ ಮಹಾ ಕೆಲಸ ಅಂತ ಹೇಳ್ತಿ. ನೀನು ನಾಳೇನೆ ಶಿಕಾರಿಪುರಕ್ಕೆ ಬಾ. ನಾನು ನಮ್ಮ ಲಾಯರ್‌ಗೆ ಹೇಳಿ ಎಲ್ಲ ವ್ಯವಸ್ಥೆ ಮಾಡ್ತೀನಿ'' ಎಂದರು.

* * *

ಪೋಸ್ಟ್‌ಮನ್ ಕೃಷ್ಣ ಬೆಲ್ ಬಾರಿಸುತ್ತಾ ನಿಂಗಣ್ಣ ನಿಂಗಣ್ಣ ಎಂದು ಒಂದು ರಿಜಿಸ್ಟರ್ ಪತ್ರ ಕೊಟ್ಟನು. ಒಡೆವರೆ ವಿಷಯ ಇಂಗ್ಲಿಷಿನಲ್ಲಿದ್ದು ಅವನಿಗೆ ತಿಳಿಯುತ್ತಿರಲಿಲ್ಲ. ಒಳಗಿದ್ದ ಶಂಕರನನ್ನು ಕರೆದು ತೋರಿಸಿದರೆ ಅವನಿಗೂ ಪೂರ್ತಿ ಅರ್ಥವಾಗದಿದ್ದರೂ ಇದು ಕೋರ್ಟಿನಿಂದ ಬಂದ ಸಮನ್ಸ್ ಎಂಬುದು ತಿಳಿಯಿತು.

ರಾತ್ರಿ ಅಣ್ಣ ತಮ್ಮಂದಿರು ಕೂಡಿ ಚರ್ಚಿಸಿದರು. ಹಿತೈಷಿಯಾದ ಬಸಪ್ಪನವರು ತಮಗೆ ಗೊತ್ತಿದ್ದ ಒಬ್ಬ ಲಾಯರ್‌ಗೆ ಹೇಳಿ ಕಳಿಸಿದರು. ಶಿಕಾರಿಪುರದಲ್ಲಿ ಕೇಸು ಆರಂಭವಾಯ್ತು.

ಅಣ್ಣನ ಮಾತಿಗೆ ಎದುರಾಡದ ಸಿದ್ದಪ್ಪ ತಮ್ಮ ಜಾಗಕ್ಕೆ ಬೇಲಿ ಹಾಕಿಯೇ ಬಿಟ್ಟಿದ್ದ. ನಿಂಗಣ್ಣ ಮತ್ತವನ ತಮ್ಮಂದಿರು ಅನಿವಾರ್ಯವಾಗಿ ಎರಡು ಮೈಲು ಸುತ್ತಿಕೊಂಡು ತಮ್ಮಿತ್ತಿಲಿಗೆ ಗಾಡಿಯಲ್ಲಿ ಬರತೊಡಗಿದರು. ಶಿವಣ್ಣ ಇದನ್ನೆಲ್ಲ ಕಂಡು ಹಲ್ಲು ಮಸೆಯುತ್ತಿದ್ದ. ಕ್ರಮೇಣ ಊರಿನಲ್ಲಿ ಎರಡು ಗುಂಪಾಯ್ತು. ವಸಂತಪ್ಪನಿಂದ ಹಣ ಪಡೆದು ಕೊಡಲಿಕ್ಕಾಗದೇ ಜಮೀನು ಮನೆ ಕಳಕೊಂಡವರು, ಅನ್ಯಾಯಕ್ಕೊಳಗಾದವರು ನಿಂಗಣ್ಣನ ಕಡೆಗಾದರು. ಆದರೆ ಉಳಿದ ನೂರಾರು ಜನರು ಮಾತ್ರ ನೈತಿಕವಾಗಿ ನಿಂಗಣ್ಣನ ಕಡೆಗೆ ಇದ್ದರು.

ಈ ಮಧ್ಯೆ ಮುಡಕಿಯಲ್ಲಿ ಬಿದ್ದ ತೆಂಗಿನಕಾಯಿಗಳಿಗೆ ವಸಂತಪ್ಪನೊಂದಿಗೆ ಸಣ್ಣ ಪುಟ್ಟ ಜಗಳಗಳು ಮುಂದುವರಿದೇ ಇದ್ದವು. ಊರಿನಲ್ಲಿ ನಡೆದ ದೀಪಾವಳಿ ಹಬ್ಬ (ಹಟ್ಟಿ ಹಬ್ಬ)ದಲ್ಲೂ ವಸಂತಪ್ಪ ಕೆಟ್ಟದ್ದಾಗಿ ನಡೆದುಕೊಂಡು ಜನತೆಯಿಂದ ಮತ್ತಷ್ಟು ತಿರಸ್ಕೃತನಾದ.

ನಡೆದದ್ದು ಇಷ್ಟು.

ಮೂರು ದಿನಗಳ ಕಾಲ ನಡೆಯುವ ದೀಪಾವಳಿ ಹಬ್ಬ ಶಿಕಾರಿಪುರ ಹಾಗೂ ಸುತ್ತಮುತ್ತಲ ಹಳ್ಳಿಗಳಲ್ಲಿ ಬಹಳ ಪ್ರಸಿದ್ಧ. ಈ ಮೂರು ದಿನಗಳಲ್ಲಿ ದನಗಳನ್ನು ಓಡಿಸುವುದು (ಬೆದರಿಸುವುದು) ವಿಶೇಷ ಆಕರ್ಷಣೆ. ದನದ ಕೊರಳಿಗೆ ಕೊಬ್ಬರಿ

ಗಿಟುಕುಗಳನ್ನು ಕಟ್ಟಿ ಬೆದರಿಸುತ್ತಾರೆ. ಜನಗಳ ಮಧ್ಯೆ ಬಿರುಸಾಗಿ ಓಡಿಬರುವ ಅವುಗಳನ್ನು ತಡೆದವರು ಆ ಗಿಟುಕುಗಳನ್ನು ಪಡೆಯುತ್ತಾರೆ. ದನಗಳನ್ನು ಹಿಡಿಯಲು ಬೇರೆ ಊರುಗಳಿಂದ ಜನಗಳು ಬರುತ್ತಾರೆ. ಕೆಲವರು ತಮ್ಮ ಹೋರಿಗಳ ಮೇಲೆ ದುಡ್ಡು, ಬಂಗಾರ, ಜಮೀನುಗಳನ್ನೇ ಪಣಕ್ಕಿಟ್ಟು ಸಾರಿಸುತ್ತಾರೆ. ಹಬ್ಬಕ್ಕಾಗಿಯೇ ಕೆಲವರು ಹೋರಿಗಳನ್ನು ಕಟ್ಟಿ ಮೇಯಿಸುತ್ತಾ ಪ್ರತಿಷ್ಠೆ ಬೆಳೆಸಿಕೊಳ್ಳುತ್ತಾರೆ. ಪ್ರತಿವರ್ಷ ವಸಂತಪ್ಪನ ಕೆಂಪು ಹೋರಿಯು ಯಾರಿಗೂ ಸಿಗದೆ ಅವರನ್ನು ಮತ್ತಷ್ಟು ಚಿಗುರಿಸಿತ್ತು. ಗ್ರಹಚಾರ ಕಾಡಿಯೋ ಏನೋ ಈ ಸಾರಿ ಒಂದು ವಿಚಿತ್ರವಾದ ಪಣ ಸಾರಿದ್ದರು. ಕೆಂಪು ಹೋರಿಯನ್ನು ಹಿಡಿದವರ ಕೊರಳಿಗೆ ಎಲ್ಲರೆದುರಿಗೆ ಹೂ ಹಾರ ಹಾಕಿ ೧೦,೦೦೦ ರೂ. ಕೊಡುವುದೇ ಆ ಪಣ. ವಸಂತಪ್ಪನವರ ದೆಸೆಯಿಂದ ಮೊದಲೇ ರೋಷ ಗೊಂಡಿದ್ದ ಶಿವಣ್ಣ ಈ ಬಾರಿ ಅವರ ಕೆಂಪು ಹೋರಿಯನ್ನು ಹಿಡಿಯಲೇಬೇಕೆಂದು ತೀರ್ಮಾನಿಸಿದ. ಮೊದಲ ಬಾರಿ ಸಿಗಲಿಲ್ಲ. ಆದರೆ ಎರಡನೇ ಬಾರಿ ಬೆನ್ನತ್ತಿ ಹಿಡಿದೇಬಿಟ್ಟ. ಮನೆಯ ಮುಂದಿನ ಕಟ್ಟೆಯ ಮೇಲೆ ಮೀಸೆಯನ್ನು ತಿರುವುತ್ತ ಕುಳಿತಿದ್ದ ವಸಂತಪ್ಪನವರು ದಂಗಾಗಿಹೋದರು. ಊರಿನಲ್ಲಿ ಬೇರೆ ಯಾರಾದರೂ ಹಿಡಿದಿದ್ದರೆ ಚಿಂತೆ ಇರಲಿಲ್ಲ. ಆದರೆ ಪರಮ ವೈರಿಯಾದ ಶಿವಣ್ಣನಿಗೆ ಹೇಗೆ ಹಾರ ಹಾಕುವುದು ? ಜನಗಳು ಒಂದೇ ಸಮನೆ ಕೇಕೆ ಹಾಕುತ್ತ ಶಿವಣ್ಣನನ್ನು ಎತ್ತಿ ಹಿಡಿದು ಹಾರ ಹಾಕಿ ಹಣ ಕೊಡಲು ಒತ್ತಾಯಿಸಿದರು.

ವಸಂತಪ್ಪ ೧೦,೦೦೦ ಬೇಕಾದರೆ ಕೊಡ್ತೀನಿ, ಆದರೆ ಹಾರ ಹಾಕುವುದಿಲ್ಲ ಎಂದು ಪಟ್ಟುಹಿಡಿದ. ಆದರೆ ಜನಗಳು ಕೇಳಬೇಕೇ ? ಹಾರ ಹಾಕಲೇಬೇಕೆಂದು ಹೇಗೆ ಹೇಳಿದರೂ ವಸಂತಪ್ಪನವರು ಕೇಳದಿದ್ದಾಗ ಹಬ್ಬವೇ ನಿಂತುಹೋಗಿ ಪಂಚಾಯತಿ ನಡೆಯಬೇಕಾಯಿತು. ಯಜಮಾನರುಗಳು ಕೋಪದಿಂದಲೇ ವಸಂತಪ್ಪನಿಗೆ ಛೀಮಾರಿ ಹಾಕಿದರು. ಊರಿಗೆ ಊರೇ ಎದುರಾದಾಗ ವಿಧಿ ಇಲ್ಲದೆ ಒಳಗೇ ಹಲ್ಲು ಮಸೆಯುತ್ತಾ ಶಿವಣ್ಣನಿಗೆ ಹಾರ ಹಾಕಿ ಹಣ ನೀಡಿದರು. ಇವರಿಂದ ಹಬ್ಬವೇ ನಿಂತೀತೆಂದು ಊರಿನವರೆಲ್ಲರೂ ವಸಂತಪ್ಪನಿಗೆ ಸಾಪಳಿಸಿದರು.

ತುಂಬಾ ಅವಮಾನಿತನಾದ ವಸಂತಪ್ಪ, ನಿಂಗಣ್ಣ ಮತ್ತವರ ತಮ್ಮಂದಿರನ್ನು ಹೇಗಾದರೂ ಮಾಡಿ ಬಗ್ಗು ಬಡಿಯಲೇಬೇಕೆಂದುಕೊಂಡ. ಇಡೀ ಊರಿನವರ ದುರಿಗೆ ತನ್ನ ತಲೆ ತಗ್ಗಿಸಿದ ಶಿವಣ್ಣನನ್ನು ಮತ್ತೆ ಎತ್ತದಂತೆ ಮಾಡಲೇಬೇಕೆಂದು ಪಣ ತೊಟ್ಟರು. ಈಗ ಹಾಕಿರುವ ಜಾಗದ ಕೇಸಲ್ಲಿ ಶತಾಯಗತಾಯ ಗೆಲ್ಲಲೇಬೇಕೆಂದು ತೀರ್ಮಾನಿಸಿದರು.

* * *

ಬಸಪ್ಪನವರು ನಿಂಗಣ್ಣ ಮತ್ತವನ ತಮ್ಮಂದಿರನ್ನು ಸಮಾಧಾನ ಮಾಡುತ್ತಿದ್ದರು. ''ಇಷ್ಟಕ್ಕೆ ಮುಗಿದುಹೋಯ್ತು ಅನ್ನಂಗೆ ಆಡ್ತಿಯಲ್ಲ ನಿಂಗಣ್ಣ ? ಈಗ ಜಾಗದ ಕೇಸು ನಿಮ್ಮ ವಿರುದ್ಧ ಇದೆ. ಆದರೆ ಇದೇ ಫೈನಲ್ ಅಲ್ಲ, ನೀವು ಜಿಲ್ಲಾ ಸೀನಿಯರ್ ಕೋರ್ಟಿಗೆ ಅಪೀಲು ಹೋಗ್ಬಹುದು. ಸ್ವಲ್ಪ ಜಾಸ್ತಿ ಹಣ ಖರ್ಚಾಗುತ್ತೆ ಅಷ್ಟೇ. ನಿಮಗೆ ಗಾಡಿ ಓಡಾಡಲಿಕ್ಕೆ ದಾರಿ ಬೇಕೇ ಬೇಕಂದ್ರೆ ನೀವು ಹೊಗಲೇಬೇಕಷ್ಟೆ'' ಎಂದರು.

ಶಿಕಾರಿಪುರ ಕೋರ್ಟಿನಲ್ಲಿ ಜಾಗದ ಕೇಸು ತಮ್ಮ ವಿರುದ್ಧ ಆದಾಗ ವಿಷಣ್ಣವದನರಾಗೇ ನಿಂಗಣ್ಣ ಶಿವಣ್ಣ ಊರಿಗೆ ಮರಳಿದ್ದರು. ವಸಂತಪ್ಪನವರು ಗೆಲ್ಲಲು ಮುಖ್ಯ ಕಾರಣ ಅವರ ವಕೀಲರು ಸೃಷ್ಟಿಸಿದ ಒಂದು ಸುಳ್ಳು ದಾಖಲೆ. ನಿಂಗಣ್ಣನ ತಂದೆ ಚನ್ನಬಸಪ್ಪನವರೇ, ''ಕೆರೆಯ ಹಿಂದುಗಡೆಯಿಂದ ದಾರಿ ಇದ್ದರೂ ನಾವು ಇದುವರೆಗೂ ವಸಂತಪ್ಪನವರ ಜಾಗದಲ್ಲಿ ಅವರ ಅನುಮತಿ ಮೇರೆಗೆ ಓಡಾಡಿದ್ದೀವಿ. ಇನ್ಮುಂದೆ ನಾವು ಕೆರೆಯ ಕಡೆಯಿಂದಲೇ ಓಡಾಡ್ತೀವಿ'' ಎಂದು ಬರೆದುಕೊಟ್ಟ ಪತ್ರ. ಇದನ್ನು ನೋಡಿದ ನಿಂಗಣ್ಣ, ಶಿವಣ್ಣರಿಗೆ ವಸಂತಪ್ಪನ ಕೇಡಿ ಕೆಲಸದ ನೆನಪಾಯ್ತು. ಆ ಪತ್ರದಲ್ಲಿನ ಸಹಿ ತಂದೆಯ ಸಹಿಗೆ ಹೋಲುತ್ತದೆ. ಹಣ ಚೆನ್ನಾಗಿಯೇ ಕೆಲಸ ಮಾಡಿದೆಯೆಂದು ಕೊಂಡರು. ಸಾಯಂಕಾಲ ಶಿಕಾರಿಪುರದಿಂದ ಹಲವಾಗಿಲಿನಲ್ಲಿ ಒಂದೇ ಬಸ್ಸಿಗೆ ಇಬ್ಬರೂ ಬಂದಿಳಿದ ಮೇಲೆ ವಸಂತಪ್ಪನವರು ಇವರನ್ನು ನೋಡಿ ಮೀಸೆಮೇಲೆ ಕೈ ಹಾಕಿ ತಿರುವುತ್ತಾ ಹೋಗಿದ್ದು ಶಿವಣ್ಣನ ಹೊಟ್ಟೆಯಲ್ಲಿ ಬೆಂಕಿ ಕಲಸಿದಂಗಾಗಿತ್ತು. ಲಾಯರ್, ಕೋರ್ಟ್ ಫೀ, ಓಡಾಟ ಅಂತೇಳಿ ಈಗಾಗಲೇ ಸಾಕಷ್ಟು ಹಣ ಖರ್ಚಾಗಿತ್ತು. ಮುಂದೇನು ಅಂತ ಬಸಪ್ಪನವರನ್ನು ಕರೆದು ಚರ್ಚಿಸುತ್ತಿದ್ದರು.

''ಬೋಸುಡಿ ಮಗ ವಸಂತಪ್ಪನಿಂದ ಕೋರ್ಟು ಮೆಟ್ಲು ಹತ್ತಂಗೆ ಆಯ್ತಲ್ಲ ಬಸಪ್ಪನೋರೆ, ನಮ್ಮ ತಂದೆ ಬರಕೊಟ್ಟ ಹಾಗೆ ಸುಳ್ಳು ದಾಖಲೆ ಸೃಷ್ಟಿಸಿದ್ದಾನೆ. ನಮ್ಮ ತಂದೆ ಹೀಗೆ ಮಾಡಲಿಕ್ಕೆ ಸಾಧ್ಯವೇ ಇಲ್ಲ'' ಶಿವಣ್ಣ ಸಿಟ್ಟುಗೊಂಡಿದ್ದ.

''ಕೇಡುಗಾಲ ಶಿವಣ್ಣ, ಕೇಡುಗಾಲ. ಕೆಲವರು ತಮ್ಮ ಪಾಪದ ಕೊಡವನ್ನು ತಾವೇ ತುಂಬಿಕೊಳ್ತಾ ಹೋಗ್ತಾರಂತೆ. ವಸಂತಪ್ಪನಿಗೆ ಹಣ, ರಾಜಕೀಯದ ಮದ ತಲೆಗೇರಿದೆ. ಊರಿನಲ್ಲಿ ಪಾಳೇಗಾರ ಅಂದ್ಕೊಂಡಿದಾನೆ. ಹಂಗಂತ ನಾವು ಸುಮ್ಮನಿರಕಾದೀತೆ ? ಅವನಿಗೆ ಸರಿಯಾದ ಬುದ್ಧಿ ಕಲಿಸಲೇಬೇಕು'' ವಸಂತಪ್ಪನವರು ತನಗಿಂತ ಎತ್ತರ ಬೆಳೆದಿದ್ದನ್ನು ಒಳಗೇ ಸಹಿಸದಾಗದಿದ್ದ ಬಸಪ್ಪನವರು ನಿಂಗಣ್ಣ, ಶಿವಣ್ಣರಿಗೆ ರೋಷ ತುಂಬುತ್ತಾಹೋದರು.

''ಸರಿ ಆಗಿದ್ದಾಗಲಿ, ಜಿಲ್ಲಾ ಸೀನಿಯರ್ ಕೋರ್ಟಿಗೆ ನೀವೇಳಿದಂಗೆ ಅಪೀಲು ಹಾಕನ'' ಎನ್ನುತ್ತಾ ನಿಂಗಣ್ಣ ಎದ್ದ. ಬಸಪ್ಪನವರೂ ಬರ್ತೀನಿ ಎಂದು ನಡೆದರು.

* * *

''ಹೆಂಗಲೆ ಬಸ್ಯ, ನನ್ನೇನು ಅಂತ ಅಂದ್ಕಂಡಿದಾರೆ ಇವರು, ನನ್ಮುಂದೆ ಧಿಮಾಕು ಮಾಡ್ತಾರೆ, ನಾನೆಂಥ ಮನುಷ್ಯ ಅಂತ ಗೊತ್ತಿದ್ದೂ ಸಡ್ಡು ಹೊಡಿಯೋದು ಅಂದ್ರೆ'' ಎಂದು ಕೋರ್ಟಲ್ಲಿ ತಾನು ಗೆದ್ದ ಪ್ರತಾಪವನ್ನು ತಮ್ಮ ಚೇಲಾಗಳಾದ ಬಸ್ಯ, ನಾಗ, ಗುರುಸಿದ್ದನೊಂದಿಗೆ ತಮ್ಮ ಮನೆಯ ಒಳಗೆ ಕೂತು ಕೊಚ್ಚಿಕೊಳ್ಳುತ್ತಿದ್ದರು.

''ಹೌದ್ರಿ ಯಜಮಾನ್ರೇ, ನೀವಂದ್ರೇನು ? ನಿಮ್ಮ ವಿರುದ್ದಾನೆ ಬೀಳೋದು ಅಂದ್ರೇನು ? ಅವರಿಗೆ ತಕ್ಕ ಶಾಸ್ತಿ ಆತು'' ಎಂದು ಬಸ್ಯ, ನಾಗ, ಗುರುಸಿದ್ದ ದನಿಗೂಡಿಸಿದರು. ಅಣ್ಣನ ದರ್ಪ ದೌಲತ್ತು ಹಿಡಿಸದ ಸಿದ್ದಪ್ಪ. ಗಂಗಪ್ಪ ಹೊರಗಿನ ವರಾಂಡದಲ್ಲಿ ಕುಳಿತು ಬೇರೇನನ್ನೋ ಮಾತಾಡುತ್ತಿದ್ದರು.

* * *

''ನಿಮ್ಮ ಹತ್ರ ಒಂದು ಬಿಳಿ ಕಾಗದದ ಮೇಲಿನ ಬರಹ ಬಿಟ್ರೆ ಬೇರೇನೂ ಇಲ್ಲವಲ್ಲ. ವಸಂತಪ್ಪನಲ್ಲಿ ನಿಮ್ಮ ತಂದೆ ಬರೆದುಕೊಟ್ಟಿರುವ ಪತ್ರ ಬೇರೆ ಇದೆ. ಸಹಿ ಪರೀಕ್ಷೆಯಲ್ಲಿ ತೀರ್ಪು



ಅವರ ಪರವಾಗೇ ಬಂದಿದೆ. ನಿಮ್ಮ ಪರವಾಗಿ ಸಾಕ್ಷಿ ಹೇಳ್ತೀವಿ ಅಂತ ಬಂದ ಸಣ್ಣಪ್ಪ, ಹನುಮಂತಪ್ಪ ಅವರೂ ಕೊನೆ ಗಳಿಗೆಯಲ್ಲಿ ಅವರ ಪರವಾಗಿ ಸಾಕ್ಷಿ ಹೇಳಿದರು. ವಸಂತಪ್ಪ ಚೆನ್ನಾಗಿ ಹಣ ಚೆಲ್ಲಿದ್ದಾನೆ ಅಂತ ಕಾಣ್ತದೆ ನಾನೆಷ್ಟೇ ಪ್ರಯತ್ನ ಪಟ್ಟರೂ ಹಿಂಗಾಗಿ ಬಿಡ್ತು'' ಎಂದು ನಿಂಗಣ್ಣನ ಲಾಯರ್ ಶಿವಮೊಗ್ಗದ ಸೀನಿಯರ್ ಕೋರ್ಟ್‌ನಲ್ಲಿ ಸೋತು ಹೊರ ಬರುವಾಗ ಖಿನ್ನರಾಗಿ ನುಡಿದು ನಡೆದರು. ನಿಂಗಣ್ಣ ಸೋತು ಸುಣ್ಣವಾಗಿದ್ದ. ಶಿವಣ್ಣನಿಗೆ ದೊಡ್ಡ ಆಘಾತವಾಗಿತ್ತು.

''ಈಗ ಯೋಚನೆ ಮಾಡಿ ಪ್ರಯೋಜ್ನ ಇಲ್ಲ ನಿಂಗಣ್ಣ. ಹೆಜ್ಜೆ ಇಟ್ಟಾಗಿದೆ. ಹೈಕೋರ್ಟ್‌ನಲ್ಲಿ ಕೊನೇ ಪ್ರಯತ್ನ ಮಾಡೇಬಿಡೋಣ'' ಎಂದು ಜೊತೆಗಿದ್ದ ಬಸಪ್ಪನವರು ಸೂಚಿಸಿದರು. ನಿಂಗಣ್ಣನಿಗೆ ಬೇರೆ ದಾರಿಯಿರಲಿಲ್ಲ. ಒಮ್ಮೆ ಶಿವಣ್ಣನ ಮುಖವನ್ನು ನೋಡಿದ. ಅಗಾಧ ಸಿಟ್ಟಿದ್ದರೂ ಶಿವಣ್ಣ ಸಮ್ಮತಿಸಿದ.

ಕೇಸು ಹೈ ಕೋರ್ಟಿನಲ್ಲಿ ದಾಖಲಾಯಿತು.

*　　*　　*

ಊರಿನಲ್ಲಿ ಎಲ್ಲರದೂ ವಸಂತಪ್ಪ ಮತ್ತು ನಿಂಗಣ್ಣ ಇಬ್ಬರಲ್ಲಿ ಯಾರು ಗೆಲ್ಲುತ್ತಾರೆಂದು ಒಂದೇ ಚರ್ಚೆ. ಕೆಲವರು ವಸಂತಪ್ಪ ಗೆಲ್ಲುತ್ತಾನೆ ಎಂದರೆ ಮತ್ತೆ ಕೆಲವರು ನಿಂಗಣ್ಣ ಗೆಲ್ಲುತ್ತಾನೆ ಎನ್ನುತ್ತಿದ್ದರು. ಈ ಮಧ್ಯೆ ಕೋರ್ಟಿನಲ್ಲಿ ಕೇಸು ನಡೆಯುತ್ತಿದ್ದರೂ ವಸಂತಪ್ಪನವರು ಟ್ರ್ಯಾಕ್ಟರ್‌ಗಳಿಗೆ ಮನೆ ಕಟ್ಟಿಸಲು ವಿವಾದದ ಜಾಗದಲ್ಲಿ ಕಲ್ಲು, ಮರಳು, ಇಟ್ಟಿಗೆ ಹೇರಿಸಿದ್ದರು.

ನಿಂಗಣ್ಣ ಈ ಕೇಸಿನಿಂದ ತುಂಬಾ ಮಾನಸಿಕವಾಗಿ ನೊಂದಿದ್ದ. ಕೇಸು ಆರಂಭವಾದಾಗಿನಿಂದ ವಿಪರೀತ ಹಣ ಖರ್ಚಾಗಿತ್ತು. ಅಡಿಕೆಯ ರೇಟು ಬೇರೆ ಇಳಿದು ನಷ್ಟ ವಾಗಿತ್ತು. ಭತ್ತಕ್ಕೆ ರೋಗ ಬಂದು ತುಂಬಾ ಹೊಡೆತ ಬಿದ್ದಿತ್ತು. ಗಂಡನ ಮತ್ತು ಮೈದುನರ ಕಷ್ಟಗಳನ್ನು ನೋಡ ಲಾಗದೆ ಸಾವಿತ್ರಮ್ಮ 'ಇದರ ಸಹವಾಸ ಸಾಕು ಬಿಟ್ಟುಬಿಡ್ರಿ, ಅವರು ಕೆಟ್ಟ ಸರ್ಪ ಇದ್ದಹಾಗೆ' ಎಂದು ಬುದ್ಧಿವಾದ ಹೇಳುತ್ತಿದ್ದುದು ಶಿವಣ್ಣನಿಗೆ ನುಂಗಲಾರದ ತುತ್ತಾಗಿತ್ತು. ವಸಂತಪ್ಪನಿಗೆ ಒಂದು ಗತಿ ಕಾಣಿಸಲೇಬೇಕೆಂದು ಕಾಯುತ್ತಿದ್ದರು.

ಮಳೆಗಾಲ ಶುರು ಆಗಿತ್ತು. ಈ ಬಾರಿ ಚೆನ್ನಾಗಿ ಮಳೆ ಬಿದ್ದಿದ್ದರಿಂದ ಕುಮುದ್ವತಿ ನದಿ ತುಂಬಿ ಹರಿಯುತ್ತಿತ್ತು. ವಸಂತಪ್ಪ ಪ್ರತಿದಿನ ಸಂಜೆ ಹೊಳೆ ದಾಟಿ ಆಚೆ ಇರುವ ಮೆಣಸಿನ ಹೊಲದಲ್ಲಿ ಅಡ್ಡಾಡಿ ಬರುವ ರೂಢಿಯಿಟ್ಟು ಕೊಂಡಿದ್ದರು.

ಸೋಮವಾರ ಅಮಾವಾಸ್ಯೆ. ಅಂದೇ ಹೈಕೋರ್ಟಿನ ತೀರ್ಪು ಹೊರಬೀಳಲಿದೆ. ಅನಂತರ ತನ್ನ ಹೆಂಡತಿ, ಮಗನನ್ನು ಕರೆದುಕೊಂಡು ಮನೆದೇವರಾದ ಉಳವಿಗೆ ಹೋಗಿ ಬರಬೇಕೆಂದು ವಸಂತಪ್ಪ ಯೋಚಿಸಿದರು. ಮಳೆ ನಿಂತ ತಕ್ಷಣವೇ ಟ್ರ್ಯಾಕ್ಟರ್‌ಗಳಿಗೆ ಮನೆ ಕಟ್ಟಿಸಿ, ಇರುವ ಹದಿನೈದು ಅಂಕಣದ ಮನೆಯ ಕೆಂಪು ಹಂಚುಗಳನ್ನು ತೆಗೆಸಿ ಆರ್.ಸಿ.ಸಿ. ಹಾಕಿಸಬೇಕೆಂದುಕೊಂಡರು.

ನಿಂಗಣ್ಣ ಶಿವಣ್ಣ ಇಬ್ಬರೂ ಬೆಂಗಳೂರಿಗೆ ಕೇಸಿನ ಸಲುವಾಗಿ ಮೂರ್‍ನಾಲ್ಕು ಬಾರಿ ಓಡಾಡಿದರು. ಆದರೆ ಬರಬರುತ್ತಾ ಅವರ ಮುಖದಲ್ಲಿ ಗೆಲುವು ಕಮ್ಮಿಯಾಗ ಹತ್ತಿದ್ದನ್ನು ಮಾತ್ರ ಸಾವಿತ್ರಮ್ಮ ಸೂಕ್ಷ್ಮವಾಗಿ ಗಮನಿಸಿದಳು.

ಕನಸು

ಕೇಸಿಗಾಗಿ ಒಂದೆರಡು ಕಡೆ ಸಾಲಗಳನ್ನೂ ಮಾಡಿ ಕೊಂಡಿದ್ದರು. ನಿಂಗಣ್ಣ ತಮ್ಮ ಲಾಯರರ ಮಾತುಗಳಲ್ಲಿ ಆತ್ಮವಿಶ್ವಾಸ ಇರದಿರುವುದನ್ನು ಗಮನಿಸಿದ್ದ. ಶಿವಣ್ಣನೂ ಈ ಕೇಸು ಗೆಲ್ಲುತ್ತೆ ಎಂಬುದರ ಬಗ್ಗೆ ಅನುಮಾನ ಹೊಂದಿದ್ದ. ಆದರೆ ಹಣ ಮಾತ್ರ ಆ ಜಾಗದ ನಾಲ್ಕುಪಟ್ಟು ಕೊಳ್ಳುವಷ್ಟು ಖರ್ಚಾಗಿತ್ತು. ಆರಂಭದಲ್ಲಿ ಅವಶ್ಯಕತೆಗಾಗಿ ಹಾಕಿದ ಕೇಸು ಈಗ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಊರಿನಲ್ಲಿ ಮುಖ ಎತ್ತಿಕೊಂಡು ತಿರುಗಲು, ವಸಂತಪ್ಪನ ಸಮಾನವಾಗಿ ಬದುಕಲು ಈ ಕೇಸನ್ನು ಗೆಲ್ಲಲೇಬೇಕಾಗಿತ್ತು. ಇದು ಅವರ ಅಳಿವು ಉಳಿವಿನ ಪ್ರಶ್ನೆಯಾಗಿತ್ತು. ಊರಿನಲ್ಲಿ ಇವರ ಏಳಿಗೆಯನ್ನು ಮೊದಲೇ ಸಹಿಸದ ಕೆಲವರು ಹಂಗಿಸಲು ಪ್ರಾರಂಭಿಸಿದ್ದರು.

*　　*　　*

''ನಿಂಗಣ್ಣ, ಶಿವಣ್ಣ ನೀವು ಆ ಜಾಗದಾಸೆ ಬಿಟ್ಟುಬಿಡ್ರಿ'' ಎಂದು ಬಸಪ್ಪನವರು ಹೇಳಿದಾಗ ನಿಂಗಣ್ಣ ಶಿವಣ್ಣರಿಗೆ ನೆಲವೇ ಕುಸಿದಂತಾಯ್ತು. ಯಾವುದೋ ಕೆಲಸಕ್ಕೆ ಬೆಂಗಳೂರಿಗೆ ಹೋಗಿದ್ದ ಬಸಪ್ಪನವರು ಇವರ ಲಾಯರನ್ನು ಕಂಡುಬಂದಿದ್ದರು. ಸೋಮವಾರ ಹೊರ ಬೀಳಲಿರುವ ತೀರ್ಪಿನ ಸುಳಿವನ್ನು ನೀಡಿದ್ದರು. ಎಷ್ಟೇ ಪ್ರಯತ್ನಪಟ್ಟರೂ ವಸಂತಪ್ಪನವರ ಪರ ಕೇಸು ಗೆಲ್ಲುತ್ತೆ, ಸೋಮವಾರ ಅಧಿಕೃತವಾಗಿ ಹೊರಬೀಳುತ್ತೆ. ಲಾಯರ್ ತುಂಬಾ ಬೇಸರದಿಂದ ತಿಳಿಸಿದ ಸಂಗತಿಯನ್ನು ಅಣ್ಣ ತಮ್ಮರಿಗೆ ತಿಳಿಸಿದರು. ನಿನ್ನೆ ದಿನ ವಸಂತಪ್ಪನವರು ತಮ್ಮ ಮನೆಯಲ್ಲಿ ತುಂಬಾ ಗೆಲುವಿನಲ್ಲಿದ್ದದ್ದು ರಾತ್ರಿ ಅವನ ಚೇಲಾಗಳೊಂದಿಗೆ ಕೇಕೆ ಹಾಕಿ ಮಾತಾಡುತ್ತಿದ್ದುದು ಯಾಕೆಂದು ಈಗ ನಿಂಗಣ್ಣ ಶಿವಣ್ಣರಿಗೆ ತಿಳಿಯಿತು.

ವಸಂತಪ್ಪನವರಿಗೆ ನಿನ್ನೆ ಮಧ್ಯಾಹ್ನವೇ ಶಿಕಾರಿಪುರದ ಶಾಸಕ ಡಾಕಪ್ಪನವರು ಬೆಂಗಳೂರಿನಿಂದ ಫೋನ್ ಮಾಡಿ ವಿಷಯ ತಿಳಿಸಿದ್ದರು. ಹಾಗಾಗಿ ಸಂಜೆ ಹೊಳೆಯಾಚೆಯ ಹೊಲ ನೋಡಲು ಹೋಗುವಾಗ ಗೆಲುವಾಗಿದ್ದು ದೇವರಿಗೆ ಹೋಗುವ, ಮನೆ ಕಟ್ಟಿಸುವ ವಿಚಾರ ಮಾಡಿದ್ದು.

ಆವತ್ತು ಭಾನುವಾರ. ರಾತ್ರಿ ಏಳು ಗಂಟೆಗೆ ನಿಂಗಣ್ಣ ಶಿವಣ್ಣ ಇಬ್ಬರೇ ಹಕ್ಕೆ ಮನೆಯ ಒಂದು ಮೂಲೆಯಲ್ಲಿ ಕೂತಿದ್ದಾರೆ. ಸಾಮಾನ್ಯವಾಗಿ ತೀರಾ ಗುಪ್ತವಾಗಿ ಮಾತಾಡುವುದಿದ್ದರೆ ಮಾತ್ರ ಹಕ್ಕೆ ಮನೆಯಲ್ಲಿ ಸೇರುತ್ತಿದ್ದರು.

ಕೋರ್ಟಿನ ಕೇಸಿನ್ನ ಬಗ್ಗೆ ಇಬ್ಬರೂ ಆಸೆ ಬಿಟ್ಟಿದ್ದರು. ವಸಂತಪ್ಪನ ಬಗ್ಗೆ ಇಬ್ಬರಲ್ಲೂ ಸೇಡಿನ ಕಿಚ್ಚು ಹೊತ್ತಿ ಉರಿಯುತ್ತಿತ್ತು. ನಾಳೆ ತೀರ್ಪಿನ ಅನಂತರ ವಸಂತಪ್ಪನಿಗೆ ಮುಖ ತೋರಿಸುವುದಾದರೂ ಹೇಗೆ? ಇದಕ್ಕಿಂತ ಅವಮಾನ ಬೇರೊಂದಿದೆಯೇ?... ಇತ್ಯಾದಿ ಪ್ರಶ್ನೆಗಳು ಇಬ್ಬರನ್ನೂ ಕಾಡಿದವು.

ಸುಮಾರು ಒಂದು ತಾಸು ಇಬ್ಬರೂ ಸಮಾಲೋಚಿಸಿದರು. ಏನು ಮಾಡಬೇಕೆಂಬುದು ತಿಳಿಯಲಿಲ್ಲ. ನಿಂಗಣ್ಣನ ತಲೆಯಲ್ಲಿ ಬಂದ ಯೋಚನೆಗೆ ಶಿವಣ್ಣ ಥೂ ಎಂದು ಉಗಿದ.

''ಹೋಗಿ ಹೋಗಿ ಆ ಸೂಳೇಮಗನ ಕಾಲಿಗೆ ಬಿದ್ದು ಜಾಗ ಕೇಳೋದೂ ಒಂದೇ, ಹಿತ್ಲಾಗಿನ ಮರಕ್ಕೆ ನೇಣು ಹಾಕ್ಕೊಳ್ಳೋದೂ ಒಂದೇ'' ಎಂದು ತಳ್ಳಿಹಾಕಿದ. ಇದಕ್ಕೆ ಕೊನೆಗಾಣಿಸಲೇಬೇಕೆಂದು ಶಿವಣ್ಣ ಕಣ್ಣುಮುಚ್ಚಿದ. ಶಿವಣ್ಣ ಕಣ್ಣು ಮುಚ್ಚಿದನೆಂದರೆ ಏನೋ ಹೊಳೆದಿದೆ ಎಂದೇ ಅರ್ಥ. ಹಾಗಾಗಿ ನಿಂಗಣ್ಣ ಆಸೆಯಿಂದ ಅವನೆಡೆಗೆ ನೋಡಿದ.

''ನಿಂಗಣ್ಣ, ಈಗ ತಲೆಯಲ್ಲಿ ಸರಿಯಾಗಿ ಹೊಳೀತಾ ಇಲ್ಲ, ಹೊತ್ತು ಬೇರೆ ಆಗಿದೆ, ನಾಳೆ ಸಂಜೆ ಇಲ್ಲೇ ಸೇರೋಣ''ಎಂದು ಇಬ್ಬರೂ ಎದ್ದರು.

ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಹೊರಳಾಡಿದ ಶಿವಣ್ಣ ಒಂದು ನಿರ್ಧಾರಕ್ಕೆ ಬಂದ.

ಅಂದು ಸೋಮವಾರ ಸಂಜೆ. ತೀರ್ಪು ಹೊರ ಬೀಳುವ ಸಮಯ. ನಿಂಗಣ್ಣ ಶಿವಣ್ಣ ಇಬ್ಬರೂ ಹಕ್ಕೆ ಮನೆಯ ಮೂಲೆಯಲ್ಲಿ ಕೂತಿದ್ದಾರೆ. ಶಿವಣ್ಣನ ಮುಖದಲ್ಲಿ ಗೆಲುವೊಂದು ಕಾಣುತ್ತಿದೆ.

''ಏನಾದ್ರೂ ಹೊಳೀತೇನೋ ಶಿವಣ್ಣ'' ಎಂದು ನಿಂಗಣ್ಣ ಶಿವಣ್ಣನನ್ನು ಕೇಳಿದ.

ಬಿ. ಜಿ. ಚಿನ್ನೇಶ್ ಹೊನ್ನಾಳಿ
ಕನ್ನಡ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹಿರೇಕೆರೂರು - ೫೮೧೧೧೧, ಹಾವೇರಿ ಜಿಲ್ಲೆ

With best compliments to

# HOSATHU

KANNADA MONTHLY MAGAZINE



## VAIBHAV PAPER COMPANY

*Paper and Board Distributors*

E-92, 2nd Floor
Subbannachar Lane, Cottonpet Cross
Bangalore - 560 053

Mobile : 98440 61122



ಡಾ|| ಜಾನಕಿ ಸುಂದರೇಶ್

# ಪ್ಲಾಸ್ಟಿಕ್ ಹೂಗಳು

ಆಸ್ಪತ್ರೆಗೆ ತಡವಾಯಿತೆಂಬ ಆತಂಕದಿಂದ ವೇಗವಾಗಿ ಬರುತ್ತಿದ್ದ ಡಾ|| ರೇವತಿ ಪೊದೆಯ ಹಿಂದಿನಿಂದ ಕೇಳಿಬಂದ ಸಪ್ಪಳಕ್ಕೆ ಬೆಚ್ಚಿ ತಿರುಗಿ ನೋಡಿದಳು. ಪರಮ ನಿರ್ಲಿಪ್ತಿಯಿಂದ ಪೊದೆಯ ಚಿಗುರುಗಳನ್ನು ಮೇಯುತ್ತಿದ್ದ ಎರಡು ಆಡುಗಳನ್ನು ಹೊರತುಪಡಿಸಿದರೆ ಮತ್ಯಾವುದೇ ಜೀವಿಯೂ ಕಣ್ಣಿಗೆ ಬೀಳಲಿಲ್ಲ. ಅವುಗಳೇ ಶಬ್ದ ಮಾಡಿರಬೇಕೆಂದುಕೊಂಡು ತಿರುಗಿ ನಾಲ್ಕು ಹೆಜ್ಜೆ ಹಾಕುವುದರಲ್ಲಿ ಕೀರಲು ಸ್ವರವೊಂದು ಜೋರಾಗಿ ಅರಚಿತು. ''ನನ್ ಹೆಂಡ್ತಿ ಬಂದ್ಲೂ... ನನ್ ಹೆಂಡ್ತಿ ಬಂದ್ಲೂ...'' ಅದರ ಬೆನ್ನಿಗೇ ಎರಡು ದನಿಗಳು ಗಿಲಿಗಿಲಿ ನಕ್ಕವು.

ಹುಬ್ಬು ಗಂಟಿಕ್ಕಿ ತಿರುಗಿ ನೋಡಿದ ರೇವತಿಗೂ ನಗೆ ತಡೆಯಲಾಗಲಿಲ್ಲ. ಪೊದೆಯ ಹಿಂದೆ ಬಚ್ಚಿಟ್ಟುಕೊಂಡಿದ್ದ ಹತ್ತು ಹನ್ನೆರಡು ವರ್ಷದ ಹರಕು ಚಡ್ಡಿಯ ಹುಡುಗ, ಅದಕ್ಕಿಂತ ಜಾಸ್ತಿ ಹರಿದ ಲಂಗ ಧರಿಸಿದ್ದ ಕೆದರು ಕೂದಲಿನ ಸಣ್ಣ ಹುಡುಗಿ ಎರಡೂ ಎದ್ದು ಓಡುತ್ತಿದ್ದವು. ರೇವತಿಯ ಸ್ವಯಂಘೋಷಿತ ಗಂಡ ಮತ್ತು ನಾದಿನಿ!

ಊರ ಹೊರಗಿನ ಬಯಲಿನಲ್ಲಿ ಡೇರೆ ಹಾಕಿದ್ದ ಹಕ್ಕಿ ಪಿಕ್ಕಿಗಳ ಮಕ್ಕಳು ಅವು. ಪ್ರತಿದಿನ ಮನೆಯಿಂದ ಆಸ್ಪತ್ರೆಗೆ ನಡೆದೇಬರುತ್ತಿದ್ದ ರೇವತಿ ಆ ಜನರನ್ನು ಕುತೂಹಲದಿಂದ ಗಮನಿಸುತ್ತಿದ್ದಳು. ಪ್ಲಾಸ್ಟಿಕ್ ಗೋಣಿಗಳನ್ನು ಹೊಲಿದು ಮಾಡಿದ ಸಣ್ಣ ಸಣ್ಣ ಗುಡಾರಗಳೊಳಗೆ ಅವರ ವಾಸ. ಬಣ್ಣ ಬಣ್ಣದ ಪ್ಲಾಸ್ಟಿಕ್ ಹೂಗಳು, ಪ್ಲಾಸ್ಟರ್ ಆಫ್ ಪ್ಯಾರೀಸ್‌ನ ಮೂರ್ತಿಗಳು, ಹೂಜಿಗಳನ್ನು ತಯಾರಿಸಿ ಮಾರುವುದು ಅವರ ಕಸುಬಾದರೆ ಅವರ ಮಕ್ಕಳು ನೆಪ ಮಾತ್ರಕ್ಕೆ ಆಡುಗಳನ್ನು ಮೇಯಿಸುತ್ತಾ ಅವರಿವರ ತೋಟದ ಎಳನೀರು ಸೀಬೆಕಾಯಿಗಳನ್ನು ಯಥಾಶಕ್ತಿ ಕದ್ದು ತಿನ್ನುತ್ತಿದ್ದವು. ಏಳೆಂಟು ಟೆಂಟ್‌ಗಳಲ್ಲಿ ವಾಸವಾಗಿದ್ದ ಇಪ್ಪತ್ತೈದು ಮೂವತ್ತು ಜನರ ಗುಂಪು ಒಂದು ತಿಂಗಳಾಗುವಷ್ಟರಲ್ಲಿ ಇಡೀ ಬಯಲನ್ನು ಹೊಲಸೆಬ್ಬಿಸಿದ್ದರಿಂದ ಅದನ್ನು ದಾಟಿ ಬರುವಾಗೆಲ್ಲ ರೇವತಿಯ ನಾಸಿಕವು ನರಕದ ಬಾಗಿಲಿಗೆ ಹೋಗಿಬರುತ್ತಿತ್ತು. ಅವಳ ಅರಿವಿಗೆ ಬರದಂತೆಯೇ ಕಾಲುಗಳ ವೇಗ ಹೆಚ್ಚುತ್ತಿತ್ತು.

ಆಸ್ಪತ್ರೆಯಲ್ಲಿ ರೋಗಿಗಳ ಹಾಜರಾತಿ ಎಂದಿಗಿಂತ ಕಡಿಮೆ ಇತ್ತು. ಹನ್ನೊಂದು ಗಂಟೆಯ ಹೊತ್ತಿಗೆ ಬಂದಿದ್ದವರನ್ನೆಲ್ಲ ನೋಡಿ ಕಳಿಸಿದ ರೇವತಿ ಅಟೆಂಡರ್‌ನನ್ನು ಕರೆದಳು. ''ದುರ್ಗಪ್ಪಾ, ಒಂದು ಸ್ಪೆಷಲ್ ಟೀ ತಗೊಂಬಾ. ಸಕ್ಕರೆ ಕಡಿಮೆ ಇರಲಿ.'' ಅವಳ... ಸೂಚನೆಗೆ ಕಾಯುತ್ತಿದ್ದವನಂತೆ ಕ್ಷಣ ಮಾತ್ರದಲ್ಲಿ ಥರ್ಮಾಸ್ ಫ್ಲಾಸ್ಕಿನೊಂದಿಗೆ ಕಣ್ಮರೆಯಾದ ದುರ್ಗಪ್ಪ ಹೋಗಿ ಅರ್ಧ ಗಂಟೆ ಕಳೆದರೂ ವಾಪಸು ಬರಲಿಲ್ಲ. ರೇವತಿಗೆ ಚಹಾ ಕುಡಿಯಬೇಕೆನ್ನುವ ಅಪೇಕ್ಷೆಯೇ ಬತ್ತಿಹೋಗುವಷ್ಟರಲ್ಲಿ ಬಹಳ ಹುಮ್ಮಸ್ಸಿನಿಂದ ಫ್ಲಾಸ್ಕ್ ಬೀಸುತ್ತಾ ಬಂದವನು ಮುಖದ ತುಂಬಾ ಸಂಭ್ರಮ ತುಳುಕಿಸುತ್ತಾ ಚಹಾ ಬಟ್ಟಲನ್ನು ಅವಳ ಮುಂದೆ ತಂದಿಟ್ಟ.

''ಯಾಕೋ? ಇಷ್ಟು ಲೇಟು? ಚಹಾ ತಗೊಂಬಾ ಅಂದರೆ ಪಟ್ಟಾಂಗ ಹೊಡೀತಾ ಕೂತಿದ್ದಿಯಾ?''

ರೇವತಿ ಗದರಿಸಿದ್ದು ಅವನ ಕಿವಿಗೆ ಬಿದ್ದಂತೆ ಕಾಣಿಸಲಿಲ್ಲ. ತುಸುಹೊತ್ತು ಆಚೆ ಈಚೆ ನೋಡುತ್ತಾ ಮಿಡುಕಾಡಿದವನು ಕೊನೆಗೊಂದು ಸಲ ''ಹಾಗಾದರೆ ನಿಮಗೆ ವಿಷಯ ಗೊತ್ತಿಲ್ಲ ಅಂತ ಕಾಣುತ್ತೆ'' ಎಂದ ಬಲು ನಿಗೂಢವಾಗಿ.

''ಯಾವ ವಿಷಯ?''

''ಅದೇ... ಅವಳು... ಆ ಹೆಂಗಸು ರಾತ್ರಿ ಬಂದವಳು... ಅವಳ ವಿಷಯ...''

''ರಾತ್ರಿ ಬಂದವಳ ವಿಷಯಾನೂ ಗೊತ್ತಿಲ್ಲ. ಹಗಲು ಬಂದವಳದೂ ಗೊತ್ತಿಲ್ಲ. ಎಲ್ಲಾ ಗೊತ್ತಿರೋವ್ನು ನೀನೇ ಹೇಳು ಮಾರಾಯಾ.'' ಆರಿ ತಣ್ಣಗಾಗಿದ್ದ ಚಹಾವನ್ನು ಕುಡಿಯಲಾರದೆ ಕುಡಿಯುತ್ತಾ ತುಸು ಬೇಸರದಿಂದ ಹೇಳಿದಳು ''ದುರ್ಗಪ್ಪನಿಗೆ ಊರಿನ ಪುರಾಣವೆಲ್ಲ ಬೇಕು!'' ರೇವತಿಯ ವ್ಯಂಗ್ಯವನ್ನು ಗಣನೆಗೆ ತಂದುಕೊಳ್ಳದೆ ದುರ್ಗಪ್ಪ ಬಹಳ ಸಂಭ್ರಮದಿಂದ ವರದಿ ಮಾಡಿದ.

''ನಿನ್ನೆ ರಾತ್ರಿ ಒಬ್ಬಳು ಹೆಂಗಸು ಬಂದಿದ್ದಾಳೆ. ಅವಳು ಯಾರು ಅಂತ ಯಾರಿಗೂ ಗೊತ್ತಿಲ್ಲ. ರಾತ್ರಿ ಎರಡು ಗಂಟೆಯ ಹೊತ್ತಿಗೆ ಕಾಮತರ ಅಂಗಡಿ ಬಾಗ್ಲಲ್ಲಿ ಕೂತ್ಕೊಂಡು ಅಳ್ತಾ ಇದ್ದಳಂತೆ ಪಾಪ...''

ಅಷ್ಟು ಹೇಳಿದವನು ಚಹಾ ಬಟ್ಟಲನ್ನು ಎತ್ತಿಕೊಂಡು ಒಳಗೆ ಹೋದ. ಪತ್ತೆದಾರಿ ಧಾರಾವಾಹಿಯ ಕಂತುಗಳನ್ನು ಕುತೂಹಲಕಾರೀ ಘಟ್ಟದಲ್ಲಿ ನಿಲ್ಲಿಸಿ 'ಸಶೇಷ' ಹಾಕುವ ಪತ್ರಿಕೆಗಳ ಜಾತಿಗೆ ಸೇರಿದವನು ದುರ್ಗಪ್ಪ. ಕೇಳುಗರು ಆಮೇಲೆನಾಯ್ತು? ಆಮೇಲೇನಾಯ್ತು? ಎಂದು ಕೆದಕಿ ಕೇಳಿದರೆ ಅವನಿಗೆ ಮಹದಾನಂದ. ಕೆದಕಿ ಕೇಳದಿದ್ದರೆ ಬಾಯಿ ತುರಿಕೆ ತಡೆದುಕೊಳ್ಳಲಾಗದೆ ತಾನಾಗೇ ಬಂದು ಹೇಳುತ್ತಾನೆಂದು ಗೊತ್ತಿದ್ದ ರೇವತಿ ಸುಮ್ಮನೆ ಕೂತಳು. ಅವಳು ಲೆಕ್ಕ ಹಾಕಿದ ಹಾಗೆ ಐದು ನಿಮಿಷಗಳ ನಂತರ ಮತ್ತೆ ಬಂದು ನಿಂತು ದುರ್ಗಪ್ಪ ಹಲ್ಲು ಕಿಸಿಯುತ್ತಾ ಧಾರಾವಾಹಿಯ ಮುಂದಿನ ಕಂತನ್ನು ಪ್ರಸಾರ ಮಾಡಿದ.

''ರಾತ್ರಿ ಯಾಕೋ ನಾಯಿಗಳು ಬೊಗಳ್ತಾ

ಇದಾವಲ್ಲ, ಕಳ್ಳರುಗಿಳ್ಳರು ಬಂದಿದಾರೋ ಏನೋ ಅಂತ ಕಾಮತರು ಲೈಟು ಹಾಕಿ ನೋಡಿದರೆ ಈ ಹೆಂಗಸು ಕೂತಿದ್ದಳಂತೆ. ಹಂಗೇ ಇದ್ದಳಂತೆ... ಹಂಗೇ ಅಂದ್ರೆ... ಅದೇ... ಅದೇ... ಹಿಹ್ಹೀ ಹಿಹ್ಹೀ... ಬಟ್ಟೆಗಿಟ್ಟೆ ಏನೂ ಇರ್‍ಲಿಲ್ವಂತೆ. ಕಾಮತರು ಮುದುಕರು ಇಹ್ಹಿಹೀ... ಅವಳ್ನ ನೋಡಿ ಹೆದರಿ ಒಳಗೋಡಿಬಿಟ್ರಂತೆ... ಇಹಿಹ್ಹೀ... ಅವರ ಹೆಂಡತಿ ಕೊನೆಗೆ ಸೀರೆಗೀರೆ ಎಲ್ಲಾ ಕೊಟ್ರಂತೆ... ಹಿಹ್ಹೀ...ಹೀ...''

''ಅದರಲ್ಲಿ ಅಷ್ಟೊಂದು ನಗೋಕೇನಿದೆ? ತಲೆ ಕೂದಲೆಲ್ಲ ಬೆಳ್ಳಗಾದ್ರೂ ನಿಂಗೆ ಬುದ್ಧಿ ಮಾತ್ರ ಬರ್‍ಲಿಲ್ಲವಲ್ಲ. ಪಾಪ. ಅವಳು ಯಾರೋ ಏನೋ...''

ದುರ್ಗಪ್ಪ ಬಹಳ ಕಷ್ಟದಿಂದ ಗಾಂಭೀರ್ಯ ನಟಿಸಿದ.

''ಅವಳು ಯಾರು ಅಂತ ಗೊತ್ತಿಲ್ಲ ಕಣ್ರಮ್ಮ. ಮುಖ ನೋಡಿದ್ರೆ ಈ ಕಡೆಯವಳ ಹಾಗೆ ಕಾಣಲ್ಲ...''

''ಏನಂತೆ ಅವಳ ಹೆಸರು? ಎಲ್ಲಿಂದ ಬಂದವಳಂತೆ?''

''ಯಾರಿಗ್ಗೊತ್ತು? ಅವಳಿಗೆ ಬಾಯಿಬರಲ್ಲ. ಮೂಕಿ!''

''ಅಯ್ಯೋ... ಪಾಪವೇ!!'' ರೇವತಿಯ ಸ್ವರದಲ್ಲಿದ್ದ ಅನುಕಂಪವನ್ನು ಗ್ರಹಿಸಿ ದುರ್ಗಪ್ಪ ಗಂಭೀರನಾದ.

''ಅವಳು ಎಲ್ಲಿದ್ದಾಳೆ ಈಗ?'' ರೇವತಿ ಮತ್ತೆ ಕೇಳಿದಳು.

''ಅಲ್ಲೇ ಇದ್ದಾಳೆ ಕಣ್ರಮ್ಮಾ, ಕಾಮತರ ಅಂಗಡಿ ಕಟ್ಟೆಮೇಲೇ ಕುಂತ್ಕಂಡಿದ್ದಾಳೆ. ಅವಳ ಮುಖ ನೋಡಿದ್ರ ರಾವು ಬಡಿದವಳಂಗೆ ಇದಾಳೆ. ಒಳ್ಳೇ ಕಟ್ಟುಮಸ್ತು ಹೆಂಗಸು. ಕಪ್ಪಗಿದ್ರೂ ಒಂಥರಾ ಲಕ್ಷಣವಾಗಿದಾಳೆ'' ಅವನು ಒಳಗೊಳಗೇ ಚಪ್ಪರಿಸುತ್ತಿರುವಂತೆನಿಸಿ ರೇವತಿಗೆ ಅಸಮಾಧಾನವಾಯ್ತು. ಮಾತುಕತೆ ಇಲ್ಲಿಗೇ ಮುಗಿಯಿತೆನ್ನುವಂತೆ ವೃತ್ತಪತ್ರಿಕೆ ಬಿಡಿಸಿ ಮುಖಕ್ಕೆ ಹಿಡಿದುಕೊಂಡಳು. ದುರ್ಗಪ್ಪ ಒಳಗೆ ಹೊರಟುಹೋದ.

ಹಾಗೆ ಅಷ್ಟೊಂದು ಹೀನಾಯ ಪರಿಸ್ಥಿತಿಯಲ್ಲಿ ಕಾರಿರುಳ ನಡುವೆ ಊರಿನ ಪೇಟೆಯಲ್ಲಿ ಪ್ರತ್ಯಕ್ಷವಾದ ಆ ಹೆಂಗಸು ಯಾರಿರಬಹುದು ಎಲ್ಲಿಂದ ಬಂದಿರಬಹುದು ಯಾಕೆ ಬಂದಿರಬಹುದು ಮುಂತಾಗಿ ಊರಿನ ತುಂಬಾ ಹರಡಿದ. ಊಹಾಪೋಹಗಳು ಆವತ್ತು ಇಡೀ ದಿನ ರೇವತಿಯ ಮನಸ್ಸಿನಲ್ಲೂ ಅನುರಣಿಸುತ್ತಿದ್ದವು. ಎಲ್ಲಿಂದ ಬಂದಳೆನ್ನುವುದು ಮಾತ್ರವಲ್ಲ, ಮುಂದೆ ಏನು ಮಾಡುತ್ತಾಳೆ ಎನ್ನುವುದೂ ಕುತೂಹಲದ ವಿಷಯವೇ ಆಗಿತ್ತು.

ಮರುದಿನ ದುರ್ಗಪ್ಪನೇ ಧಾರಾವಾಹಿಯ ಮುಂದಿನ ಕಂತನ್ನು ಬಿತ್ತರಿಸಿದ. ಗೋವಿಂದ ಭಟ್ಟರು, ದಿನೇಶ ಶೆಟ್ಟಿ, ಮಸ್ಕರೇನಸ್ ಮುಂತಾಗಿ ಮೂರ್‍ನಾಲ್ಕು ಜನ ಅವಳನ್ನು ತಮ್ಮ ಮನೆಕೆಲಸಕ್ಕೆ ಇಟ್ಟುಕೊಳ್ಳುತ್ತೇವೆಂದು ಮುಂದೆ ಬಂದವರು ಕೊನೆಗೆ ಅವಳು ಯಾವ ಡಕಾಯಿತರ ಗುಂಪಿಗೆ ಸೇರಿದವಳೋ ಎಂದು ಹಿಂಜರಿದರಂತೆ. ಕೊನೆಗೆ ಕಾಮತರ ಹೆಂಡತಿ ಕೊಟ್ಟ ತಂಗಳನ್ನವನ್ನು ಗಬಗಬ ನುಂಗುತ್ತಾ ಕಣ್ಣೀರಿಡುತ್ತ ಕೂತಿದ್ದ ಹೆಂಗಸನ್ನು ನೋಡಿದ ಹಕ್ಕಿಪಿಕ್ಕಿಗಳ ಗದಿಗೆಪ್ಪ ಅವಳನ್ನು ತನ್ನ ಜೊತೆಗೆ ಕರೆದೊಯ್ದನಂತೆ.

ರೇವತಿಗೆ ಗದಿಗೆಪ್ಪನದು ಅಲ್ಪಸ್ವಲ್ಪ ಪರಿಚಯವಿತ್ತು. ಅವನು ಆ ಅಲೆಮಾರಿಗಳ ಗುಂಪಿಗೆ ನಾಯಕನಿರಬೇಕೆಂದು ತರ್ಕಿಸಿದ್ದಳು. ಏಕೆಂದರೆ ಆ ಗುಂಪಿನಲ್ಲಿ ಕಾಯಿಲೆ ಬಿದ್ದವರನ್ನು ಅವಳ ಹತ್ತಿರ ಪ್ರತಿಸಲವೂ ಗದಿಗೆಪ್ಪನೇ ಕರೆದುಕೊಂಡು ಬರುತ್ತಿದ್ದುದು. ಒಂದು ಸಲ ರೇವತಿಯ ಮನೆ ಹಿಂದೆ ಗಾಳಿಗೆ ಮುರಿದುಬಿದ್ದಿದ್ದ ಮರದ ಗೆಲ್ಲನ್ನು ಕಡಿದುಕೊಡುವುದಕ್ಕೆ ಇಬ್ಬರು ಹುಡುಗರನ್ನು ಅವನು ಕಳಿಸಿಕೊಟ್ಟಿದ್ದ. ಏನಾದರಾಗಲಿ, ಅನಾಥ ಹೆಂಗಸೊಬ್ಬಳಿಗೆ ಆಶ್ರಯ ಕೊಡುವಷ್ಟು ಕನಿಕರ ಆ ಅಲೆಮಾರಿಗಾದರೂ ಇದೆಯಲ್ಲ ಎನಿಸಿತು. ಸಂಜೆ ನಾಲ್ಕು ಗಂಟೆಯ ವೇಳೆಗೆ ಅದೇ ಗದಿಗೆಪ್ಪ ಆಸ್ಪತ್ರೆಯಲ್ಲಿ ಹಾಜರಾದ. ಅವನ ಜೊತೆಗೆ ಶೋಕವೇ ಮೈವೆತ್ತು ಬಂದಂತೆ ಕಣ್ಣೀರಧಾರೆ ಹರಿಸುತ್ತಿದ್ದ ಚಿಂದಿ ಬಟ್ಟೆ ಧರಿಸಿದ್ದ ಕೊಳಕು ವಾಸನೆಯ ಹುಡುಗ. ಹುಡುಗನನ್ನು ಅಡಿಯಿಂದ ಮುಡಿಯತನಕ ಕೆರೆದರೆ ಒಂದು ಮಡಿಕೆ ಮಾಡುವಷ್ಟು ಮಣ್ಣು ಸಿಗುವಂತೆ ಕಾಣಿಸುತ್ತಿತ್ತು. ಅವನ ಕಾಲಿಗೆ ಸುತ್ತಿದ್ದ ಸೀರೆಯ ತುಂಡು ರಕ್ತದಿಂದ ಕೆಂಪಾಗಿತ್ತು.

''ಡಾಕ್ಟ್ರಮ್ಮಾ, ಇವನು ಗಾಜು ತುಳದಾನ್ರೀ, ಅಂಗಾಲು ಇಷ್ಟುದ್ದ ಸೀಳಿ ಹೋಗ್ಯದೆ, ಹಡಬೆಗುಟ್ಟಿದ್ದು. ಮುಳ್ಳು ಬೇಲಿ ಹತ್ರ ಇದಕ್ಕೇಂತಾ ಕೆಲ್ಸ ಇತ್ತೋ. ಎರಡು ಇಂಜೆಸನ್ ಕೊಟ್ಟುಬಿಡಿ ಸರಿಯಾಗೋಕೆ.'' ಹುಡುಗನ ತಲೆ ಮೇಲೆ ಗದಿಗೆಪ್ಪ ತುಸು ಜೋರಾಗಿಯೇ ಒಂದೇಟು ಹಾಕಿದ. ಗಾಯದ ನೋವಿಗಿಂತ ಹೆಚ್ಚಾಗಿ ಡಾಕ್ಟರ ಸೂಜಿಗೆ ಹೆದರುತ್ತಿದ್ದ ಹುಡುಗ ಮತ್ತೆ ಹೊಸದಾಗಿ ರಾಗಮಾಲಿಕೆ ಶುರು ಮಾಡಿತು. ಅವನ ಮುಖ ನೋಡಿದ ರೇವತಿ ಜೋರಾಗಿ ನಕ್ಕಳು.

''ಯಾಕೋ ಅಳ್ತೀಯಾ? ಹೆಂಡತೀನ ನೋಡಿದರೆ ಹೆದರಿ ಅಳೋ ಗಂಡನ್ನ ಇವತ್ತೇ ನೋಡು ನಾನು ನೋಡಿದ್ದು.''

ಹುಡುಗನ ದನಿ ದಿಢೀರೆಂದು ನಿಂತುಹೋದರೆ, ಗದಿಗೆಪ್ಪ ಅವಳನ್ನು ಮಿಕಿಮಿಕಿ ನೋಡಿದ. ರೇವತಿ ನಗುತ್ತಾ ಹಿಂದಿನ ದಿನದ ಘಟನೆ ಹೇಳುತ್ತಿದ್ದಂತೆ ಗದಿಗೆಪ್ಪನ ಕಡೆಯಿಂದ ಹುಡುಗನಿಗೆ ಮತ್ತೆರಡು ಬಹುಮಾನ ಸಿಕ್ಕಿತು.

ಕೊಸರುತ್ತಿದ್ದ ಹುಡುಗನನ್ನು ಗದಿಗೆಪ್ಪ ಇನ್ನಷ್ಟು ಆಶೀರ್ವಚನಗಳೊಂದಿಗೆ ಟೇಬಲ್ ಮೇಲೆ ಅದುಮಿ ಹಿಡಿದ. ಗಾಯಕ್ಕೆ ಹೊಲಿಗೆ ಹಾಕತೊಡಗಿದ ರೇವತಿಗೆ ದುರ್ಗಪ್ಪ ಹೇಳಿದ:

''ಗಾಯ ಹೊಲಿದಾದ ಮೇಲೆ ಒಂದು ದಬ್ಬಣ ತರ್‍ತೀನಿ ಕಣ್ರಮ್ಮಾ, ಇವನ ಎರಡೂ ಕಾಲನ್ನೂ ಸೇರಿಸಿ ಹೊಲಿದು ಬಿಡಿ. ಇನ್ಯಾವತ್ತೂ ಮರ ಹತ್ತಕಾಗದಂತೆ. ಮೊನ್ನೆ ಗೌಡ್ರ ಮನೆ ತೆಂಗಿನಮರ ಹತ್ತಿ ಎಳನೀರು ಕೀಳ್ತಿದ್ದ ಇವನು.'' ಗದಿಗೆಪ್ಪ ''ಹೌದೇನ್ಲಾ'' ಎಂದು ಇನ್ನೊಂದು ಸುತ್ತು ಆಶೀರ್ವಚನಕ್ಕೆ ತಯಾರಾದರೆ ಹುಡುಗ ''ನಾನಲ್ಲ ಕಣಪ್ಪೋ, ನಾನಲ್ಲ ಕಣಪ್ಪೋ'' ಎಂದು ಕುಂಯ್ಗುಡತೊಡಗಿದ.

''ನೀನಲ್ಲದಿದ್ರೆ ಇನ್ಯಾರು ನಿಮ್ಮಪ್ಪನಾ? ತಾಯಿ ಸತ್ ಮಗ ಅಂತ ಇವ್ನಿಗೆ ಸಲ್ಗೆ ಕೊಟ್ಟಿದ್ದು ಎಚ್ಚಾತು. ಇನ್ನೊಂದಪ ಕದ್ದುಗಿದ್ದು ಮಾಡಲಿ, ಇವ್ನ ಚಮ್ಡ ಸುಲ್ದಾಕದಿದ್ರೆ ನಾ ಇವ್ನ ಅಪ್ಪನೇ ಅಲ್ಲ!''

ಗದಿಗೆಪ್ಪನ ಆವೇಶವು ನಾಟಕೀಯವೆನ್ನಿಸಿ ರೇವತಿ ನಕ್ಕಳು.

''ಸಲಿಗೆ ಕೊಟ್ಟಾಕ್ಷಣ ಮಕ್ಕಳೇನೂ ಹಾಳಾಗೊಲ್ಲ ಗದಿಗೆಪ್ಪ, ಮಕ್ಕಳಿಗೆ ಸಲಿಗೇನೂ ಕೊಡಬೇಕು, ಶಿಸ್ತೂ ಇರಬೇಕು. ಅದುಬಿಟ್ಟು ಹೊಡೆದೂ ಬಡಿದೂ ಮಾಡಿದರೆ ಮಕ್ಕಳು ಮೊಂಡು ಬೀಳ್ತಾವೆ. ಏನಿದ್ರೂ ಒಳ್ಳೇ ಮಾತಿನಲ್ಲೇ ಕಲಿಸ್ಬೇಕು.''

''ಅಯ್ಯೋ, ಬುಟ್ಬುಡಿ ಡಾಕ್ಟ್ರಮ್ಮ, ಅವೆಲ್ಲ ಒಳ್ಳೇಗಿಳ್ಳೇ ಮಾತು ನಿಮ್ಮಂಥೋರ ಮಕ್ಕಳಿಗೇ ಸರಿ. ನಮ್ಮವುಕ್ಕೆ ಅದೆಲ್ಲ ಅರ್ಥವಾಗಾಕಿಲ್ಲ. ಕೋಲು ತಗಂಡು ನಾಕು ಜಡಿದ್ರೇ ಸರಿ ಇವುಕ್ಕೆ! ಕೊಂಕಣದೆಮ್ಮೆಗೆ ಕೊಡತಿ ಪೆಟ್ಟು'' ಎಂದ.

''ನಮ್ಮದಾದರೂ ಅಷ್ಟೇ ನಿಮ್ಮದಾದರೂ ಅಷ್ಟೇ. ಮಕ್ಕಳು ಮಕ್ಕಳೇನೇ'' ಎನ್ನುತ್ತಾ ಬ್ಯಾಂಡೇಜ್ ಸುತ್ತಿ ಮಲಗಿಸಿ ಹುಡುಗನಿಗೆ ಇಂಜೆಕ್ಷನ್ ಚುಚ್ಚಿದಳು. ಅವನು ನಭೋಮಂಡಲದಲ್ಲಿ ಮೊಳಗುವಂತೆ 'ಯಪ್ಪೋ ನಾ ಸತ್ತೇ...' ಎಂದು ಅರಚಿದವನು ಚಪಾತಿ ಮೇಲೆ ಉರುಳಾಡುವ ಲಟ್ಟಣಿಗೆಯಂತೆ ಅತ್ತಿಂದಿತ್ತ ಇತ್ತಿಂದತ್ತ ಹೊರಳಾಡಿದ. ಹೊರಳಾಟದ ರಭಸಕ್ಕೆ ಅವನ ಜೇಬಿನಲ್ಲಿದ್ದ ಎರಡು ಗೋಲಿಗಳು ಹೆದರಿ ಠಣ್ಣೆಂದು ನೆಲಕ್ಕೆ ಹಾರಿ ಟರಟರಟರ ಸದ್ದಿನೊಂದಿಗೆ ಮೂಲೆ ಸೇರಿ ಅವಿತುಕೊಂಡವು.

ಎರಡು ದಿನಗಳ ನಂತರ ಇನ್ನೊಂದು ''ಇದೀಗ ತಾನೇ ಬಂದ ಸುದ್ದಿ'' ಬಿತ್ತರ ಮಾಡಿದ ದುರ್ಗಪ್ಪ.

''ಮೊನ್ನೆ ಚಿನ್ನದಂಗಡಿ ದರೋಡೆ ಆಯ್ತಲ್ಲ, ಅವರನ್ನ ಪೊಲೀಸ್ನವ್ರು ಹಿಡಿದಿದಾರಂತೆ. ಆ ಗ್ಯಾಂಗಿನಲ್ಲಿ ಇಬ್ಬರು ಹಕ್ಕಿಪಿಕ್ಕಿಗಳು ಇದ್ದರಂತೆ. ಪೊಲೀಸ್ನವ್ರು ಬಂದು ಈಗಷ್ಟೇ ಅವರ ಟೆಂಟುಗಳನ್ನೆಲ್ಲ ಹುಡುಕಿಹೋದರು.''

ರೇವತಿ ಸುಮ್ಮನೆ ದುರ್ಗಪ್ಪನನ್ನೇ ಮಿಕಿಮಿಕಿ ನೋಡಿದಳು. ಯಾವುದೇ ಒಂದು ಭಾವನಾತ್ಮಕ ನೆಲೆಯಲ್ಲಿ ಹಕ್ಕಿಪಿಕ್ಕಿಗಳ ಬಗ್ಗೆ ಸಹಾನುಭೂತಿ ಇಟ್ಟುಕೊಂಡಿದ್ದಕ್ಕೇ ಇರಬಹುದು ವಿಶ್ವಾಸದ್ರೋಹಕ್ಕೆ ಈಡಾದ ಕಸಿವಿಸಿ ಅವಳಲ್ಲಿ ಮೂಡಿತು.

ಅವಳ ಮೌನದಿಂದ ಉತ್ತೇಜಿತನಾಗಿ ದುರ್ಗಪ್ಪ ಉಚಿತ ಉಪದೇಶ ನೀಡಿದ.

''ನೀವು ಅವುಗಳನ್ನು ಮನೆಹತ್ರ ಸೇರಿಸ್ಕೋಬೇಡಿ ಅಮ್ಮಾವ್ರೇ, ಅವರೆಲ್ಲ ಯಾವುದಕ್ಕೂ ಹೇಸದ ಜನಗಳು. ಯಾವುದಕ್ಕೂ ನಮ್ಮ ಹುಷಾರೀಲಿ ನಾವು ಇರಬೇಕು.''

''ನಾನೆಲ್ಲಿ ಅವರನ್ನ ಮನೆಗೆ ಸೇರಿಸ್ಕೊಂಡಿದೀನಿ ಮಹಾರಾಯಾ'' ಎಂದು ಗದರಿಸಿ ಹೊರಟವಳು, ಅವರು ಮರದ ಗೆಲ್ಲು ಕಡಿದುಕೊಟ್ಟದ್ದು ನೆನಪಾಗಿ ಸುಮ್ಮನಾದಳು. ಆದರೂ ಕಿರಿಕಿರಿ ತಡೆದುಕೊಳ್ಳಲಾರದೆ ''ಸಿಕ್ಕಿದ್ದೇ ಚಾನ್ಸು ಅಂತ ಉಪದೇಶ ಕೊರೀಬೇಡ. ಹೊರಗೆ ಯಾರೋ ಬಂದ ಹಾಗಾಯ್ತು, ಹೋಗಿ ನೋಡು'' ಎಂದು ಗದರಿದಳು. ನಿರ್ಲಜ್ಜೆಯಿಂದ ಹಲ್ಕಿರಿಯುತ್ತಾ ಹೋದ ದುರ್ಗಪ್ಪ ಧಡಧಡ ಒಳಗೋಡಿಬಂದ.

''ಅವಳೇ, ಅವಳೇ ಡಾಕ್ಟ್ರೇ, ಮೊನ್ನೆ ರಾತ್ರಿ ಬಂದವ್ಳು. ಗದಿಗೆಪ್ಪ ಕರ್ಕೊಂಡು ಬಂದಿದಾನೆ'' ನಿಂತಲ್ಲೇ ತಕತಕ ಕುಣಿದ.

ಬಂದವಳು ಮೂವತ್ತು, ಮೂವತ್ತೈದರ ಪ್ರಾಯದ ಸಾಧಾರಣ ರೂಪದ ಹೆಂಗಸು. ಜ್ವರದಿಂದ ನರಳುತ್ತಿದ್ದುದಕ್ಕೋ ಇಲ್ಲಾ ಮನಸ್ಸಿನ ನೋವಿಗೋ, ಅವಳ ಮುಖ ಮ್ಲಾನವಾಗಿತ್ತು.

ಅವಳಿಗೆ ಪರೀಕ್ಷಾ ಕೊಠಡಿಯ ಒಳಗೆ ಹೋಗುವಂತೆ ಸೂಚಿಸಿದ ರೇವತಿ ತಾನೂ ಒಳಹೋಗಬೇಕೆನ್ನುವಷ್ಟರಲ್ಲಿ ಗದಿಗೆಪ್ಪ ಅವಳನ್ನು ತಡೆದ, ಸಂಕೋಚಪಟ್ಟುಕೊಳ್ಳುತ್ತ

ಇಳಿದನಿಯಲ್ಲಿ ''ಅಮ್ಮೋರೇ, ನಾನು ಅವುಳ್ನ ಮದ್ವೆ ಮಾಡ್ಕ ಬೇಕಂತ ಇದೀನಿ. ಅವಳಿಗೇನಾರ ರೋಗಗೀಗ ಉಂಟಾ ಅಂತ ಸ್ವಲ್ಪ ಎಲ್ಲಾ... ಎಲ್ಲಾ ಪರೀಕ್ಷೇನೂ ಮಾಡ್ಬುಡಿ... ಯಾವ್ದುಕ್ಕೂನೂ...'' ಎಂದು ರಾಗ ಎಳೆದ.

''ಆಯ್ತಾಯ್ತು. ರಕ್ತ ಪರೀಕ್ಷೆಗೂ ಕಳಿಸ್ತೀನಿ. ಅದರ ರಿಸಲ್ಟ್ ಬಂದ ಮೇಲೇನೇ ಮದುವೆ ಮಾಡ್ಕೋ.''

ಜ್ವರದಿಂದ ನರಳುತ್ತಿದ್ದ ಹೆಂಗಸನ್ನು ಪರೀಕ್ಷೆ ಮಾಡುತ್ತಿದ್ದಂತೆ ಕೆಲವು ಆಘಾತಕಾರೀ ಸಂಗತಿಗಳು ಹೊರಬಿದ್ದವು. ಆಕೆಯ ಮೈತುಂಬಾ ಪರಚುಗಾಯಗಳು. ಅಲ್ಲಲ್ಲಿ ಸಣ್ಣ ಸಣ್ಣ ಸುಟ್ಟ ಗಾಯಗಳು. ಕೆಲವು ಗಾಯಗಳಲ್ಲಿ ಕೀವಾಗಿ ನಂಜು ಶರೀರವನ್ನು ವ್ಯಾಪಿಸಿ ಜ್ವರ ಏರಿತ್ತು. ಕ್ರೂರವಾಗಿ ಅತ್ಯಾಚಾರಕ್ಕೀಡಾಗಿದ್ದ ಆ ಹೆಂಗಸು ಇನ್ನೂ ಅದರ ಆಘಾತದಿಂದ ಹೊರಬಂದಿರಲಿಲ್ಲ ಮತ್ತು ದುರ್ಗಪ್ಪ ವರದಿ ಮಾಡಿದ್ದಂತೆ ಆಕೆ ಮೂಕಿಯೇನೂ ಆಗಿರಲಿಲ್ಲ. ಬಹುಶಃ ಆಕೆ ಅನುಭವಿಸಿದ್ದ ಹಿಂಸೆ, ವಂಚನೆ, ಅತ್ಯಾಚಾರ ಅವಮಾನಗಳು ಆಕೆಯನ್ನು ಮೊದಲ ದಿನ ಮೌನವಾಗಿರುವಂತೆ ಮಾಡಿದ್ದಿರಬೇಕು ಅಥವಾ ಊರಿನ ಜನರ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದ ನರಕ ಯಾತನೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಮೌನದ ಮೊರೆ ಹೊಕ್ಕಿರಬೇಕು.




ಆಕೆ ಉತ್ತರ ಕರ್ನಾಟಕದ ಒಂದು ಹಳ್ಳಿಯಿಂದ ಬೆಂಗಳೂರಿಗೆ ಓಡಿಬಂದವಳು. ಅವಳನ್ನು ಪುಸಲಾಯಿಸಿ ಓಡಿಸಿಕೊಂಡು ಬಂದವನು ಹಾಗೂ ಹೀಗೂ ಹತ್ತು ವರ್ಷ ಅವಳ ಜೊತೆಗೆ ಇದ್ದ. ಹುಟ್ಟಿದ ಮಕ್ಕಳು ಬದುಕಲಿಲ್ಲ. ಕೊನೆಗೊಂದು ದಿನ ಗಂಟುಮೂಟೆ ಕಟ್ಟಿಕೊಂಡು ಮಂಗಳೂರಿಗೆ ಹೋಗೋಣವೆಂದು ಹೊರಡಿಸಿ ಲಾರಿ ಹತ್ತಿಸಿದ್ದವನು, ಅವಳಿಗೆ ನಿದ್ರೆ ಮಾತ್ರೆ ತಿನ್ನಿಸಿ, ಲಾರಿ ಡ್ರೈವರ್‌ನಿಂದ ಹಣ ಪಡೆದುಕೊಂಡು ಮಾರ್ಗ ಮಧ್ಯದಲ್ಲಿ ಸಾಮಾನು ಸರಂಜಾಮುಗಳೊಂದಿಗೆ ಇಳಿದುಹೋಗಿದ್ದ. ಲಾರಿ ಡ್ರೈವರ್ ಮತ್ತು ಕ್ಲೀನರ್ ಅವಳನ್ನು ಹರಿದು ತಿನ್ನುವಷ್ಟು ತಿಂದು, ಮಾತ್ರೆಯ ಅಮಲಿನಲ್ಲಿ ದುರ್ಬಲ ಪ್ರತಿರೋಧ ಒಡ್ಡುತ್ತಿದ್ದವಳನ್ನು ಬೀಡಿಯಿಂದ ಸುಟ್ಟು ಹಿಂಸಿಸಿ ಕೊನೆಗೆ ಕಾರ್ಗತ್ತಲಲ್ಲಿ ಮಾರ್ಗದ ಮಧ್ಯದಲ್ಲಿ ನೂಕಿ ಇಳಿಸಿ ಹೊರಟುಹೋಗಿದ್ದರು. ವಿಕೃತ ಮನಸ್ಸಿನ ಡ್ರೈವರ್, ಕ್ರೌರ್ಯದ ಪರಾಕಾಷ್ಠೆ ತಲುಪಿದುದರ ದ್ಯೋತಕವಾಗಿ ಅವಳ ವಸ್ತ್ರಗಳನ್ನು ತನ್ನೊಂದಿಗೇ ಒಯ್ದಿದ್ದ.

ಅವಳ ಕಥೆ ಕೇಳುತ್ತಾ ರೇವತಿಗೆ ಹೊಟ್ಟೆತೊಳೆಸಿಬರತೊಡಗಿತು. ಅವಳ ವೃತ್ತಿ ಜೀವನದ ಹದಿನೈದು ವರ್ಷಗಳಲ್ಲಿ ಮನುಷ್ಯನ ಕ್ರೌರ್ಯದ ನೀಚತನದ ಅನೇಕ ಮುಖಗಳನ್ನು ನೋಡಿದ್ದಳು. ಆದರೆ ಆ ಲಾರಿ ಚಾಲಕನು ತೋರಿಸಿದ ಕಾರಣವೇ ಇಲ್ಲದ ತಣ್ಣಗಿನ ಕ್ರೌರ್ಯವನ್ನು ಮಾತ್ರ ಯಾವ ರೀತಿ ಅರ್ಥೈಸಬೇಕೆಂಬುದೇ ತಿಳಿಯಲಿಲ್ಲ. ಹೆಂಗಸಿನ ಹಣೆಯ ಮೇಲೆ ಕೈಯಿಟ್ಟು ಕರುಣೆ ತುಂಬಿ ನುಡಿದಳು :

''ಆಗಲಿ, ಆಗಿಹೋಗಿದ್ದರ ಬಗ್ಗೆ ಎಷ್ಟು ಯೋಚನೆ ಮಾಡಿದರೂ ಏನೂ ಸುಖವಿಲ್ಲ. ಗದಿಗೆಪ್ಪ ಒಳ್ಳೆಯವನ ಹಾಗೆ ಕಾಣ್ತಾನೆ. ನಿನ್ನನ್ನು ಚೆನ್ನಾಗಿ ನೋಡಿಕೊಂಡಾನು.'' ಹೆಂಗಸಿನ ನೀಲಿಗಟ್ಟಿದ್ದ ತುಟಿಗಳು ಹೌದೋ ಅಲ್ಲವೋ ಎನ್ನುವಂತೆ ಬಿರಿದವು.

ಅವಳಿಗೆ ಇನ್ನೂ ಎರಡು ದಿನ ಬಂದು ಇಂಜೆಕ್ಷನ್ ಹಾಕಿಸಿಕೊಂಡು ಹೋಗಲು ಹೇಳಿದಳು. ಗದಿಗೆಪ್ಪ ನೂರು ರೂಪಾಯಿನ ನೋಟನ್ನು ಟೇಬಲ್ ಮೇಲಿಟ್ಟು ಕೈಮುಗಿದ. ನೂರರ ಗರಿಗರಿ ನೋಟು ಅವನ ಹಳೆ ಷರಟಿನಿಂದ ಹೊರಗೆ ಬಂದದ್ದು ನೋಡಿ ಅವಳಿಗೆ ಸ್ವಲ್ಪ ಅನುಮಾನವಾಯಿತು. ಹಿಂದೆ ಮುಂದೆ ಯೋಚಿಸದೆ ''ಹೌದಾ ಗದಿಗೆಪ್ಪಾ, ನಿಮ್ಮವರು ಸಿಕ್ಕಿಬಿದ್ದಿದ್ದಾರಂತಲ್ಲ'' ಎಂದುಬಿಟ್ಟವಳು ನಂತರ ಕೇಳಬಾರದಿತ್ತೇನೋ ಎಂದು ನಾಲಿಗೆ ಕಚ್ಚಿಕೊಂಡಳು.

ಅವನ ಮುಖ ಸಪ್ಪಗಾಯ್ತು. ''ಹೌದು ಕಣ್ರವ್ವಾ. ಹಾಳು ಹುಡ್ಗೋರು! ಹಲ್ಕಟ್ ಕೆಲ್ಸಕ್ಕೆ ಕೈಹಾಕಿಬಿಟ್ರು. ಇಂಥಾ ಅಲಾಲಕೋರ ಹುಡುಗ್ರಿಂದಾಗಿ ಎಲ್ಲಾರ್ಗೂ ಕೆಟ್ಟ ಎಸರು. ಎಲ್ಲಾರ್ಗೂ ಕಸ್ಟ. ಈವತ್ತು ನಾಲ್ಕೈದು ಜನ ಬಂದು ನಮ್ಗೆ ಜೋರು ಮಾಡುದ್ರು. ನೀವು ಇಲ್ಲಿ ಇರಕೂಡ್ದು. ಟೆಂಟು ಎತ್ಗಂಡ್ ಹೊಂಟೋಗಿ ಅಂತ.''

''ಈ ಥರ ಊರಿಂದೂರಿಗೆ ತಿರುಗುವ ಬದಲು ಎಲ್ಲಾದರೂ ಒಂದುಕಡೆ ಸ್ಥಿರವಾಗಿ ನಿಂತರೆ, ಕೂಲಿ ಕೆಲಸ ಮಾಡಿಯಾದ್ರೂ ಬದುಕಬಹುದು. ನಿಮ್ಮ ಮಕ್ಕಳೂ ಸ್ಕೂಲಿಗೆ ಹೋಗಿ ನಾಲ್ಕಕ್ಷರ ಕಲಿತ್ಕೋಬಹುದು.''

''ಅಯ್ಯೋ ನಮ್ ನಮ್ ಕಸಬು ನಾವು ನಾವ್ ಮಾಡ್ಕಂಬೇಕು. ನೀವು ಡಾಕುಟ್ರು ಕೆಲಸ ಬಿಟ್ಟು ಬ್ಯಾರೇನಾದ್ರೂ ಮಾಡು ಅಂದ್ರೆ ಮಾಡುಕಾಯ್ತದಾ ?''

ಅವನ ವಿತಂಡವಾದದೆದುರು ರೇವತಿಗೆ ಮುಂದೆ ಮಾತಾಡುವ ಮನಸ್ಸಾಗಲಿಲ್ಲ. ದಿನ ಕಳೆದಂತೆ ಅಲ್ಲೊಂದು ಇಲ್ಲೊಂದು ಕಳವಿನ ಪ್ರಕರಣಗಳಾಗತೊಡಗಿದವು. ಊರಿನವರಲ್ಲಿ ಅಲೆಮಾರಿಗಳ ಮೇಲೆ ಅಸಹನೆ ಹೆಚ್ಚಾಗತೊಡಗಿತು. ಅವರನ್ನು ಅಲ್ಲಿಂದ ಏಳಿಸಬೇಕೆಂದು ಗ್ರಾಮ ಪಂಚಾಯ್ತಿಗೆ ದೂರುಗಳು ಮೇಲಿಂದ ಮೇಲೆ ಬರತೊಡಗಿದಾಗ, ಅವರೂ ನಮ್ಮಂಗೇ ಮನುಷ್ಯರಲ್ವಾ ಎಂದು ಇಷ್ಟುದಿನ ಕನಿಕರ ತೋರಿಸಿದ್ದ ಪಂಚಾಯ್ತಿ ಅಧ್ಯಕ್ಷರಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ.

ಅಲ್ಲಿಂದ ಹೊರಟುಹೋಗುವಂತೆ ಅಲೆಮಾರಿಗಳಿಗೆ ಹೇಳಿದಾಗ ಅವರು ಒಂದು ವಾರದೊಳಗಾಗಿ ಇನ್ನೆಲ್ಲಾದರೂ ಜಾಗ ಹುಡುಕಿಕೊಳ್ಳುವುದಾಗಿ ಹೇಳಿದರು. ಕಳ್ಳರಾಗಿದ್ದರೆ ಇನ್ನೊಂದು ಊರಿಗೆ ಹೋದರೂ ಇಲ್ಲಿಗೆ ಮತ್ತೆ ಬಂದು ಕದಿಯಬಾರದೆಂದೇನೂ ಇಲ್ಲ ಎನ್ನುವುದನ್ನು ಜನರು ಗಂಭೀರವಾಗಿ ಪರಿಗಣಿಸಲಿಲ್ಲ.

ಹೆಂಗಸಿನ ರಕ್ತ ಪರೀಕ್ಷೆಯ ಫಲಿತಾಂಶ ಬಂತು. ರೇವತಿಯು ಗದಿಗೆಪ್ಪನನ್ನು ಕರೆದು ''ಏನೂ ತೊಂದರೆಯಿಲ್ಲ. ಮದುವೆ ಊಟ ಯಾವಾಗ ಹಾಕಿಸ್ತೀಯಾ ?'' ಎಂದು ತಮಾಷೆ ಮಾಡಿದಳು. ಅವನು ಎಳೆ ತರುಣನಂತೆ ನಾಚುತ್ತಾ 'ನಾಡಿದ್ದು ದೀಪಾವಳಿ ದಿನ ಅವತ್ತೇ ಇಟ್ಕಂತೀನಿ' ಎಂದವನು ದೀಪಾವಳಿಯಂದು ಸಿಹಿತಿಂಡಿ ಹಣ್ಣು ಹೂವಿನ ದೊಡ್ಡ ಪೊಟ್ಟಣವನ್ನು ತಂದು ಅವಳ ಮುಂದಿಟ್ಟು ಕೈಮುಗಿದ. ಅವಳು ಗದರಿದಳು.

''ಇದೆಲ್ಲ ಯಾಕೆ ತಂದೆ ? ಯಾಕೆ ಸುಮ್ಮನೆ ಹಣ ವೇಸ್ಟ್ ಮಾಡ್ತೀಯಾ ?'' ''ಮದ್ವೆ ಅಂದ ಮ್ಯಾಲೆ ಇಷ್ಟೂ ಮಾಡ್ದಿದ್ರಾಕಾಯ್ತದಾ ?'' ಎಂದು ಹಲ್ಲು ಕಿರಿದ. ಆದರ ಮರುದಿನ ರಾತ್ರಿ ಹಕ್ಕಿಪಿಕ್ಕಿಗಳು ಬಿಡಾರ ಹೂಡಿದ್ದ ಬಯಲಿಗೆ ತಾಗಿಕೊಂಡಿದ್ದ ಗೋವಿಂದ ಭಟ್ಟರ ಮನೆಯಲ್ಲಿ ದರೋಡೆಯಾಯ್ತೆನ್ನುವ ಸುದ್ದಿ ಬಂತು. ಕದ್ದವರು ಹಕ್ಕಿಪಿಕ್ಕಿಗಳೋ ಅಥವಾ ಅವರ ಮೇಲೇ ಅಪವಾದ ಬರುವುದೆನ್ನುವ ಧೈರ್ಯದಲ್ಲಿ ಊರಿನ ಕಳ್ಳರೇ ಕದ್ದರೋ ಹೇಳುವಂತಿಲ್ಲ. ಏನಿದ್ದರೂ ಎಲ್ಲರ ಆಕ್ರೋಶವೂ ತಿರುಗಿದ್ದು ಮಾತ್ರ ಅವರ ಮೇಲೆಯೇ. ಇಪ್ಪತ್ನಾಲ್ಕು ಗಂಟೆಗಳೊಳಗೆ ಜಾಗ ಖಾಲಿ ಮಾಡದಿದ್ದರೆ ಊರವರೆಲ್ಲ ಸೇರಿ ಟೆಂಟುಗಳನ್ನು ಕಿತ್ತು ಬಿಸಾಡುತ್ತೇವೆಂದು ಎಚ್ಚರಿಕೆ ಕೊಟ್ಟರು.

ರಾತ್ರಿ ಒಂದು ಗಂಟೆಯ ವೇಳೆಗೆ ನಾಯಿ ಬೊಗಳತೊಡಗಿತು. ಎಷ್ಟು ಹೊತ್ತಾದರೂ ಅದರ ಬೊಗಳಾಟ ನಿಲ್ಲುವಂತೆ ಕಾಣದಿದ್ದಾಗ ರೇವತಿ ಎದ್ದು ಕಿಟಕಿಯಿಂದ ಹೊರಗಿಣುಕಿದಳು. ದೂರದಲ್ಲಿ ಆಕಾಶ ಕೆಂಪಾಗಿ ಕಾಣಿಸಿತು. ಮನೆಯ ತಾರಸಿಗೆ ಹತ್ತಿ ನೋಡಿದಾಗ ಹಕ್ಕಿಪಿಕ್ಕಿಗಳ ಗುಡಾರಗಳ ದಿಕ್ಕಿನಲ್ಲಿ ಎದ್ದು ಉರಿಯುತ್ತಿದ್ದ ಬೆಂಕಿ ಕಾಣಿಸಿತು. ಜನರ ಕೂಗಾಟ ಕಿರುಚಾಟದ ಶಬ್ದವು ಕಮಟು ಹೊಗೆಯ ವಾಸನೆಯೊಂದಿಗೆ ತೇಲಿಬಂದು ಕಿವಿ ಮೂಗುಗಳಿಗೆ ಅಪ್ಪಳಿಸಿತು. ಪ್ಲಾಸ್ಟಿಕ್ ಶೀಟು ಗೋಣಿಚೀಲಗಳಿಂದ ನಿರ್ಮಿಸಿದ್ದ ಟೆಂಟುಗಳನ್ನು ಆಹುತಿ ತೆಗೆದುಕೊಳ್ಳುವುದಕ್ಕೆ ಅಗ್ನಿಗೆ ಹೆಚ್ಚು ಸಮಯ ಬೇಕಾಗಿರಲಿಲ್ಲ. ಅವಳು ನೋಡುತ್ತಿದ್ದಂತೇ ಬೆಂಕಿ ಆರಿಹೋಗಿ, ಹೆಂಗಸರು ಮಕ್ಕಳ ಆಕ್ರಂದನದ ಶಬ್ದ ಮಾತ್ರ ಕತ್ತಲ ಸಾಮ್ರಾಜ್ಯದಲ್ಲಿ ಮೊರೆಯತೊಡಗಿತು. ಅಯ್ಯೋ, ಯಾರಿಗೂ ಏನೂ ಅಪಾಯವಾಗಿರದಿದ್ದರೆ ಸಾಕು ಎಂದುಕೊಂಡು ಕೆಳಗಿಳಿದು ಬಂದಳು. ಒಂದುವೇಳೆ ಹಾಗೇನಾದರೂ ಆಗಿದ್ದಿದ್ದರೆ ನನ್ನ ಹತ್ತಿರ ಬಂದಿರುತ್ತಿದ್ದರು. ಬೆಳಗಾಗುವವರೆಗೂ ಯಾರೂ ಬಂದು ಬಾಗಿಲು ಬಡಿಯಲಿಲ್ಲವಾದ್ದರಿಂದ ಯಾರಿಗೂ ಅಪಾಯವಾಗಿರಲಿಕ್ಕಿಲ್ಲ ಎಂದು ತರ್ಕಿಸಿ ಬೆಳಕು ಹರಿದ ಮೇಲೆ ನಿದ್ರೆಗೆ ಜಾರಿದಳು.

ಏಳೂವರೆಯ ಹೊತ್ತಿಗೆ ಗದಿಗೆಪ್ಪ ಮನೆ ಬಾಗಿಲಿನಲ್ಲಿ ಪ್ರತ್ಯಕ್ಷನಾದ. ಜೊತೆಗೆ ಅವನ ಹೊಸ ಹೆಂಡತಿ. ಇಬ್ಬರ ಮುಖದಲ್ಲೂ ದುಗುಡ ತುಂಬಿತ್ತು. ಗದಿಗೆಪ್ಪನ ಮೈಮೇಲೆ ಸಣ್ಣ ಪುಟ್ಟ ಸುಟ್ಟಗಾಯಗಳು. ತಲೆಕೂದಲು ಕಣ್ರೆಪ್ಪೆಗಳು ಸ್ವಲ್ಪ ಕರಟಿಹೋಗಿ ಮುಖಲಕ್ಷಣವೇ ಬದಲಾಗಿ ಕಾಣುತ್ತಿತ್ತು. ನಿದ್ರೆ ಸಾಕಾಗದೇ ಉರಿಯುತ್ತಿದ್ದ ರೇವತಿಯ ಕಣ್ಣುಗಳಿಗೆ ಮಂಕು ಬಡಿದಂತಾಗಿದ್ದ ಮನಸ್ಸಿಗೆ ಅವರಿಬ್ಬರೂ ಯಾವುದೋ ಹಳೆಯ ಚಲನಚಿತ್ರದ ಪಾತ್ರಗಳಂತೆ ಭಾಸವಾದರು.

ಅವಳು ಬಾಯಿ ತೆರೆಯುವ ಮೊದಲೇ ಗದಿಗೆಪ್ಪ ಕುಸಿದು ಕೂತು ಗಳಗಳ ಅಳತೊಡಗಿದ.

''ಅಮ್ಮಾವ್ರೇ, ಎಲ್ಲಾ ಸುಟ್ಹೋಯ್ತು ಅಮ್ಮಾವ್ರೇ... ನಾವು ಯಾವ ಜಲ್ಮದಲ್ಲಿ ಏನು ಪಾಪ ಮಾಡಿದ್ವೋ ಈ ಜಲ್ಮದಾಗೆ ಅನುಭೌಪ್ತಾ ಇದೀವಿ... ಏನೋ ಹ್ವಟ್ಟೆಪಾಡಿಗೆ ಅಂತ ಈ ಊರ್ಗೆ ಬಂದ್ವಿ ಹ್ವಟ್ಟೆಗೇ ಬೆಂಕಿ ಇಕ್‌ಬಿಟ್ರು.''

ಅವನು ಬಡಬಡಿಸುತ್ತಿದ್ದರೆ ಹೆಂಗಸು ವಿಗ್ರಹದಂತೆ ನಿಶ್ಚಲವಾಗಿ ನಿಂತಿದ್ದಳು. ಅವಳ ಕಣ್ಣಂಚಿನಲ್ಲಿ ನಿಂತಿದ್ದ ಹನಿಯು ಇಳಿದುಬೀಳುವುದೋ ಇಲ್ಲಾ ಅಲ್ಲೇ ಆವಿಯಾಗುವುದೋ ಎಂದು ಸಂದಿಗ್ಧದಲ್ಲಿ ಸೂಕ್ಷ್ಮವಾಗಿ ಕಂಪಿಸುತ್ತಿತ್ತು. ತನ್ನ ಕಾಲುಗುಣ ಸರಿಯಿಲ್ಲದ್ದರಿಂದಲೇ ಕಾಲಿಟ್ಟ ಕಡೆ ಬೆಂಕಿ ಬಿದ್ದಿತೆಂದು ಅವಳು ಒಳಗೊಳಗೇ ಹುಚ್ಚು ಅಪರಾಧಿಪ್ರಜ್ಞೆಯಿಂದ ನರಳುತ್ತಿದ್ದಿರಬಹುದು. ಅತ್ತು ಹಗುರಾಗುವುದಕ್ಕೂ ತಾನು ಯೋಗ್ಯಳಲ್ಲವೆಂದು ನಿಶ್ಚಯಿಸಿ ದುಃಖದಲ್ಲಿ ಬೇಯುತ್ತಿದ್ದಿರಬಹುದು.

ಗದಿಗೆಪ್ಪನ ಉದ್ವಿಗ್ನ ಬಡಬಡಿಕೆಯಲ್ಲಿ ರೇವತಿಗೆ ಎಲ್ಲವೂ ಸರಿಯಾಗಿ ಅರ್ಥವಾಯಿತೆಂದು ಹೇಳುವಂತಿಲ್ಲ. ಅವನು ಹೇಳಿದ ಪ್ರಕಾರ ಗೋವಿಂದಭಟ್ಟರ ಮನೆ ದರೋಡೆ ಮಾಡಿದವರನ್ನು ಅವನ ಮಗ ನೋಡಿದ್ದ. ಹುಡುಗ ಭಟ್ಟರ ತೋಟದಲ್ಲಿ ಎಳೆನೀರು, ಬಾಳೆಗೊನೆ ಎಂದು ಆಗೀಗ ಇನ್ನೊಬ್ಬ ಹುಡುಗನ ಜೊತೆ ಸೇರಿ ಕದಿಯುವ ಚಾಳಿಗೆ ಬಿದ್ದಿತ್ತು. ಕಾಲಿಗೆ ಗಾಜುತಾಗಿ ಗಾಯ ಮಾಡಿಕೊಂಡಂದಿನಿಂದ ಹುಡುಗನ ಕಳ್ಳಾಟಕ್ಕೆ ನಾಲ್ಕು ದಿನ ತಡೆಬಿದ್ದಿದ್ದರೂ ನೋವು ಸ್ವಲ್ಪ ಕಮ್ಮಿಯಾಗುತ್ತಲೇ ಹಳೇ ಚಾಳಿ ಮತ್ತೆ ಮುಂದುವರಿಸಿದ್ದ. ಬೆಳಗಿನಜಾವ ಭಟ್ಟರ ಮನೆ ದರೋಡೆ ಮಾಡಿದವರು ಕದ್ದ ಮಾಲಿನಲ್ಲಿ ಕೆಲವನ್ನು ಬೇಲಿ ಪಕ್ಕದ ತೆಂಗಿನ ಗುಂಡಿಯಲ್ಲಿ ಬಚ್ಚಿಟ್ಟಿದ್ದು ಮತ್ತೆ ಮರುರಾತ್ರಿ ಬಂದು ಅದನ್ನು ಒಯ್ದದ್ದು ಎಲ್ಲವನ್ನೂ ಹುಡುಗರು ನೋಡಿಬಿಟ್ಟಿದ್ದರು. ಕದ್ದವರ ಹೆಸರುಗಳು ಹುಡುಗರಿಗೆ ಗೊತ್ತಿರದಿದ್ದರೂ ಮುಖ ನೋಡಿದರೆ ಗುರುತು ಹಿಡಿಯುತ್ತಿದ್ದವು. ಇದೆಲ್ಲ ಕಥೆ ಕ್ರಮೇಣ ಅವರ ಗುಂಪಿನೊಳಗೆ ಹರಡಿ ಗುಂಪಿನವರ್‍ಯಾರೋ ಅಜಾಗರೂಕತೆಯಿಂದಲೋ ಇಲ್ಲಾ ಕುಡಿದ ಅಮಲಿನಲ್ಲೋ ಊರ ಜನರ ಮುಂದೆ ಹೊರಹಾಕಿದ್ದಿರಬೇಕು. ಇನ್ನು ಈ ಹಕ್ಕಿಪಿಕ್ಕಿಗಳು ಊರಲ್ಲಿದ್ದರೆ ತಮ್ಮ ಕೃತ್ಯ ಬಯಲಿಗೆ ಬರುವುದು ಖಂಡಿತ ಎಂದು ಇವರನ್ನು ಓಡಿಸುವ ಉದ್ದೇಶದಿಂದ ಬೆಂಕಿ ಹಾಕಿದ್ದಿರಬೇಕು.

ಹೆಗಲ ಮೇಲಿದ್ದ ಕೊಳಕು ಟವೆಲ್ಲಿನಿಂದ ಮುಖ ಒರೆಸಿಕೊಳ್ಳುತ್ತ ಗದಿಗೆಪ್ಪ ಮೇಲಕ್ಕೆದ್ದ. ''ಇದ್ದಿದ್ದೆಲ್ಲ ಸುಟ್ಹೋದ್ರೂ ಯಾರ ಜೀವಕ್ಕೂ ಅಪಾಯವಾಗ್ಲಿಲ್ಲ ಅನ್ನೋದೊಂದೇ ಸಂತೋಸ. ನಾಲ್ಕೈದು ಜನರಿಗೆ ಸುಟ್ಟಗಾಯ ಆಗಿದೆ. ಒಂದಿಷ್ಟು ಮುಲಾಮು ಮಾತ್ರೆ ಕೊಟ್ಬುಡಿ.''

ಅವಳು ಕೊಟ್ಟ ಔಷಧಿಗಳನ್ನು ತೆಗೆದುಕೊಂಡವನು, ''ಅಮ್ಮೋರೇ ಇದರದ್ದು ಎಷ್ಟು ರೂಪಾಯಾಯ್ತು ಬರೆದ್ಕೊಡಿ, ಈಗ ನನ್ನ ಕೈಯಾಗೆ ಏನೂ ಇಲ್ಲ. ಒಂದೀಸು ದಿನದಾಗೆ ಹೆಂಗಾರೂ ದುಡ್ಡು ಒಟ್ಟು ಮಾಡ್ಕಂಡ್ ಬಂದು ನಿಮಗೆ ಕೊಟ್ಹೋಗ್ತೀನಿ. ದಯಮಾಡಿ ಬ್ಯಾಜಾರ್ ಮಾಡ್ಕಬೇಡಿ'' ಎಂದು ಕೈ ಮುಗಿದ.

ಚೀಟಿ ಬರೆದುಕೊಡು ಎಂದು ಒತ್ತಾಯ ಮಾಡುತ್ತಿದ್ದ ವ್ಯವಹಾರ ಪ್ರಜ್ಞೆಯನ್ನು ಅದುಮಿಟ್ಟು ಅವಳು ಹೇಳಿದಳು, ''ದುಡ್ಡು ಗಿಡ್ಡು ಏನೂ ಬೇಡ. ಅವೆಲ್ಲ ನನಗೆ ಫ್ರೀಯಾಗಿ ಸಿಕ್ಕಿದ ಔಷಧಿ. ತಗೊಂಡೋಗು, ಪರವಾಗಿಲ್ಲ.'' ಅವನು ತಟಕ್ಕನೆ ಬಗ್ಗಿ ಅವಳ ಕಾಲು ಮುಟ್ಟಿ ನಮಸ್ಕರಿಸಿದವನು ಹೆಂಡತಿಗೂ ನಮಸ್ಕಾರ ಮಾಡುವಂತೆ ಸನ್ನೆ ಮಾಡಿದ. ರೇವತಿ ಮುಜುಗರದಿಂದ ಅಯ್ಯೋ ಅಯ್ಯೋ ಬೇಡ ಬೇಡ ಎಂದು ಹಿಂದಕ್ಕೆ ಸರಿದಳು.

''ನಮ್ಮನ್ನ ಮರೀಬ್ಯಾಡ್ರೀ, ಅಮ್ಮೋರೇ, ಈ ಊರಾಗೆ ನೀವೊಬ್ರೇ, ನಮ್ಮನ್ನ ಮನುಷ್ಯರೂಂತ ನೋಡ್ದವರು. ನಿಮ್ಮುಪಕಾರ ಮರೆಯಾಕಿಲ್ಲ. ನಿಮ್ಮ ಋಣ ಇಟ್ಕಳಾಕಿಲ್ಲ. ಬಾರಮ್ಮಿ ಹೋಗಾಮಾ'' ಎಂದು ಕಣ್ಣೊರೆಸಿಕೊಳ್ಳುತ್ತಾ ಅವನು ಹೊರಟುಹೋದ.

ಕ್ರೌರ್ಯದ ಬೆಂಕಿಯ ಝಳಕ್ಕೆ ಸಿಲುಕಿದರೂ ನಾಶವಾಗಲೊಲ್ಲದ ಮಾನವೀಯತೆಯ ಸಂಕೇತದಂತೆ ಆ ಹೆಂಗಸಿನ ಮುಡಿಯಲ್ಲೊಂದು ಕೆಂಪು ಗುಲಾಬಿ ಹೂವು ನೇತಾಡುತ್ತಿತ್ತು. ಪ್ಲಾಸ್ಟಿಕ್ ಹಾಳೆಗಳನ್ನು ಕತ್ತರಿಸಿ ಮಾಡಿದ್ದ ಕೆಂಪು ಗುಲಾಬಿಯ ಹೂವು !

---

**ಡಾ|| ಜಾನಕಿ ಸುಂದರೇಶ್**
ಸಾಕ್ಷಿ, ಬೆಸ್ಟ್ ಇಂಗ್ಲಿಷ್ ಸ್ಕೂಲ್ ಹಿಂದೆ, ಬಿ. ಸಿ. ರೋಡು - ೫೭೪ ೨೧೯

---

## ಸಾದರ ಸ್ವೀಕಾರ

**ನಿರ್ವಚನ** (ಸಾಹಿತ್ಯ ಸಂಸ್ಕೃತಿ ಕುರಿತ ಸಂವಾದ)
*ಡಾ|| ಎಸ್. ಪ್ರಸಾದಸ್ವಾಮಿ*
*ಪುಟ : ೧೬೦* *ಬೆಲೆ : ರೂ. ೧೧೦*
**ಸಿವಿಜಿ ಪಬ್ಲಿಕೇಷನ್ಸ್**, ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩

**ನೀಲು ಕಾವ್ಯ** (ಸಂಗ್ರಹ - ೧) *ಪಿ. ಲಂಕೇಶ್*
*ಪುಟ : ೧೫೦* *ಬೆಲೆ : ರೂ. ೧೫೦*

**ಟ್ರೈನ್ ಟು ಪಾಕಿಸ್ತಾನ್** *ಖುಷ್‌ವಂತ್ ಸಿಂಗ್*
*ಅನು : ಡಾ|| ಎಂ. ಬಿ. ರಾಮಮೂರ್ತಿ*
*ಪುಟ : ೧೨೫* *ಬೆಲೆ : ರೂ. ೧೨೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲಂಕೇಶ್ ಪ್ರಕಾಶನ**, ೯ ಪೂರ್ವ ಆಂಜನೇಯ ಗುಡಿ ರಸ್ತೆ ಬೆಂಗಳೂರು - ೫೬೦ ೦೦೪

**ಸೌಹಾರ್ದ ಸಂಗಮ** (ಕವನ ಸಂಕಲನ)
*ಸಂ. : ಎ. ಎಸ್. ಮಕಾನದಾರ, ಹಾಶಮ್ ಎಂ. ಗುತ್ತಲ*
*ಪುಟ : ೫೦* *ಬೆಲೆ : ರೂ. ೩೦*
ನಿರಂತರ ಪ್ರಕಾಶನ, ಮಾಸೂಮ್-ಮಂಜಿಲ್, ಟೆಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪, ಗದಗ ಜಿಲ್ಲೆ

**ಗಾಂಧೀ ಟು ಗೋದ್ರಾ** (ಕವನ ಸಂಕಲನ)
*ಡಾ|| ಸರಜೂ ಕಾಟ್ಕರ್*
*ಪುಟ : ೮೦* *ಬೆಲೆ : ರೂ. ೩೫*

**ನನ್ನೊಳಗಿನ ಹಾಡು ಕ್ಯೂಬಾ** (ಪ್ರವಾಸ ಕಥನ)
*ಜಿ. ಎನ್. ಮೋಹನ್*
*ಪುಟ : ೧೪೪* *ಬೆಲೆ : ರೂ. ೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ಏನೆಂದು ಹಾಡಲಿ** (ಕವನ ಸಂಕಲನ)
*ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್*
*ಪುಟ : ೬೭* *ಬೆಲೆ : ರೂ. ೩೦*
ವಿದ್ಯಾನಿಧಿ ಪ್ರಕಾಶನ, ಸ್ಟೇಷನ್ ರಸ್ತೆ, ಮಹೇಂದ್ರಕರ ವೃತ್ತದ ಹತ್ತಿರ, ಗದಗ - ೫೮೨ ೧೦೧

**ಪೋತಲೂರಿ ಶ್ರೀ ವೀರಬ್ರಹ್ಮಂ ಅವರ ಕಾಲಜ್ಞಾನ**
*ಸ. ರಘುನಾಥ*
*ಪುಟ : ೮೮* *ಬೆಲೆ : ರೂ. ೩೦*
**ಸವಿಗನ್ನಡ ಬಳಗ**, ೧೦೧, ಎರಡನೇ ಮಹಡಿ, ನಾಲ್ಕನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

**ಜಲಲ ಜಲಲ ಜಲಧಾರೆ** (ಪರಿಸರ ಪ್ರವಾಸ ಕಥನ)
*ಡಾ|| ಪ್ರಭಾಕರ ಶಿಶಿಲ*
*ಪುಟ : ೯೬* *ಬೆಲೆ : ರೂ. ೭೫*
**ಸಿರಾ ಪಬ್ಲಿಷಿಂಗ್ ಹೌಸ್**, ನಂ. ೮೩/೧, ಮೊದಲನೇ ಮಹಡಿ, ಕೆ.ಎಸ್.ಆರ್.ಟಿ.ಸಿ. ಬಡಾವಣೆ, ಹನುಮಂತ ನಗರ, ಬನ್ನಿಮಂಟಪ, ಮೈಸೂರು - ೧೫

**ನಿನ್ನೆ ನಾಳೆಗಳ ಮಧ್ಯೆ** (ಕವನಗಳು) *ಡಾ|| ರಾಜಶೇಖರ ಎಸ್. ಬಸುಪಟ್ಟದ*
*ಪುಟ : ೬೬* *ಬೆಲೆ : ರೂ. ೪೦*
ರಜತ-ರಶ್ಮಿ ಪ್ರಕಾಶನ, ಸಾಲೇಶ್ವರ ಬೀದಿ, ಗುಳೇದಗುಡ್ಡ - ೫೮೭ ೨೦೩, ಬಾಗಲಕೋಟೆ ಜಿಲ್ಲೆ

**ನಕ್ಕು ಪ್ರಸನ್ನರಾಗಿ** (ನಗೆಚಿತ್ರಗಳ ಸಂಕಲನ)
*ಕಾರ್ಟೂನ್ ಪ್ರಸನ್ನ*
*ಪುಟ : ೧೦೬* *ಬೆಲೆ : ರೂ. ೩೫*
**ಪೂರ್ಣಿಮಾ ಸಾಹಿತ್ಯ ಮಂದಿರ**, ೨೮ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು - ೫೭೨ ೧೦೩

**ಹೊಸ ಹೆಂಡತಿ** (ನಗೆ ಬರಹಗಳು)
*ಕೆ. ಜೆ. ಶೆಟ್ಟಿ ಕಡಂದಲೆ*
*ಪುಟ : ೧೫೨* *ಬೆಲೆ : ರೂ. ೮೦*
ನವಶಕ್ತಿ ಪ್ರಕಾಶನ, ಕಡಂದಲೆ - ೫೭೪ ೨೭೭ (ದ.ಕ.)

**ಆಚಾರ್ಯ ಕುಂದಕುಂದರು** (ಅಧ್ಯಯನ)
*ಡಾ|| ಕೆ. ಶಾರದಾ*
*ಪುಟ : ೪೮* *ಬೆಲೆ : ರೂ. ೧೨*

**ಭಾರತೀಯ ಉದ್ದಿಮೆದಾರರು**
*ಡಾ|| ಮಲ್ಲಿಕಾರ್ಜುನ ಶಿವಪ್ಪ ಲಟ್ಟೆ*
*ಪುಟ : ೧೩೦* *ಬೆಲೆ : ರೂ. ೭೫*

**ಎ. ಕೆ. ರಾಮೇಶ್ವರ ಸಮಗ್ರ ಕಾವ್ಯ** ೦
*ಪುಟ : ೧೮೮* *ಬೆಲೆ : ರೂ. ೧೧೦*

**ಕನ್ನಡ ಸಂಶೋಧನೆ ಸಮೀಕ್ಷೆ** (ಲೇಖನ ಸಂಗ್ರಹ)
*ಡಾ|| ಸಿ. ನಾಗಭೂಷಣ*
*ಪುಟ : ೧೦೦* *ಬೆಲೆ : ರೂ. ೬೦*

**ರಂಗಸಿರಿ** (ಲೇಖನಗಳು)
*ಡಾ|| ಗವಿಸಿದ್ದಪ್ಪ ಎಚ್. ಪಾಟೀಲ*
*ಪುಟ : ೧೩೪* *ಬೆಲೆ : ರೂ. ೭೫*

**ಜಾನಪದ ಸಂಸ್ಕೃತಿ** (ಲೇಖನಗಳು)
*ಪ್ರೊ|| ಸೂಗಯ್ಯ ಹಿರೇಮಠ*
*ಪುಟ : ೧೪೪* *ಬೆಲೆ : ರೂ. ೧೦೫*
ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ**, ಸರಸ್ವತಿ ಗೋದಾಮು, ಗುಲಬರ್ಗಾ - ೫೮೫ ೧೦೧

# ಮೂಢನಂಬಿಕೆಯ ನಿರ್ಮೂಲನೆ ನೈಜ ಸುಖದ ಸಂಪಾದನೆ

ಪ್ರೊ॥ ಕೆ. ಎಸ್. ಭಗವಾನ್

**ಮೂಢ**ನಂಬಿಕೆ ಸಾರ್ವತ್ರಿಕವಾದುದು. ಅದು ಒಂದಲ್ಲ ಒಂದು ರೂಪದಲ್ಲಿ ಪ್ರತಿಯೊಂದು ಜನಾಂಗದಲ್ಲೂ ಪ್ರತಿಯೊಂದು ದೇಶದಲ್ಲೂ ನೆಲಸಿದೆ. ಮೂಢನಂಬಿಕೆಯನ್ನು ಹೋಗಲಾಡಿಸಲು ನಡೆಸಿದ ಪ್ರಯತ್ನಗಳು ಅನಂತರ ಮೂಢನಂಬಿಕೆಯಾಗಿ ಪರಿವರ್ತನೆಗೊಳ್ಳುವುದು ಇತಿಹಾಸದ ಕಟಕಿಯಾಗಿ ಕಾಣುತ್ತದೆ. ಹಾಗೆಂದು ಸುಮ್ಮನೆ ಕೂರುವಂತಿಲ್ಲ, ಮನುಷ್ಯನಿಗೆ ನಂಬಿಕೆ ಬೇಕು. ಬಾಳು ನಂಬಿಕೆಯ ಮೇಲೆ ನಿಂತಿದೆ. ಆದರೆ ನಂಬಿಕೆ ವಿಚಾರದ ಮೇಲೆ ಅವಲಂಬಿತವಾಗಿ ತಾತ್ವಿಕ ಶಕ್ತಿಯಾಗಿ ಮಾನವರಲ್ಲಿ ಮೂಡುವುದು ಒಳಿತು. ಇದು ನಿರಂತರವಾಗಿ ನಡೆದಾಗ ಮೂಢನಂಬಿಕೆಗೆ ಅವಕಾಶ ಇರುವುದಿಲ್ಲ. ಇನ್ನೊಬ್ಬರು ನಂಬಿದ ವಿಷಯವನ್ನು, ನಡೆದ ಹಾದಿಯನ್ನು, ಅಂಧಾಭಿಮಾನದಿಂದ ಅನುಸರಿಸಿದಾಗ ಅದು ಮೌಢ್ಯವಾಗುತ್ತದೆ. ಮೌಢ್ಯದಲ್ಲಿ ಜೀವನವನ್ನು ಅನುಭವಿಸುವಾಗ ಚುರುಕು ಮತ್ತು ತೀವ್ರತೆ ಇರಲು ಸಾಧ್ಯವಿಲ್ಲ. ಇನ್ನೊಬ್ಬರ ಬದುಕು ನನ್ನ ಬದುಕಾಗಕೂಡದು, ನನ್ನ ಬದುಕು ನನ್ನದಾಗಬೇಕು ಎಂಬ ಜರೂರು ಬರಬೇಕು. ಸಂತೆ ಅಥವಾ ಮಾರುಕಟ್ಟೆಗಳಲ್ಲಿ ನಮಗೆ ಬೇಕಾದ ಆಹಾರ ಪದಾರ್ಥಗಳನ್ನು ದಿನಸಿಯನ್ನು ಕೊಂಡುತರುತ್ತೇವೆ. ತಂದ ಸರಕುಗಳನ್ನು ಹಾಗೆಯೇ ಅಡುಗೆಗೆ ಇಡುವುದಿಲ್ಲ. ಅವುಗಳನ್ನು ಕೇರಿ, ಕಲ್ಲು, ಮಣ್ಣು ತೆಗೆದು, ಕಸವನ್ನು ಚೊಕ್ಕಟ ಮಾಡಿ ಒಲೆ ಮೇಲೆ ಇಡುತ್ತೇವೆ. ಅದೇ ರೀತಿ ಜೀವನ ವ್ಯಾಪಾರದಲ್ಲಿ ಅನೇಕ ವಿಚಾರಗಳು ಧರ್ಮ ಮತ್ತು ದೇವರ ಹೆಸರಿನಲ್ಲಿ, ದೊಡ್ಡವರ ಹೆಸರಿನಲ್ಲಿ ಪಟ್ಟಭದ್ರ ಹಿತಾಸಕ್ತರು ಲೋಕದಲ್ಲಿ ಬಿಕರಿ ಮಾಡುತ್ತಿರುತ್ತಾರೆ. ವಂಚನೆಗೆ ಒಳಗಾಗಬಾರದೆಂದು ಅವೆಲ್ಲವನ್ನು ಪರೀಕ್ಷಿಸುವ ಅಗತ್ಯವಿದೆ.

ನೀವು ಚಿನ್ನ ಅಥವಾ ಬೆಳ್ಳಿಯನ್ನು ಅಕ್ಕಸಾಲಿಗನ ಹತ್ತಿರ ತೆಗೆದುಕೊಂಡು ಹೋಗಿ 'ಇದು ಒಳ್ಳೆಯ ಚಿನ್ನ, ಅಪರಂಜಿ ಪವನು' ಎಂದರೆ ಅವನು, 'ಕುಳಿತುಕೊಳ್ಳಿ, ನೋಡೋಣ' ಎನ್ನುತ್ತಾನೆ. ನಿಮ್ಮೆದುರೇ ನೀವು ಕೊಟ್ಟ ಚಿನ್ನ ಅಥವಾ ಬೆಳ್ಳಿಯನ್ನು ಒರೆ ಹಚ್ಚುತ್ತಾನೆ; ಸತ್ಯ ತಿಳಿಸಲು ಕರಗಿಸುತ್ತಾನೆ. ಆಗ ನೀವು ಮರುಮಾತಾಡದೆ ಚಿನ್ನ ಅಥವಾ ಬೆಳ್ಳಿಯಲ್ಲಿ ಉಳಿದದ್ದನ್ನು ಅಥವಾ ಚಿನ್ನವೇ ಇಲ್ಲ ಬೆಳ್ಳಿಯೇ ಎಂದು ಅಂಗೀಕರಿಸುತ್ತೀರಿ. ಹೀಗೆ ಎಲ್ಲವನ್ನೂ ವಿಚಾರದ ಒರೆಗೆ ಹಚ್ಚುವುದೇ ವೈಚಾರಿಕತೆ; ಎಲ್ಲವನ್ನೂ ವಿಚಾರದ ಮೂಸೆಯಲ್ಲಿ ಕರಗಿಸಿ ನೋಡುವುದೇ ವೈಜ್ಞಾನಿಕತೆ.

ಇದೇ ಬಗೆಯಲ್ಲಿ ಬಾಳಿನ ಎಲ್ಲಾ ಅನಿಸಿಕೆಗಳನ್ನು , ವಿಶೇಷವಾಗಿ ಧರ್ಮ ಮತ್ತು ದೇವರ ವಿಷಯಗಳನ್ನು ಭೇದಿಸಿ ನೋಡುವ ತರದೂದು ಇದೆ. ವ್ಯಾಪಾರಿ ಕ್ಷೇತ್ರದಲ್ಲಿ ಎಷ್ಟು ಮೋಸ ಇದೆಯೋ ಅಷ್ಟೇ ಅಥವಾ ಅದಕ್ಕಿಂತಲೂ ಅಧಿಕ ವಂಚನೆ ಮತ ಮತ್ತು ಮಂದಿರಗಳ ವಿಷಯದಲ್ಲಿ ತಾಂಡವವಾಡುತ್ತಿದೆ.

ನಗರ ಪ್ರದೇಶದಲ್ಲಿ ಹೊಸ ಹೊಸ ಬಡಾವಣೆಗಳು ಬಂದಾಗ ಅಲ್ಲಿ ಬಹುಬೇಗ ದೇವಸ್ಥಾನಗಳು, ಚರ್ಚುಗಳು, ಮಸೀದಿಗಳು ಹುಟ್ಟಿಕೊಳ್ಳುತ್ತವೆ. ಬಡಾವಣೆಯನ್ನು ಉತ್ತಮಪಡಿಸಿಕೊಳ್ಳುವುದಕ್ಕಿಂತ, ಜೀವನಾವಶ್ಯಕ ವಸ್ತುಗಳನ್ನು ದೊರಕಿಸಿಕೊಳ್ಳುವುದಕ್ಕಿಂತ, ಪರಿಸರವನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವುದಕ್ಕಿಂತ, ಶಾಲೆ ಆಸ್ಪತ್ರೆಗಳನ್ನು ಬರಮಾಡಿಕೊಳ್ಳುವುದಕ್ಕಿಂತ ದೇವರನ್ನು ಪ್ರತಿಷ್ಠಾಪಿಸುವುದು, ಅದಕ್ಕೊಂದು ಗರ್ಭಗುಡಿಯನ್ನು ಕಟ್ಟುವುದು ಎಲ್ಲಕ್ಕಿಂತ ಬಹಳ ಪ್ರಮುಖವಾದ ಕೆಲಸವಾಗಿಬಿಡುತ್ತದೆ. ಇತಿಹಾಸದ ಉದ್ದಕ್ಕೂ ಎಲ್ಲ ದೇಶ ಸಮಾಜಗಳಲ್ಲೂ ಮತೀಯ ಸಂಸ್ಥೆಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದರ ಉದ್ದೇಶ ಜನಸಮುದಾಯವನ್ನು ಅಜ್ಞಾನದಲ್ಲಿ ಇಡುವುದೇ ಆಗಿದೆ. ಮಕ್ಕಳು ಶಾಲೆಗೆ ಹೋದರೆ ಪ್ರಜೆಗಳು ವಿದ್ಯಾವಂತರಾಗುತ್ತಾರೆ. ವಿದ್ಯೆಯಿಂದ ಬುದ್ಧಿ ಬರುತ್ತದೆ. ಬುದ್ಧಿ ಅಪಾಯಕಾರಿ. ಆದ್ದರಿಂದ ಬುದ್ಧಿಯನ್ನು ಕೊಂದು ಮನುಷ್ಯನನ್ನು ದೇವಸ್ಥಾನಕ್ಕೆ ತಳ್ಳು, ಮೂಢನಾಗಿರುತ್ತಾನೆ ಎಂಬ ಧೋರಣೆ ಕೆಲಸ ಮಾಡುತ್ತಿದೆ. ದೇವಸ್ಥಾನಗಳು, ಚರ್ಚುಗಳು, ಮಸೀದಿಗಳು ಅಜ್ಞಾನದ ಆಗರಗಳು, ಅವಿವೇಕದ ಸಂಕೇತಗಳು, ಮೌಢ್ಯದ ಸ್ಮಾರಕಗಳು.

ಇರುವ ದೇವಸ್ಥಾನಗಳನ್ನೇ ಸರಿಯಾಗಿ ನೋಡಿಕೊಳ್ಳಲು ಬಾರದ ಜನ ಹೊಸ ಹೊಸ ದೇವಾಲಯಗಳನ್ನು ನಿರ್ಮಿಸುವುದು ಅನುತ್ಪಾದಕವಾಗಿದೆ. ಗುಡಿ, ಚರ್ಚು, ಮಸೀದಿ ಮುಂತಾದವುಗಳ ನಿರ್ಮಾಣಕ್ಕಾಗಿ ಖರ್ಚು ಮಾಡುವ ಹಣವನ್ನು ಕಾರ್ಖಾನೆ ಕಟ್ಟಿಸಲು, ಶಾಲೆ ಕಾಲೇಜುಗಳನ್ನು ಪ್ರಾರಂಭಿಸಲು, ನದಿಗಳಿಗೆ ಅಣೆಕಟ್ಟುಗಳನ್ನು ನಿರ್ಮಿಸಲು ಬಳಸಿದರೆ ದೇಶದ ಸಂಪತ್ತು ಹತ್ತುಪಟ್ಟು, ಸಾವಿರ ಪಟ್ಟು ಹೆಚ್ಚಾಗುತ್ತದೆ. ಈ ದೇವಾಲಯಗಳಿಂದ ನಮ್ಮ ಜನತೆಯ ಜೀವನ ಉತ್ತಮವಾಗಿಲ್ಲ ಎಂದು ತಿಳಿಯುವ ಅಗತ್ಯವಿದೆ. ಇವುಗಳಿಂದ ಜನಾಂಗ ದ್ವೇಷ ಹೆಚ್ಚಿ, ಕೋಮುಗಲಭೆಯಾಗುತ್ತಿದೆ. ಸಾಮೂಹಿಕ ಸಂಪತ್ತು ಆಸ್ತಿಪಾಸ್ತಿ ಹಾಳಾಗುತ್ತಿದೆ. ಆದ್ದರಿಂದ ಇಂತಹ ವಿನಾಶಕಾರಿ ಪ್ರವೃತ್ತಿಗಳನ್ನು ಬೆಳೆಸುವ ಆರಾಧನಾ ಸ್ಥಳಗಳು ಅಸ್ತಿತ್ವಕ್ಕೆ ಬರದಂತೆ ನೋಡಿಕೊಳ್ಳುವುದು ಎಲ್ಲ ಮತಸ್ಥರ ಕರ್ತವ್ಯವಾಗಿದೆ.

ಚರಿತ್ರೆಯ ಕಾಲದಿಂದ ಇಲ್ಲಿಯವರೆಗೆ ದೇವಸ್ಥಾನಗಳಿಂದ ನಮ್ಮ ದೇಶಕ್ಕೆ ಆಗಿರುವ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು. ಕೆಲವರು ಹೇಳುವಂತೆ ನೂರಾರು ವರ್ಷಗಳ ಹಿಂದೆ ಜನರು ಧಾರ್ಮಿಕರೂ ದೈವಭಕ್ತಿ ಉಳ್ಳವರೂ ಆಗಿದ್ದಾಗ ನಮ್ಮ ರಾಷ್ಟ್ರದ ಮೇಲೆ ಅನೇಕ ದಾಳಿಗಳಾಗಿವೆ. ಪ್ರಾಚೀನ ಯುಗದಿಂದ ಅರ್ವಾಚೀನ ಕಾಲದ ತನಕ ಭಾರತ ಇಪ್ಪತ್ತಾರು ಬಾರಿ ಪರಕೀಯರ ಆಕ್ರಮಣಗಳಿಗೆ ತುತ್ತಾಗಿದೆ. ಲೆಕ್ಕವಿಲ್ಲದಷ್ಟು ಚಿನ್ನ, ಬೆಳ್ಳಿ, ವಜ್ರ, ವೈಡೂರ್ಯಾದಿ ಅಪಾರ ಸಂಪತ್ತನ್ನು ನಮ್ಮ ದೇವಾಲಯಗಳಿಂದ ಕೊಳ್ಳೆ ಹೊಡೆದು ಆನೆ, ಒಂಟೆ, ಕುದುರೆಗಳ ಮೇಲೆ ಮತ್ತು ರಥಗಳಲ್ಲಿ ಹೇರಿಕೊಂಡು ಹೋದ ಸಂಗತಿಗಳನ್ನು ಇತಿಹಾಸ ಗ್ರಂಥಗಳಲ್ಲಿ ಓದಿದಾಗ

ಮೂಢನಂಬಿಕೆ ಸಾರ್ವತ್ರಿಕವಾದುದು. ಅದು ಒಂದಲ್ಲ ಒಂದು ರೂಪದಲ್ಲಿ ಪ್ರತಿಯೊಂದು ಜನಾಂಗದಲ್ಲೂ ಪ್ರತಿಯೊಂದು ದೇಶದಲ್ಲೂ ನೆಲಸಿದೆ. ಮೂಢನಂಬಿಕೆಯನ್ನು ಹೋಗಲಾಡಿಸಲು ನಡೆಸಿದ ಪ್ರಯತ್ನಗಳು ಅನಂತರ ಮೂಢನಂಬಿಕೆಯಾಗಿ ಪರಿವರ್ತನೆಗೊಳ್ಳುವುದು ಇತಿಹಾಸದ ಕಟಕಿಯಾಗಿ ಕಾಣುತ್ತದೆ. ಹಾಗೆಂದು ಸುಮ್ಮನೆ ಕೂರುವಂತಿಲ್ಲ, ಮನುಷ್ಯನಿಗೆ ನಂಬಿಕೆ ಬೇಕು. ಬಾಳು ನಂಬಿಕೆಯ ಮೇಲೆ ನಿಂತಿದೆ. ಆದರೆ ನಂಬಿಕೆ ವಿಚಾರದ ಮೇಲೆ ಅವಲಂಬಿತವಾಗಿ ತಾತ್ವಿಕ ಶಕ್ತಿಯಾಗಿ ಮಾನವರಲ್ಲಿ ಮೂಡುವುದು ಒಳಿತು. ಇದು ನಿರಂತರವಾಗಿ ನಡೆದಾಗ ಮೂಢನಂಬಿಕೆಗೆ ಅವಕಾಶ ಇರುವುದಿಲ್ಲ. ಇನ್ನೊಬ್ಬರು ನಂಬಿದ ವಿಷಯವನ್ನು, ನಡೆದ ಹಾದಿಯನ್ನು, ಅಂಧಾಭಿಮಾನದಿಂದ ಅನುಸರಿಸಿದಾಗ ಅದು ಮೌಢ್ಯವಾಗುತ್ತದೆ. ಮೌಢ್ಯದಲ್ಲಿ ಜೀವನವನ್ನು ಅನುಭವಿಸುವಾಗ ಚುರುಕು ಮತ್ತು ತೀವ್ರತೆ ಇರಲು ಸಾಧ್ಯವಿಲ್ಲ. ಇನ್ನೊಬ್ಬರ ಬದುಕು ನನ್ನ ಬದುಕಾಗಕೂಡದು, ನನ್ನ ಬದುಕು ನನ್ನದಾಗಬೇಕು ಎಂಬ ಜರೂರು ಬರಬೇಕು.

ಕರುಳು ಕತ್ತರಿಸಿದಂತಾಗುತ್ತದೆ. ಆಗ ಜನರು ಪೂಜಿಸುತ್ತಿದ್ದ ದೇವರುಗಳು ತಮ್ಮ ಭಕ್ತರಿಗೆ ಏನು ಮಾಡಿದವು ? ಇರಲಿ, ಚಿನ್ನ, ಬೆಳ್ಳಿ ಮುಂತಾದ ಅಮೂಲ್ಯ ಲೋಹಗಳಲ್ಲಿ ತಯಾರಿಸಿದ್ದ ದೇವರ ವಿಗ್ರಹಗಳನ್ನು ಹೊತ್ತುಕೊಂಡು ಹೋಗಲು ಸಾಧ್ಯವಾಗದೆ ಇದ್ದಾಗ ಅವುಗಳನ್ನು ಮುರಿದು, ಕತ್ತರಿಸಿ ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿದಾಗ ಈ ದೇವರುಗಳು ಏನು ಮಾಡುತ್ತಿದ್ದವು ? ತಮ್ಮನ್ನೇ ರಕ್ಷಿಸಿಕೊಳ್ಳಲಾಗದ ಈ ದುರ್ಬಲ ದೇವರುಗಳು ತಮ್ಮ ಭಕ್ತಾದಿಗಳನ್ನು ಹೇಗೆ ಕಾಪಾಡ ಬಲ್ಲರು ? ಇಂಥ ಭಯಂಕರ ಉದಾಹರಣೆಗಳ ಸತ್ಯ ಸಂಗತಿಗಳಿದ್ದರೂ ಜನತೆ ಈ ನಿಷ್ಪ್ರಯೋಜಕ ದೇವಾನುದೇವತೆಗಳಿಗೆ ಜೋತುಬಿದ್ದಿರುವುದು ಅವರ ಅಜ್ಞಾನ, ಬೇಜವಾಬ್ದಾರಿತನ, ಅಸಹಾಯಕತೆ, ಅಶಕ್ತತೆಗೆ ಹಿಡಿದ ಭೂತಗನ್ನಡಿಯಾಗಿದೆ.

ಸ್ವಶಕ್ತಿ ಮತ್ತು ಸ್ವಸಾಮರ್ಥ್ಯವನ್ನು ಮರೆತು ಹಾಗೂ ಕಡೆಗಣಿಸಿ ದೇವರನ್ನು ನಂಬಿದ ಜನರು ಬಹಳವಾಗಿ ದುರ್ಬಲರಾಗಿದ್ದಾರೆ. ಅವರ ದುರ್ಬಲತೆಗೆ ಅವರು ಪೂಜಿಸುವ ದೇವರೇ ಕಾರಣ ಎಂದು ಹೇಳಿದರೆ ಅವರು ಸಿಟ್ಟಾಗುತ್ತಾರೆ. ಸಿಟ್ಟನ್ನು ಒತ್ತಟ್ಟಿಗಿಟ್ಟು ಸತ್ಯವನ್ನು ತಿಳಿಯಬೇಕೆಂಬ ಸಾಮಾನ್ಯ ತಿಳಿವು ಅವರಿಗೆ ಇಲ್ಲದಿರುವುದು ನಿಜಕ್ಕೂ ಶೋಚನೀಯ.

ಹಿಂದೂಗಳ ಯಾವುದೇ ದೊಡ್ಡ ದೇವಸ್ಥಾನಕ್ಕೆ ಹೋದರೂ ಅಲ್ಲಿನ ಎಲ್ಲಾ ಅರ್ಚನೆಗಳ ಪೂರ್ಣ ವಿವರ ಮತ್ತು ಅವುಗಳಿಗೆ ತಗಲುವ ಮಜೂರಿಯ ದರದ ಫಲಕಗಳನ್ನು ತೂಗು ಹಾಕಿರುವುದು ಕಾಣುತ್ತದೆ. ೩೦-೧೧-೨೦೦೧ರಂದು ನಾನು ಹೋಗಿದ್ದ ಮಲೆಮಹದೇಶ್ವರ ಬೆಟ್ಟದಲ್ಲಿ ಉತ್ಸವಾದಿಗಳ ದರದ ಪಟ್ಟಿ ಹೀಗಿದೆ :

| | |
|---|---|
| ಮಹಾ ರುದ್ರಾಭಿಷೇಕ | ರೂ. ೪೦೦೦.೦೦ |
| ಅನ್ನ ಬ್ರಹ್ಮೋತ್ಸವ | ರೂ. ೧,೦೦೦.೦೦ |
| ಸಾಮ್ರಾಜ್ಯೋತ್ಸವ ಸೇವೆ | ರೂ. ೪,೦೦೦.೦೦ |

ಶೃಂಗೇರಿಯ ದಕ್ಷಿಣಾಮ್ನಾಯ ಶಾರದಾಪೀಠ ದೇಗುಲದಲ್ಲಿ ಜರುಗುವ ವಿವಿಧ ಸೇವಾ ವಿವರ ಗಳಲ್ಲಿ ಕೆಲವು ಇವು (ದಿನಾಂಕ ೦೩-೦೩-೨೦೦೧ರಂದು ನೋಡಿದಂತೆ) :

| | |
|---|---|
| ಅಕ್ಷರಾಭ್ಯಾಸ | ರೂ. ೧೦೦.೦೦ |
| ಸಪ್ತಶತಿ ಪಾರಾಯಣ | ರೂ. ೧೫೦.೦೦ |
| ಬೆಳ್ಳಿದಿಂಡಿ ಉತ್ಸವ | ರೂ. ೭೫೦.೦೦ |
| ಉದಯಾಸ್ತಮಾನ ಸೇವೆ | ರೂ. ೧,೦೦೦.೦೦ |
| ಲಕ್ಷಾರ್ಚನೆ | ರೂ. ೨,೫೦೦.೦೦ |
| ಶತರುದ್ರಾಭಿಷೇಕ | ರೂ. ೧,೫೦೦.೦೦ |
| ಚಿನ್ನದ ದಿಂಡಿ ಉತ್ಸವ | ರೂ. ೫,೦೦೦.೦೦ |




ಇವುಗಳಲ್ಲದೆ ೫೦, ೮೦, ೧೦೦ ರೂ.ಗಳ ಸೇವೆಗಳಿಗೆ ಲೆಕ್ಕವಿಲ್ಲ. ಇದು ದೇವಸ್ಥಾನದಲ್ಲಿ ನಡೆಯುತ್ತಿರುವ ನಿರಂತರ ವ್ಯಾಪಾರ; ದೇವರು ಮತ್ತು ಧರ್ಮದ ಹೆಸರಿನಲ್ಲಿ ಸಾಗಿರುವ ಹಗಲು ದರೋಡೆ. ಸಂತೇಪೇಟೆ ಅಥವಾ ಮಾರುಕಟ್ಟೆಯ ಅಂಗಡಿಗಳಿಗೆ ಹೋದರೆ ಅಲ್ಲಿ ಸಿಗುವ ಎಲ್ಲಾ ದಿನಸಿಗಳ, ಮಾರಾಟಕ್ಕಿಟ್ಟಿರುವ ವಸ್ತುಗಳ ಕ್ರಯ ಪಟ್ಟಿ ಇಟ್ಟಿರುವುದನ್ನು ನೋಡಬಹುದು. ನಮ್ಮ ದೇವಾಲಯ ಗಳಿಗೂ ಮಾರುಕಟ್ಟೆ ಅಂಗಡಿಗಳಿಗೂ ಏನಾದರೂ ವ್ಯತ್ಯಾಸವಿದೆಯೇ ? ಎರಡು ಕಡೆಯೂ ಮಾರಾಟ ನಡೆಯುತ್ತಿಲ್ಲವೇ ? ಇದೆಲ್ಲಾ ವ್ಯಾಪಾರ, ಕೇವಲ ಕೊಳಕು ವ್ಯಾಪಾರ. ಅತ್ಯಂತ ಪರಿಶುದ್ಧ ಜೀವನ ನಡೆಸಿ ಪೂಜ್ಯರಾಗಿರುವ ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಶ್ರೀ ಅರವಿಂದ, ಶ್ರೀ ರಮಣ ಮಹರ್ಷಿ ಮುಂತಾದವರ ಜೀವನ ಮತ್ತು ಉಪದೇಶಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ನಮ್ಮ ದೇವಾಲಯಗಳಲ್ಲಿ ಪರಿಪಾಠವಾಗಿರುವ ಪದ್ಧತಿಗೆ ಅವಕಾಶವಿಲ್ಲ ಎಂಬುದು ತಿಳಿಯುವುದಲ್ಲದೆ, ಈ ಪುರೋಹಿತ ಪ್ರವೃತ್ತಿ ಹಾವಳಿಯಿಂದ ಪಾರಮಾರ್ಥ ಪ್ರಾಪ್ತಿ ಆಗುವುದಿಲ್ಲವೆಂದೂ ಅರಿವಾಗುತ್ತದೆ. ದುಡ್ಡಿನಿಂದ ದೇವರು ಮತ್ತು ಧರ್ಮವನ್ನು ಕೊಂಡುಕೊಳ್ಳಲು ಖಂಡಿತ ಸಾಧ್ಯವಿಲ್ಲ. ಅನ್ಯಾಯ, ಅಧರ್ಮ, ಮೋಸದಿಂದ ಅಪಾರ ಹಣ ಸಂಪಾದಿಸಿದವರು ತಾವು ಮಾಡಿದ ಅಪರಾಧಕ್ಕೆ ಹೆದರಿ ಮನಃಶಾಂತಿಗಾಗಿ ಈ ಬಗೆಯ ಅರ್ಚನೆಗಳಿಗೆ ತಿರುಪತಿ ತಿಮ್ಮಪ್ಪನ ಹುಂಡಿಗೆ ಹಣ ಸುರಿದು ತಾವು ಧರ್ಮಾತ್ಮರೆಂದು ನಟಿಸುತ್ತಾರೆ, ಕರೆಯಿಸಿಕೊಳ್ಳುತ್ತಾರೆ. ಪಶ್ಚಾತ್ತಾಪವೇ ಪಾಪಕ್ಕೆ ಪ್ರಾಯಶ್ಚಿತ್ತ. ಪರಿಶುದ್ಧ ಜೀವನದಿಂದ ಪರೋಪಕಾರದಿಂದ ಪರಮ ಪದವಿ ಲಭಿಸುತ್ತದೆಂದು ಮಹಾತ್ಮರ ನಡೆ ನುಡಿಯಿಂದ ಗೊತ್ತಾಗುತ್ತದೆ. ದೇವಾಲಯ ಅಂದರೆ ದೇವರು ಮತ್ತು ಧರ್ಮ 'ಲಯ' (ನಾಶ)ವಾಗಿರುವ ಜಾಗ ಎಂದು ಅರ್ಥ ಬರುವಂತಾಗುತ್ತಿದೆ..

ಪಂಚಭೂತಗಳಲ್ಲಿ ಪಕ್ಷಪಾತವಿಲ್ಲ, ಅವು ಪ್ರಚಾರ ಬಯಸುವುದಿಲ್ಲ. ಅವುಗಳ ಉಪಯುಕ್ತತೆಯೇ ಅವುಗಳ ಇರುವಿಕೆಯನ್ನು ಸ್ಥಿರಪಡಿಸುತ್ತದೆ. ಪಂಚಭೂತಗಳಿಲ್ಲ ದಿದ್ದರೆ ಲೋಕವಿಲ್ಲ, ಜೀವಿಗಳಿಲ್ಲ, ಏನೊಂದೂ ಇಲ್ಲ. ಇಲ್ಲದಿರುವ ವಸ್ತುಗಳ ಬಗ್ಗೆಯೇ ಪ್ರಚಾರ ಜಾಸ್ತಿ. ಅಂತಹವುಗಳಲ್ಲಿ ದೇವರೂ ಒಂದು. ಈ ಸಂಬಂಧವಾಗಿ ಒಂದು ಜನಪದ ಕತೆ ನೆನಪಾಗುತ್ತದೆ.

ರಾಜ ತನ್ನ ರಾಜ್ಯದ ಸ್ಥಿತಿಗತಿಯನ್ನು ನೋಡಲು ವೇಷ ಮರೆಸಿಕೊಂಡು ಹೊರಟ. ಜನರ ಸುಖ ದುಃಖ, ಮಳೆ ಬೆಳೆಗಳ ಸುಭಿಕ್ಷವನ್ನು ಕಾಣುವುದು ಅವನ ಉದ್ದಿಶ್ಯ. ಕುದುರೆ ಏರಿ ಸುತ್ತಾಡಿಕೊಂಡು ಬರುವಾಗ ನೀರು ಕುಡಿಯಲು ಒಂದು ಕೆರೆಯ ಬಳಿ ಬಂದ. ಅಲ್ಲಿ ಮೂವರು ಪಡ್ಡೆ ಹುಡುಗಿಯರು ಪಾತ್ರೆ ತೊಳೆಯುತ್ತಾ, ಬಟ್ಟೆ ಒಗೆಯುತ್ತಾ ಮಾತನಾಡಿಕೊಳ್ಳುತ್ತಿದ್ದರು. ಒಬ್ಬ ಹುಡುಗಿ ಇನ್ನೊಬ್ಬಳನ್ನು 'ಯಾವುದೇ ಬಹಳ ರುಚಿ ?' ಎಂದು ಕೇಳಿದಳು. ಅದಕ್ಕೆ ಅವಳು 'ಕನ್ನಗೋಳೀ ಎಸರು ಬಹಳ ರುಚಿ' ಎಂದು ಉತ್ತರಿಸಿದಳು. ಇನ್ನೊಬ್ಬ ಹುಡುಗಿ, 'ಇಲ್ಲಕನ ಬುಡಮ್ಮಿ, ಮಳ್ಳಿಕುನ್ನೆಸರು ತುಂಬಾ ರುಚಿ' ಎಂದಳು. ಅದಕ್ಕೆ ಮೊದಲನೆಯ ಹುಡುಗಿ 'ನೀವಿಬ್ಬರೂ ಹೇಳಿದ್ದು ತಪ್ಪು ಕಣ್ರಮ್ಮಿ, ಸುಳ್ಳೇ ರುಚಿ' ಎಂದು ನಗೆ ಬೀರಿದಳು. ಇದನ್ನು ಕೇಳಿದ ರಾಜನಿಗೆ ಅತ್ಯಾಶ್ಚರ್ಯವಾಯಿತು. ಅವನ ಆಸ್ಥಾನದಲ್ಲಿದ್ದಂಥ ಮಹಾ ಮಹಾ ವಿದ್ವಾಂಸರೂ ಇಂಥ ಮಾತನ್ನು ಆಡಿರಲಿಲ್ಲ. ರಾಜನಿಗೆ ಕುತೂಹಲ ನೂರ್ಮಡಿಯಾಯಿತು. ಸುಳ್ಳೇ ಹೇಗೆ ರುಚಿ, ಎಂದು ಅರಿಯಲು ಅವನ ಆಸಕ್ತಿ ದಿಗ್ಗನೆ ಹತ್ತಿಕೊಂಡಿತು.

ನಾಡಾಡಿಯಂತೆ ಕಾಣುತ್ತಿದ್ದ ದೊರೆ ಆ ಹುಡುಗಿಯರ ಹತ್ತಿರ ಹೋಗಿ, 'ಸುಳ್ಳೇ ರುಚಿ ಅಂದ್ಯಲ್ಲ, ಮಗ, ಹೆಂಗವ್ವ ?' ಎಂದು ಕೇಳಿದ. ಅದಕ್ಕೆ ಆ ಘಟಿಂಗ ಹೆಣ್ಣು 'ಅದಿರ್ಲಿ, ನಿನ್ನ ಮ್ಯಾಗೆ ನಂಗೆ ಒಂದು ಇಷ್ಟ ಗೊತ್ತಿದೆ. ನೀನು ನಿಮ್ಮಪ್ಪನಿಗೆ ಹುಟ್ಟಿಲ್ಲ' ಎಂದುಬಿಡುವುದೇ ? ರಾಜನಿಗೆ ಸಿಟ್ಟು ಕಾಲಿನ ಬುಡದಿಂದ ನೆತ್ತಿಯವರೆಗೆ ಏರಿತು. 'ಏಯ್ ! ಏನಂದೆ ? ನಿನ್ನನ್ನು ಕತ್ತರ್ಸಿ ಹಾಕ್‌ಬುಡ್ತೀನಿ' ಎಂದು ಕತ್ತಿಯನ್ನು ಸರಕ್ಕನೆ ಎಳೆದ.

'ನನ್ಯಾಕೆ ಕತ್ತರ್ಸಿ, ಹೋಗಿ ನಿಮ್ಮವ್ವನ್ನ ಕತ್ತರ್ಸು' ಎಂದಳು ಆ ತುಂಟಿ,

ಅಪ್ರತಿಭಳಾಗದೆ. ಅವಮಾನಿತನಾದ ಅರಸ ಅರಮನೆಗೆ ಬಂದು ತನ್ನ ನೋವನ್ನು ಹೇಳಿಕೊಂಡು ರಾಜಮಾತೆಯನ್ನು ಕತ್ತರಿಸಲು ಖಡ್ಗ ಝಳಪಿಸಿ ಮುಂದಾದ. ಅವನ ತಾಯಿ ವಿಷಯವನ್ನೆಲ್ಲಾ ತಿಳಿದುಕೊಂಡು ಇದರಲ್ಲಿ ಏನೋ ಮರ್ಮ ಇದೆ ಎಂದು ಆ ಹುಡುಗಿಯನ್ನು ಕರೆತರಲು ಆ ಹಳ್ಳಿಗೆ ರಾಜಭಟರನ್ನು ಅಟ್ಟಿದ್ದಳು. ಅವರು ಆಕೆಯನ್ನು ಹುಡುಕಿ ಕರೆತಂದರು.

ಆ ಹುಡುಗಿ ಹೇಳಿದಳು : 'ನಾನು ಬರೀ ಸುಳ್ಳು ಹೇಳಿದೆ. ನೀವು ಅದನ್ನೇ ನಿಜ ಅಂತ ನಂಬಿಕೊಂಡು ನಿಮ್ಮ ತಾಯಿಯವರನ್ನು ಕಡಿಯಲು ಹೋದಿರಿ. ಈಗ ಹೇಳಿ ಸುಳ್ಳೇ ರುಚಿ, ಅಲ್ಲವೇ ?' ಎಲ್ಲರೂ ಗೊಳ್ಳೆಂದು ನಕ್ಕರು. ಈ ಕತೆ ನಗು ಉಕ್ಕಿಸಿದರೂ ಇದರಲ್ಲಿ ಗಾಢವಾದ ಅರ್ಥವಿದೆ. ಪ್ರಪಂಚ ಎಷ್ಟೆಷ್ಟೋ ಸುಳ್ಳು ವಿಷಯಗಳನ್ನೇ ಸತ್ಯವೆಂದು ನಂಬಿಕೊಂಡು ಮಾರಾಮಾರಿ ಹೊಡೆದಾಡುತ್ತಿದೆ. ಸುಳ್ಳು ಸಂಗತಿಗಳು ಲೋಕ ಕಂಟಕವಾಗಿವೆ. ಇಲ್ಲದ ದೇವರ ಬಗ್ಗೆ ಮಾನವ ಜನಾಂಗಗಳು ನಂಬಿಕೆ ಇಟ್ಟುಕೊಂಡು 'ನಮ್ಮ ದೇವರು ಹೆಚ್ಚು, ನಮ್ಮ ದೇವರು ಹೆಚ್ಚು' ಎಂದು ಹುಚ್ಚೆದ್ದು ಕಚ್ಚಾಡುತ್ತಿವೆ. ಇದಕ್ಕೆ ಸರಿಯಾದ ಮದ್ದೆಂದರೆ ಸರಿಯಾದ ಅರಿವು. ಸರಿಯಾದ ಅರಿವು ಸುಳ್ಳುಗಳ ಸಮೂಹವನ್ನು ಸಂಹಾರ ಮಾಡುತ್ತದೆ.

ಜರ್ಮನಿಯ ರಾಕ್ಷಸ ಹಿಟ್ಲರ್ (೧೮೮೯-೧೯೪೫) ಹತ್ತಿರ ಗೋಬಲ್ಸ್ ಎಂಬ ಮಂತ್ರಿ ಇದ್ದ. ಅವನದು ಪ್ರಚಾರ ಖಾತೆ. ಅವನು ಹೇಳುತ್ತಿದ್ದುದು ಪ್ರಖ್ಯಾತ ವಾಗಿದೆ : 'ನಿರಂತರ ಪ್ರಚಾರದಿಂದ ಸ್ವರ್ಗವನ್ನು ನರಕ ಎಂದೂ ನರಕವನ್ನು ಸ್ವರ್ಗ ಎಂದೂ ಜನರಿಗೆ ನಂಬಿಸಬಹುದು.' ವ್ಯಾಪಾರಿಗಳು ಮತ್ತು ಉದ್ಯಮಿಗಳು ಒಂದೇ ಸಮನೆ ತಮ್ಮ ಸರಕು ಒಳ್ಳೆಯದು, ಅತ್ಯುತ್ತಮವಾದುದು ಎಂದು ಪ್ರಚಾರ ಮಾಡುತ್ತಾರೆ. ಆಧುನಿಕ ಜಗತ್ತು ಜಾಹೀರಾತಿನ ಜಗತ್ತು. ವ್ಯಾಪಾರ ಮಾಡಿ ಲಾಭ ಕಮಾಯಿಸಲು ನಿಂತ ಅವರಿಗೂ ದೇವರು, ಧರ್ಮ, ಸ್ವರ್ಗ, ನರಕ, ಮೋಕ್ಷಗಳ ಬಗ್ಗೆ ಮಾತನಾಡುವವರಿಗೂ ಏನೂ ವ್ಯತ್ಯಾಸವಿಲ್ಲ. 'ವ್ಯಾಪಾರಂ ದ್ರೋಹ ಚಿಂತನಂ' - ವ್ಯಾಪಾರ ಎಂದರೆ ವಂಚನೆ. ದೇವರು ಮತ್ತು ಧರ್ಮ ಸುತ್ತ ಹರಡಿಕೊಂಡಿರುವ ಈ ಜಾಲ ಅಪಾಯಕಾರಿಯಾದುದು.

ಗಣಪತಿ ಹಬ್ಬವನ್ನು ಉಪಯೋಗಿಸಿಕೊಂಡು ರಾಷ್ಟ್ರೀಯತೆಯನ್ನು ಹರಡಲು ಸಾಧ್ಯ ಎಂದು ಮನಗಂಡು ಅದನ್ನು ಒಂದು ರಾಷ್ಟ್ರೀಯ ಉತ್ಸವವನ್ನಾಗಿ ಬಾಲ ಗಂಗಾಧರ ತಿಲಕ್ ಮಾಡಿದರು. ಆದರೆ ಗಣಪತಿ ಹಬ್ಬ ಮುಂದೆ ಒಂದು ದೊಡ್ಡ ದಂಧೆ ಆಗಬಹುದೆಂದು ಅವರು ಊಹಿಸದವರಾಗಿದ್ದರು. ಉದ್ದೇಶ ಉತ್ತಮವಿದ್ದ ಕೂಡಲೆ ಪರಿಣಾಮ ಪರಮೋಚ್ಚವಾಗಿರುತ್ತದೆಂದು ಹೇಳಲು ಬರುವುದಿಲ್ಲ. ಬರಬರುತ್ತಾ ಗಣಪತಿ ಹಬ್ಬ ಹಿಂದೂಗಳಲ್ಲಿ ಹರಡಿಕೊಂಡಿದೆ. ಈಗ ಅದು ಹಳ್ಳಿ ಹಳ್ಳಿಗೂ ವ್ಯಾಪಿಸಿದೆ. ಎಲ್ಲ ಕಡೆ ಜನರನ್ನು ಆವರಿಸುತ್ತಿದೆ.

ಸದ್ಯದಲ್ಲಿ ಭಾರತದ ಜನಸಂಖ್ಯೆ ೧೦೫ ಕೋಟಿಯನ್ನು ದಾಟುತ್ತಿದೆ. ಇದರಲ್ಲಿ ಹಿಂದೂಗಳೆನ್ನಿಸಿಕೊಂಡವರ ಜನಸಂಖ್ಯೆ ಸುಮಾರು ಮುಕ್ಕಾಲು ಭಾಗ ಇರಬಹುದು. ಇವರಲ್ಲಿ ಸುಮಾರು ಅರ್ಧಕ್ಕಿಂತ ಹೆಚ್ಚು ಮಂದಿ ಗಣೇಶ ಚತುರ್ಥಿಯ ಸಂದರ್ಭದಲ್ಲಿ ತಮ್ಮ ತಮ್ಮ ಮನೆಗಳಲ್ಲಿ ಅವನ ಮಣ್ಣಿನ ಮೂರ್ತಿಯನ್ನು ಇಟ್ಟು ಪೂಜಿಸುವ ಪರಿಪಾಟಲು ಮಾಡಿಕೊಂಡವರು ಇದ್ದಾರೆ. ಗಣಪತಿಯ ಮಣ್ಣಿನ ಮೂರ್ತಿಗಳು ಸುಮಾರು ೩೦-೪೦ ಕೋಟಿ ಖರ್ಚಾಗುತ್ತವೆಂದು ಭಾವಿಸೋಣ. ಇವುಗಳಲ್ಲಿ ಒಂದೊಂದಕ್ಕೆ ಅವುಗಳ ಗಾತ್ರ, ಎತ್ತರ, ಆಕಾರ, ಅಲಂಕಾರಕ್ಕೆ ತಕ್ಕಂತೆ ಸುಮಾರು ೧೦೦-೧೫೦ ರೂ. ಗಿಂತ ಹಿಡಿದು ಸಾವಿರ, ಐದು ಸಾವಿರ, ಹತ್ತು ಸಾವಿರ, ಇಪ್ಪತ್ತು ಸಾವಿರ ರೂಪಾಯಿ ಇತ್ಯಾದಿ ಬೆಲೆಬಾಳುವ ಗಣೇಶನ ಮೂರ್ತಿಗಳು ಮಾರಾಟವಾಗುತ್ತವೆ ಎಂದು ಇಟ್ಟುಕೊಳ್ಳೋಣ. ಇದಕ್ಕಾಗಿ ಸುಮಾರು ೪೦೦-೫೦೦ ಕೋಟಿ ರೂಪಾಯಿ ಗಳನ್ನು ನಮ್ಮ ಜನರು ಪ್ರತಿವರ್ಷ ಖರ್ಚುಮಾಡುತ್ತಾರೆನ್ನಬಹುದು. ಈ ಮಣ್ಣಿನ ಮೂರ್ತಿಗಳು ಎಷ್ಟು ದಿನ ಅವರ ಮನೆಯಲ್ಲಿ ಇರುತ್ತವೆ ? ಸಾಮಾನ್ಯವಾಗಿ ಒಂದು ದಿನ, ಹೆಚ್ಚು ಅಂದರೆ ಮೂರು ದಿವಸ ಮಾತ್ರ. ಇಂಥ ಒಂದು ಸಂಭ್ರಮಕ್ಕಾಗಿ ದೇಶದ ಜನತೆ ಇಷ್ಟೊಂದು ಕೋಟಿ ರೂಪಾಯಿಗಳನ್ನು ಪೋಲು ಮಾಡುವುದು ಸರಿಯೇ ಎಂದು ವಿವೇಚಿಸುವ ಅಗತ್ಯವಿದೆ. ಪ್ರತಿವರ್ಷ ವಿಗ್ರಹಗಳ ಬೆಲೆ ಏರುವುದರಿಂದ ಈ ದುಂದುವೆಚ್ಚ ವರ್ಷೇ ವರ್ಷೇ ಹೆಚ್ಚುತ್ತಾ ಹೋಗುವುದನ್ನು ಗಮನಿಸಬೇಕು. ಇದೆಲ್ಲ ವೃಥಾ ದಂಡದ ಖರ್ಚು. ಹಿಂದೂಗಳಲ್ಲಿ ಬಹಳ ಮಂದಿ ಬಡವರಾಗಿರುವುದರಿಂದ ಅವರ ಬಡತನಕ್ಕೆ ಈ ವಿವೇಕಹೀನ ವೆಚ್ಚದ ದೇವರುಗಳೇ ಕಾರಣ ಎಂದರೆ ಹುಸಿ ಭಕ್ತರು ಸಿಟ್ಟಾಗುವುದು ಸಹಜ. ಈ ನಾಮಕಾವಾಸ್ತೆ ಭಕ್ತರು ಮಣ್ಣಿನ ಗಣಪತಿಯ ಮೇಲಿನ ತಮ್ಮ ಪ್ರೀತಿಯನ್ನು ಉಸಿರಾಡುವ ಮಣ್ಣಿನ ಮಕ್ಕಳು ಮತ್ತು ಗರೀಬರ ಮೇಲೆ ತೋರಿದ್ದೇ ಆದರೆ ಅವರ ಭಕ್ತಿಗೆ ಶಕ್ತಿ ಬರುತ್ತದೆ. ತಮ್ಮ ತಪ್ಪು ಕಲ್ಪನೆಯ ದೇವರು ಮತ್ತು ಧರ್ಮವನ್ನು ಅವರು ತಿದ್ದಿಕೊಳ್ಳಲು ಸಾಧ್ಯವಾಗುತ್ತದೆ. ವಿವೇಕಾನಂದರು ಹೇಳಿದಂತೆ ಪಾಪಿಗಳು, ದರಿದ್ರರು (ಪಾಪಿ ದೇವೋಭವ; ದರಿದ್ರ ದೇವೋ ಭವ') ನಮ್ಮ ದೇವರಾಗಬೇಕು. ಜೊತೆಗೆ 'ಅಸ್ಪೃಶ್ಯ ದೇವೋ ಭವ' ಎಂದು ಸೇರಿಸಿಕೊಳ್ಳಬಹುದು. ಆಗ ನಮ್ಮ ಹೃದಯ ಅವರ ಬಗ್ಗೆ ಆರ್ದ್ರವಾಗುತ್ತದೆ. ಒಡಹುಟ್ಟಿದ ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ಹೀನಸ್ಥಿತಿಯಲ್ಲಿ ಇದ್ದರೆ ಹೇಗೆ ನಾವು ಮಮ್ಮಲ ಮರಗುತ್ತೇವೆಯೋ, ಅವರ ನೆರವಿಗೆ ಹೋಗುತ್ತೇವೆಯೋ ಹಾಗೆ ಈ ನತದೃಷ್ಟರ ಮೇಲಿನ ನಮ್ಮ ಪ್ರೀತಿ ಅರ್ಥವಂತಿಕೆಯನ್ನು ಪಡೆಯುತ್ತದೆ. ಮಾನವೀಯ ಭಾವನೆಯಿಂದ ಮಾನವ ಭ್ರಾತೃತ್ವ ಆಚರಣೆಗೆ ಬರುತ್ತದೆ. ಸಹಮಾನವರನ್ನು ಪ್ರೀತಿಸುವುದು, ಅವರ ನೆರವಿಗೆ ಧಾವಿಸುವುದೇ ನಿಜವಾದ ಭಕ್ತಿ.

ಆರ್ಥಿಕವಾಗಿ ಗಣೇಶನ ಹಬ್ಬ ರಾಷ್ಟ್ರಕ್ಕೆ ಕೋಟ್ಯಂತರ ರೂಪಾಯಿಗಳ ನಷ್ಟವನ್ನುಂಟು ಮಾಡುವುದೇ ಅಲ್ಲದೆ, ವಾಯುಮಾಲಿನ್ಯ, ಜಲಮಾಲಿನ್ಯಕಾರಿ ಆಘಾತಗಳನ್ನು ತರುತ್ತಿದೆ. ಒಂದೆರಡು ದಿನಗಳಲ್ಲಿ ಜನರು ತಾವು ಕೊಂಡು ತಂದು ಪೂಜಿಸಿದ ಮಣ್ಣಿನ ಗಣಪತಿಗಳನ್ನು ತಮ್ಮ ಹತ್ತಿರದ ಕೆರೆಗಳಲ್ಲಿ, ಹೊಂಡಗಳಲ್ಲಿ ಅಥವಾ ಹೊಳೆಗಳಲ್ಲಿ ವಿಸರ್ಜನೆ ಮಾಡುತ್ತಾರೆ. ಈ ಮಣ್ಣಿನ ಮೂರ್ತಿಗಳ ಜೊತೆ ಬಾಳೆಕಂಬ, ಹೂಮಾಲೆ, ಎಲೆ ಇತ್ಯಾದಿಗಳನ್ನು ನೀರಿಗೆ ಬಿಡುತ್ತಾರೆ. ಇದರಿಂದ ನೀರು ವಿಪರೀತ ಕಲುಷಿತವಾಗುತ್ತದೆ. ಹೆಚ್ಚು ಕೊಳಕು ಮಾಡುವುದೇ ಅಧಿಕ ಧಾರ್ಮಿಕತೆ ಎಂದು ಜನರು ತಿಳಿದುಕೊಂಡಿರುವಂತಿದೆ. ಪ್ರತಿ ವರ್ಷ ಈ ಮೃತ್ತಿಕಾ ಮೂರ್ತಿ ಗಳನ್ನು ಕೆರೆ ಕಟ್ಟೆ ನದಿಗಳಿಗೆ ಬಿಡುವುದರಿಂದ ಅವುಗಳ ಆಳ ಕಡಿಮೆಯಾಗುತ್ತದೆ. ಹಿಂದೆಯಾದರೆ ನೀರು ಬತ್ತಿದಾಗ ರೈತರು ತಮ್ಮ ಊರಿನ ಕೆರೆಯ ಗೋಡನ್ನು ಹೊಡೆಯುತ್ತಿದ್ದುದರಿಂದ ಕೆರೆಗಳಲ್ಲಿ ಹೂಳೆತ್ತಿದಂತಾಗುತ್ತಿತ್ತು. ಅವುಗಳ ಆಳ ಹೆಚ್ಚುತ್ತಿತ್ತು. ಆದರೆ ಈಚೆಗೆ ರಾಸಾಯನಿಕ ಗೊಬ್ಬರಗಳು ಬಂದುಬಿಟ್ಟಿರುವುದರಿಂದ ಈ ಸಹಜ ಹೂಳೆತ್ತುವಿಕೆ ಕೆಲಸ ನಿಂತುಹೋಗಿದೆ. ರಾಸಾಯನಿಕ ಗೊಬ್ಬರಗಳನ್ನು ಹಾಕುವುದರಿಂದ ನಿಸರ್ಗದ ನೇಗಿಲುಗಳಾಗಿರುವ ಎರೆಹುಳುಗಳು ನಾಶವಾಗಿ ಮಣ್ಣು ಫಲವಂತಿಕೆ ಕಳೆದುಕೊಂಡು ಬೆಟ್ಟೆಯಾಗುತ್ತಿದೆ. ಇದಲ್ಲದೆ ಇನ್ನೂ ಮುಖ್ಯವಾಗಿ ಗಮನಿಸಬೇಕಾದ ಅಂಶ ಎಂದರೆ, ಗಣೇಶನ ಮೂರ್ತಿಗಳಿಗೆ ಹಚ್ಚಿರುವ ನಾನಾ ಬಣ್ಣಗಳು ಕರಗಿ ನೀರಿನಲ್ಲಿ ಬೆರೆತುಹೋಗುತ್ತವೆ. ಇದರಿಂದ ಜಲಚರ ಜೀವಿಗಳಿಗೆ ಅಪಾಯವಿದೆ. ಆ ನೀರನ್ನು ನರರು ಕುಡಿಯುವುದರಿಂದ ನಪುಂಸಕತ್ವ ಉಂಟಾಗುತ್ತದೆ. ವೀರ್ಯಾಣುಗಳ ಉತ್ಪತ್ತಿ ಕಡಿಮೆ ಯಾಗುತ್ತದೆ. ವಿಷಮಯ ಸೀಸಯುಕ್ತ ಬಣ್ಣದ ಗೌರಿ ಗಣೇಶ ವಿಗ್ರಹಗಳನ್ನು ನದಿ ಕೆರೆ ಬಾವಿಗಳಿಗೆ ಬಿಡುವುದರಿಂದ ಅನೇಕ ದುಷ್ಪರಿಣಾಮಗಳು ಉಂಟಾಗುತ್ತಿವೆ. ಈ ಬಣ್ಣದ ಮೂರ್ತಿಗಳಲ್ಲಿರುವ ಸೀಸ ನೀರಿನಲ್ಲಿ ತೀರ ಸ್ವಲ್ಪ ಪ್ರಮಾಣದಲ್ಲಿ ಸೇರಿದರೂ ಬುದ್ಧಿಮಾಂದ್ಯತೆ, ಮೂತ್ರಪಿಂಡದ ಕಾಯಿಲೆ, ಹೃದಯರೋಗ, ರಕ್ತಹೀನತೆ, ಪಿತ್ತಕೋಶ ಹಾಗೂ ಮಿದುಳಿನ ಕ್ರಿಯೆ ಅಸ್ತವ್ಯಸ್ತವಾಗು ವಂತಹ ಭೀಕರ ಸಮಸ್ಯೆಗಳಿಗೆ ತುತ್ತಾಗಬೇಕಾಗುತ್ತದೆ. ಸೀಸ ಮಿಶ್ರಿತ ನೀರನ್ನು ಗರ್ಭಿಣಿಯರು ಕುಡಿದರೆ ಭ್ರೂಣದ ಮೇಲೆ ಘೋರ ಪರಿಣಾಮವಾಗಿ ಅಂಗವಿಕಲ ಮಕ್ಕಳೂ ಹುಟ್ಟಬಹುದೆಂದು ವೈದ್ಯಕೀಯ ವರದಿಗಳು ಬಂದಿವೆ. ದೇವರು ಎಷ್ಟು ಅಪಾಯಕಾರಿ ನೋಡಿ !

ಇನ್ನು ಹಬ್ಬದ ಸಂದರ್ಭದಲ್ಲಿ ಅಪಾರವಾಗಿ ಪಟಾಕಿ ಸಿಡಿಸುತ್ತಾರೆ. ಇದರಿಂದ ಎಷ್ಟೊಂದು ವಾಯುಮಾಲಿನ್ಯ, ಶಬ್ದಮಾಲಿನ್ಯವಾಗುತ್ತದೆಂದು ತಿಳಿಯಬೇಕಾಗಿದೆ. ಹಬ್ಬದ ಹೆಸರಿನಲ್ಲಿ ದೇವರ ಮೆರವಣಿಗೆ ಮತ್ತು ಆರಾಧನೆಯಲ್ಲಿ ಜನರು ಎಷ್ಟು ಅಪರಿಮಿತ ಹಣವನ್ನು ದುರ್ವ್ಯಯ ಮಾಡುತ್ತಾರೆಂದು ತಣ್ಣಗೆ ಯೋಚಿಸುವುದು ಅತ್ಯಂತ ಜರೂರಾದ ಕರ್ತವ್ಯವಾಗಿದೆ.

ಹಬ್ಬಗಳು ಖರ್ಚು, ಮೌಢ್ಯ, ಬಡತನವನ್ನು ತರುವುದರ ಜೊತೆಗೆ ಕೋಮುಗಲಭೆಗಳನ್ನು ಹುಟ್ಟುಹಾಕಿ ಜನಜೀವನವನ್ನು ಬಗ್ಗಡ ಮಾಡುತ್ತಿವೆ. ಮೊಹರಂ ಗಲಾಟೆಗಳು, ಗಣೇಶನ ಗದ್ದಲಗಳು ಒಂದೊಂದು ರೀತಿಯಲ್ಲಿ ಒಂದೊಂದು ತೆರನಾಗಿವೆ. ಒಂದು ಕೋಮಿನವರು ಇನ್ನೊಂದು ಕೋಮಿನವರ ಅಂಗಡಿ ಮುಂಗಟ್ಟುಗಳನ್ನು ಧ್ವಂಸ ಮಾಡುವುದು, ತಮ್ಮ ವೈರಿಗಳ ಆಸ್ತಿಪಾಸ್ತಿ ಗಳನ್ನು ಸುಡುವುದು ಸಾಮಾನ್ಯ ಸಂಗತಿಯಾಗಿಬಿಟ್ಟಿದೆ. ಇವೆಲ್ಲ ಅಜ್ಞಾನ, ಅಸೂಯೆಗಳಿಂದ ನಡೆಯುವ ಅನಾಗರಿಕ ಕೃತ್ಯಗಳಾಗಿವೆ. ಭಾರತೀಯರು ಇನ್ನೂ ಬರ್ಬರ ಸ್ಥಿತಿಯಲ್ಲೇ ಇದ್ದಾರೆ ಎಂಬುದನ್ನು ಈ ಕೃತ್ಯಗಳು ಜಗತ್ತಿಗೆ ತೋರಿಸುತ್ತಿವೆ. ಇದು ನಮ್ಮ ದೇಶದ ಸಂಪತ್ತು. ಇವುಗಳನ್ನು ನಾಶಪಡಿಸಿದರೆ ನಮ್ಮ ರಾಷ್ಟ್ರೀಯ ಐಶ್ವರ್ಯಗಳನ್ನು ಹಾಳುಗೆಡವುತ್ತೇವೆಂದು ಜನರಿಗೆ ಅರಿವು ಮೂಡಿಸಬೇಕು. ಅರಿವನ್ನು ಉಪನ್ಯಾಸ ಚರ್ಚೆ ಪ್ರಚಾರ ಪ್ರಕಟಣೆಗಳ ಮೂಲಕ ತರಬೇಕಾಗಿದೆ.

ನಂಜನಗೂಡು, ತಿರುಪತಿ, ಧರ್ಮಸ್ಥಳ ಮುಂತಾದ ದೇವಸ್ಥಾನಗಳು ಮತ್ತು ಯಾತ್ರಾ ಸ್ಥಳಗಳಿಗೆ ಹೋಗುವ ಜನರು ತಮ್ಮ ತಲೆಯನ್ನು ಮುಡಿ ಕೊಡುವ ಪದ್ಧತಿ ಇಟ್ಟುಕೊಂಡಿದ್ದಾರೆ. ನಮ್ಮ ದೇವರುಗಳೆಲ್ಲ ತಲೆಯನ್ನೇ ಕೇಳುತ್ತಿವೆ ಏಕೆ ? ತಲೆ ಇದ್ದರೆ ಅಲ್ಲವೇ ತೊಂದರೆ ? ಆದ್ದರಿಂದ

ತಲೆ ತೆಗೆಯುವ ಕೆಲಸ ನಿರಂತರವಾಗಿ ನಮ್ಮ ಮತೀಯ ವ್ಯವಸ್ಥೆಯಲ್ಲಿ ನಡೆಯುತ್ತ ಬಂದಿದೆ. ನಮ್ಮ ಜನರು ಸಹ ಕಿಲಾಡಿಗಳೇ, ಎನ್ನಬೇಕಾಗಿದೆ. ಏಕೆಂದರೆ, ಅವರು ತಮಗೆ ಬೇಡವಾದ ತಲೆಗೂದಲನ್ನು ಮಾತ್ರ ದಾನ ಕೊಡುತ್ತಿದ್ದಾರೆ. ಇದರಿಂದ ಅವರಿಗೆ ಯಾವ ಖರ್ಚು ಇಲ್ಲ! ನಷ್ಟವೂ ಇಲ್ಲ!!

ತಲೆ ಬೋಳಿಸಿಕೊಳ್ಳುವುದು ವಿಚಾರ ಶಕ್ತಿಯನ್ನು ಬೋಳಿಸಿಕೊಳ್ಳುವುದಕ್ಕೆ ಸಂಕೇತವಾಗಿದೆ. ಇಂಥ ತೀರ್ಥ ಕ್ಷೇತ್ರಗಳಿಗೆ ಹೋಗಿ ಬರಲು ಸಾವಿರಾರು ರೂ.ಗಳು ಖರ್ಚಾಗುತ್ತವೆ. ಅದಕ್ಕೆಲ್ಲ ಸಾಲ ಮಾಡುವವರ ಸಂಖ್ಯೆ ಅಪಾರವಾಗಿದೆ. ಇದಕ್ಕೆ ಬದಲಾಗಿ ಜನರು ತಾವು ಇರುವ ಕಡೆಯೇ ಇದ್ದುಕೊಂಡು ಒಳ್ಳೆಯ ಕೆಲಸ ಮಾಡಿದರೆ ಅವರಿಗೆ ಎಲ್ಲಾ ತೀರ್ಥ ಸ್ನಾನಾದಿಗಳ ಫಲ ದೊರೆಯುತ್ತದೆ ಎಂಬ ಮನವರಿಕೆಯ ಧೈರ್ಯ ಬರಬೇಕು.

ಗಣಪತಿಯ ಮಣ್ಣಿನ ಪ್ರತಿಮೆಗಳನ್ನು ಕೊಂಡು ತಂದು ಒಂದೆರಡು ದಿನದಲ್ಲೇ ನೀರಿಗೆ ಬಿಡುವುದು, ಪಟಾಕಿಗಳನ್ನು ಎಗ್ಗಾಮುಗ್ಗಾ ಸುಡುವುದು, ಮೆರವಣಿಗೆ ಮಾಡುವುದು ಮುಂತಾದ ಚಟುವಟಿಕೆಗಳಿಗಾಗಿ ಎಷ್ಟೊಂದು ಕೋಟಿ ರೂಪಾಯಿಗಳನ್ನು ನಾವು ವ್ಯರ್ಥ ಮಾಡುತ್ತಿದ್ದೇವೆಂದು ದೇಶದ ಜನತೆ ತೀವ್ರವಾಗಿ ಆಲೋಚಿಸಬೇಕಾಗಿದೆ. ಇದೇ ಕೋಟ್ಯಂತರ ರೂಪಾಯಿಗಳ ಅಪಾರ ಹಣವನ್ನು ಅವರು ತಮ್ಮ ಸಮಾಜದ ಊರಿನ, ರಾಜ್ಯದ, ರಾಷ್ಟ್ರದ ಶಾಲೆ ಕಾಲೇಜುಗಳನ್ನು ಕಟ್ಟಲು, ರಸ್ತೆಗಳನ್ನು ದುರಸ್ತಿ ಮಾಡಿಸಲು, ಚರಂಡಿಗಳನ್ನು ಚೊಕ್ಕಟ ಮಾಡಲು, ಸಮುದ್ರಗಳಿಗೆ ಸುಮ್ಮನೆ ಹರಿದುಹೋಗುವ ಹೊಳೆಗಳ ನೀರನ್ನು ಹಿಡಿದಿಡಲು ಅಣೆಕಟ್ಟುಗಳನ್ನು ಜಲಾಶಯಗಳನ್ನು ನಿರ್ಮಿಸಲು ಇತ್ಯಾದಿ ರಚನಾತ್ಮಕ ಕೆಲಸಗಳಿಗೆ ಬಳಸಿದರೆ ಎಷ್ಟೊಂದು ಪ್ರಯೋಜನಕಾರಿ ಆಗುತ್ತದೆಂದು ಚಿಂತಿಸಬೇಕು. ಪೋಲಾಗುವ ಹಣವನ್ನು ಸಂಗ್ರಹಿಸಿ ರಾಷ್ಟ್ರ ನಿರ್ಮಾಣ ಕಾರ್ಯಕ್ಕೆ ನೀಡುವುದ

# ಈ ಸುಂದರ ಭೂಮಿಯ ಮೇಲೆ



ಧರ್ಮ ಸೈತಾನವಲ್ಲ ಕೊಲ್ಲುವವನಲ್ಲ ದೇವರು
ಸುಮ್ಮ ಸುಮ್ಮನೆ ಕಚ್ಚಾಡುವರು ಬದುಕ-
ಲೊಲ್ಲದವರು
ಕಟ್ಟುವುದಿದೆ ಈ ಸುಂದರ ಭೂಮಿಯ ಮೇಲೆ
ಇನ್ಸಾನಿಯತ್ ಮಹಲು
ಸೋದರತೆಯ ತುಂಬುಹೊಳೆ ಹರಿಸಬೇಕಿದೆ
ಹಚ್ಚಹಸುರಿನಲಿ ಜೀವಗಂಧದ ಹೂಕುಸುರು
ನಲಿಸುವ ತುಡಿತವಿದೆ
ಆದರೆ ಮೂಗು ತೂರುತ್ತಾಳೆ ಜಾತಿ ಎಂಬ ಚಿನಾಲಿ
ನೆಮ್ಮದಿ ಕೆಡಿಸುತ್ತಾಳೆ ಗಬ್ಬುಗೌಲಿನಲಿ

ಇವರದು ಕೇಸರಿ, ಅವರದು ಹಸಿರು
ಬಿಳಿ ಮತ್ತೊಬ್ಬರದು
ದಿಕ್ಕುದಿಕ್ಕಿಗೂ ಸ್ವಂತದ್ದೆ ಧ್ವಜ
ಎತ್ತುವರು, ತಮ್ಮ ಹಾಡೇ ಕಿರಚುವರು
ಉರುಳದೆ ನರಳಿದರೇನು ಅಶೋಕ ಚಕ್ರ ?
ಮತಾಂಧ ಬುದ್ಧಿಯೇ ವಕ್ರ !

ರಾಷ್ಟ್ರಾಭಿಮಾನದ ತ್ರಿವರ್ಣಧ್ವಜ ವಂದನ
ಭಾರತೀಯತೆ ಹೆಪ್ಪುಗಟ್ಟಿಸುವ ಜನಗಣಮನ
ಸಾರೆ ಜಹಾಂಸೆ ಅಚ್ಛಾ ಗೀತೆಗೆ ಸಲ್ಲಬೇಕಿದೆ
ಮೊದಲ ಗೌರವ ಸಮ್ಮಾನ.

ಅವರಿಗೆ ಅವರವರದೆ, ಇವರಿಗೆ ಇವರಿವರದೆ
ಸಿದ್ಧಾಂತ, ಹೃದಯ ಕೆಡಿಸುವ ಕೋಮು ಭ್ರಾಂತ
ಹುಳುಕು ಮುಚ್ಚಿಕೊಳ್ಳಲು ಇತಿಹಾಸದ ಹುಡುಕಾಟ
ಅಭಿಯಾನ, ಯಾತ್ರೆ, ಪೂಜೆ, ಆರತಿ, ಜುಲೂಸ್
ಜೀವಸಂಕುಲ ಕೊಲ್ಲಲು ಸರಳಸೂತ್ರ
ನೇಪಥ್ಯದಲ್ಲಿ ಅಸುರಿಗಳ ಪಾತ್ರ.

ಚೂರಿ ಹಾಕಿಸಿಕೊಂಡವನು ಹಿಂದೂವೋ ?
ಮುಸ್ಲಿಮನೋ ? ಜೈನನೋ... ಬೌದ್ಧನೋ ?
ಶಿಖ್ಖನೋ ? ಕ್ರಿಶ್ಚಿಯನ್ನೋ ? ಕೆಂಪುರಕ್ತ
ಚೆಲ್ಲಾಡಿದ್ದು ಅಲ್ಲ ಮಿಥ್ಯ
ಅದು ಒಂದಾಗಿ ಹರಿದದ್ದು ಸತ್ಯ

ಸತ್ತವರಲ್ಲಿ ಯಾರು ಹೆಚ್ಚು ?
ರಕ್ಕಸರಿಗೆ ತಲೆಗಳೆಣಿಕೆಯ ಹುಚ್ಚು
ಹೆಣವಾಗುವ ಪವಿತ್ರ ಜೀವಗಳ
ರುಂಡಮಾಲೆ ಧರಿಸುವ ಕೆಚ್ಚು

ಪ್ರೀತಿಯ ಸೋದರರೆ
ಬೀಸುಕಲ್ಲಿನಂತೆ ಇಂದಿನ ರಾಜಕೀಯ
ಪುಡಿಮಾಡದೆ ಬಿಡುವುದಿಲ್ಲ

ಅಧಿಕಾರ, ಪುರೋಹಿತಶಾಹಿಗಳು
ಬೆಳಗಿಸುವುದಿಲ್ಲ ಹೊಸ ಸೂರ್ಯನನ್ನು
ವಿಷದ ಹೊರತು ಅಮೃತ ಕುಡಿಸುವುದಿಲ್ಲ
ಸಿಕ್ಕುವುದಿಲ್ಲ ಕತ್ತಲಲ್ಲಿ ಹುಡುಕಿದರೆ ಬೆಳಕು;
ಪ್ರೀತಿಯ ಬದುಕು
ಸಮಾನತೆ ಹಗ್ಗ ಹಚ್ಚದೆ ಎಳೆಯುವುದಿಲ್ಲ
ಏಕತೆಯ ತೇರು
ತಿಳಿಯಬೇಕಿದೆ ನಾವು ಭಾರತೀಯರು.

ಅಬ್ಬಾಸ್ ಮೇಲಿನಮನಿ
ಹುಸೇನಪೇಟ, ಗುಳೇದಗುಡ್ಡ - ೫೮೭ ೨೦೩

ರಿಂದ ನಮ್ಮ ರಾಷ್ಟ್ರವನ್ನು ನಾವು ಭವ್ಯ ರೀತಿಯಲ್ಲಿ ಕಟ್ಟಿದಂತೆ ಆಗುತ್ತದಲ್ಲವೇ? ಆದರೆ ಮನುಷ್ಯ ಕೆಟ್ಟು ಸಹಿಸುತ್ತಾನೆಯೇ ಹೊರತು ಕೊಟ್ಟು ಸಹಿಸುವುದಿಲ್ಲ! ಎಲ್ಲವನ್ನೂ ಸರ್ಕಾರವೇ ಮಾಡಬೇಕು ಎಂದು ನಿರೀಕ್ಷಿಸುವುದು ಪ್ರಜ್ಞಾವಂತ ಜವಾಬ್ದಾರಿಯುತ ಪ್ರಜೆಗಳ ಧೋರಣೆಯಲ್ಲ. ಸರ್ಕಾರಕ್ಕೆ, ಪುರಸಭೆಗಳಿಗೆ, ನಗರ ಪಾಲಿಕೆಗಳಿಗೆ ಹಣ ಎಲ್ಲಿಂದ ಬರುತ್ತದೆ? ಜನರಿಂದ ತೆರಿಗೆಗಳ ಮೂಲಕ ಅಲ್ಲವೇ? ಆದ್ದರಿಂದ ಜನತೆಯೇ ಈ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದನ್ನು ಕಲಿಯುವುದು ಅಗತ್ಯವಾಗಿದೆ. ಸ್ವಯಂ ಆಡಳಿತವೇ ಅತ್ಯುತ್ತಮ ಆಡಳಿತ, ಫಲಕಾರಿಯಾದ ಆಡಳಿತ. ಇದು ಬೆಳೆದ ನಾಗರಿಕ ಸಮಾಜದ ಫಲಪ್ರದ ಆಳ್ವಿಕೆ. ಪ್ರಜಾಧಿಪತ್ಯವೇ ಪರಮಾಧಿಕಾರ, ಪ್ರಾತಿನಿಧಿಕ ಪ್ರಜಾಪ್ರಭುತ್ವವಲ್ಲ.

ಮೌಢ್ಯ ಸರ್ವವ್ಯಾಪಕವಾಗಿ ಅಮರವೇನೋ ಎಂಬ ಭಾವನೆಯನ್ನು ತಂದುಕೊಡುತ್ತಿದೆ. ಇದಕ್ಕೆ ಚಲನಚಿತ್ರಗಳು ಪ್ರಮುಖವಾಗಿ ಕಾರಣವಾಗಿವೆ. ಏನೇನೋ ಮಹಾತ್ಮೆಗಳು, ಎಂತೆಂಥವೋ ಪೂಜಾಫಲಗಳು, ಇನ್ನೇನೋ ದರ್ಶನಗಳು ಎಂಬ ಹೆಸರಿನಲ್ಲಿ ಜನರನ್ನು ರಂಜಿಸುವ ನೆಪದಲ್ಲಿ ಅವರನ್ನು ವ್ಯವಸ್ಥಿತವಾಗಿ ವಂಚಿಸಲಾಗುತ್ತಿದೆ. ಸಿನಿಮಾದಲ್ಲಿ ಬರುವ ನಾನಾ ಬಗೆಯ ಮನೋರಂಜನೆಗಳು, ರಾತ್ರಿಕೂಟಗಳು, ಕಾಮಕೇಳಿಗಳು ಆಹ್ಲಾದವನ್ನುಂಟುಮಾಡುತ್ತ ಪ್ರೇಕ್ಷಕರ ಮನಸ್ಸನ್ನು ಅಪಹರಿಸುತ್ತಿವೆ. ಇದು ಸರಿಯೇ ತಪ್ಪೇ ಎಂಬ ವಿವೇಚನೆ ಇಲ್ಲದ, ಮನಸ್ಸು ಬಲಿಯದ ಯುವ ಚೇತನಗಳು ಮೈಯನ್ನು ಚುಮು ಚುಮುಗೊಳಿಸುವ ದೃಶ್ಯಾವಳಿಗಳಿಂದ ಪ್ರಭಾವಿತರಾಗುತ್ತಾರೆ. ಅವುಗಳನ್ನೆಲ್ಲ ಕಾರ್ಯರೂಪಕ್ಕೆ ಇಳಿಸುವ ರೋಚಕತೆಗೂ ತುತ್ತಾಗುತ್ತಾರೆ. ಸಿನಿಮಾ ಕುದಿಯುವ ಮಾಧ್ಯಮ. ಮನುಷ್ಯನ ಎಲ್ಲಾ ಇಂದ್ರಿಯಗಳಿಗೂ ಕೆಲಸ ಕೊಟ್ಟು ಅವನನ್ನು ಉಕ್ಕಿಸುವ ಮಾಧ್ಯಮ ದೂರದರ್ಶನ.

ನಟ ರಾಜ್‌ಕುಮಾರ್‌ನನ್ನು ಕಾಡುಗಳ್ಳ ವೀರಪ್ಪನ್ ತನ್ನ ಒತ್ತೆಯಾಳಾಗಿ ಇಟ್ಟುಕೊಂಡಿದ್ದ ಸಮಯದಲ್ಲಿ ಕನ್ನಡ ಚಲನಚಿತ್ರ ಕಲಾವಿದರ ಮೌಢ್ಯ ಬಹಿರಂಗವಾಯಿತು. ಅವರ ಅಜ್ಞಾನದ ಪರಮಾವಧಿ ಬಯಲಾಯಿತು. ಎಲ್ಲ ದೇಗುಲಗಳಲ್ಲಿ ಎಲ್ಲಾ ಬಗೆಯ ಪೂಜೆಗಳಾದವು, ಅರ್ಚನೆಗಳಾದವು, ಅಭಿಷೇಕಗಳಾದವು. ಕಲಾವಿದರು ಉರುಳು ಸೇವೆ ಮಾಡಿದರು. ಆದರೂ ರಾಜ್‌ಕುಮಾರ್ ಬಿಡುಗಡೆಯಾಗಲಿಲ್ಲ. ರಾಜ್‌ಕುಮಾರ್ ಅವರು ನಟಿಸಿರುವ ಅಸಂಖ್ಯಾತ ಚಿತ್ರಗಳಲ್ಲಿ ಭಕ್ತಿಪಾತ್ರವನ್ನು ಅನ್ಯಾದೃಶವಾಗಿ ನಿರ್ವಹಿಸಿರುವುದನ್ನು ನೋಡಬಹುದು. ಅವರ ಭಕ್ತಿಗೆ ಮೆಚ್ಚಿ ದೇವರು ಪ್ರತ್ಯಕ್ಷವಾಗಿದ್ದಾನೆ. ಅವರ ಭಕ್ತಿ ಸತ್ತ ಮಗುವನ್ನು ಸಿನಿಮಾದಲ್ಲಿ ಬದುಕಿಸಿದೆ. ಹೀಗೆ ಏನೇನೋ ಪವಾಡಮಯ ಕೃತ್ಯಗಳು ಬೆಳ್ಳಿ ತೆರೆಯ ಮೇಲೆ ಬರುತ್ತವೆ. ಅವರ ಭಕ್ತಿ ನಿಜವಾಗಿದ್ದರೆ, ಅದಕ್ಕೆ ಶಕ್ತಿ ಇದ್ದರೆ, ಅವರ ಕತೆಗಳು ವಾಸ್ತವಿಕವಾದರೆ ಅವರ ದೇವರು ಬಂದು ಅವರನ್ನು ವೀರಪ್ಪನ್‌ನಿಂದ ಬಿಡುಗಡೆ ಮಾಡಿಸಬೇಕಿತ್ತು. ಈ ಅವಧಿಯಲ್ಲಿ ರಾಜ್‌ಕುಮಾರ್ ಭಕ್ತರು ಏನೇನೋ ಆಚರಣೆಗಳನ್ನು ನೆರವೇರಿಸಿದರು. ಆದರೂ ರಾಜ್‌ಕುಮಾರ್‌ನನ್ನು ವೀರಪ್ಪನ್ ಬಿಡಲಿಲ್ಲ. ಇದರಿಂದ ಮೂಢನಂಬಿಕೆಗಳಿಂದ ಮೂಢಾಚಾರಗಳಿಂದ ಏನೂ ಆಗುವುದಿಲ್ಲ ಎಂದು ಖಚಿತವಾಯಿತು. ನಮ್ಮ ನಟನಟಿಯರಿಗೆ ವಸ್ತುಸ್ಥಿತಿ ಏನೂ ಗೊತ್ತಿಲ್ಲ. ಅವರು ಯಾರೋ ಬರೆದುಕೊಟ್ಟದ್ದನ್ನು ಬಾಯಿಪಾಠ ಮಾಡಿ ಒಪ್ಪಿಸುವ ಅಭಿನಯ ಪಟುಗಳು ಅಷ್ಟೇ. ದೇವರು, ಧರ್ಮ, ಉತ್ಸವ, ಆರಾಧನೆ, ಭಜನೆ ಮುಂತಾದವುಗಳಿಗೆ ಎಷ್ಟೊಂದು ಕಾಲಹರಣ, ಹಣ ಮತ್ತು ಶಕ್ತಿಗಳು ವ್ಯಯವಾಗುತ್ತವೆಂದು, ಇದೆಲ್ಲ ಮಾನವ ಗಂಟೆಗಳ ಅಪವ್ಯಯ ಎಂದು ತಿಳಿಯಬೇಕಾಗಿದೆ. ಮನುಷ್ಯರ ತಿಳಿವಳಿಕೆಗೆ ತಕ್ಕಂತೆ ಅವರ ಶಕ್ತಿ ಇರುತ್ತದೆ.

ಸತ್ತವರನ್ನು ಸುಟ್ಟು ಅವರ ಅಸ್ಥಿ ಮತ್ತು ಭಸ್ಮಗಳನ್ನು ಶ್ರೀರಂಗಪಟ್ಟಣದ ಪಶ್ಚಿಮ ವಾಹಿನಿಯಲ್ಲಿ ಹಾಗೂ ಇನ್ನಿತರ ನದಿಗಳಲ್ಲಿ ವಿಸರ್ಜನೆ ಮಾಡುವುದು ನಮ್ಮ ಜನರ ಹವ್ಯಾಸವಾಗಿದೆ. ಕಾಶಿಯಲ್ಲಿ, ಗಂಗಾನದಿಯ ನೀರಿನಲ್ಲಿ, ತೇಲುವ ಹೆಣಗಳ ರಾಶಿಗಳನ್ನು ನೋಡಬಹುದು. ಇದರಿಂದ ನೀರು ಕೆಡುತ್ತದೆ. ಗಂಗಾನದಿಯ ನೀರು ಎಷ್ಟು ಕೊಳಕಾಗಿದೆ ಎಂದರೆ ಅದನ್ನು ಮುಟ್ಟುವುದಕ್ಕೂ ಅಸಹ್ಯವಾಗುತ್ತದೆ. ಅದರಲ್ಲಿ ಸ್ನಾನ ಮಾಡಿದರೆ ವಿವಿಧ ಬಗೆಯ ಚರ್ಮವ್ಯಾಧಿಗಳು ಅಂಟುತ್ತವೆ ಎಂಬುದರಲ್ಲಿ ಅನುಮಾನವಿಲ್ಲ. 'ಪವಿತ್ರ' ಅಮರ ನದಿಯ ನೀರು ಅಷ್ಟೊಂದು ಕೆಟ್ಟು ಗಬ್ಬೆದ್ದುಹೋಗಿದೆ. ಪವಿತ್ರ ಎಂದು ಅದನ್ನು ಕುಡಿದರೆ, ಕುಡಿಸಿದರೆ ಆರೋಗ್ಯ ಕೆಡುವುದಂತೂ ನಿಶ್ಚಯ. ಅವರಿಗೆ ಮೋಕ್ಷ ಸಿಗುತ್ತದೋ ಇಲ್ಲವೋ ಅನಿಶ್ಚಯ. ಅದನ್ನು ಕುಡಿದರೆ ಅವರು ಪರಂಧಾಮವನ್ನೈದುವುದಂತೂ ಖಂಡಿತ. ಆದ್ದರಿಂದ ದೈವಭಕ್ತಿ ಬಿತ್ತರಿಸುವ ಭಾವುಕತನ ಅತ್ಯಂತ ಮಾರಕವಾಗಿದೆ. ಮತ ಒಂದು ಅಂಟು ರೋಗ, ಮತ ಲೋಕ ಮೈತ್ರಿಗೆ ವಿಷಕಾರಿಯಾಗಿದೆ. ಮತೀಯ ಭಾವನೆಗಳು ವಿಶ್ವಶಾಂತಿಯ ವಿನಾಶಕ್ಕೆ ಎಸೆದ ಬಾಂಬುಗಳು. ಹಾಗಾಗಿ ಮನುಷ್ಯ ಮತ ಮೌಢ್ಯ ಶಾಸ್ತ್ರ ಗ್ರಂಥಗಳನ್ನು ಅವಲಂಬಿಸದೆ ವಿಶ್ವತತ್ವಗಳ ಆಧಾರದ ಮೇಲೆ ತನ್ನ ಹೃದಯ ಮನಸ್ಸುಗಳನ್ನು ಬೆಳೆಸಿಕೊಳ್ಳಬೇಕಾಗಿದೆ. ಮತೀಯ ಕೆಲಸಗಳಿಗೆ ಖರ್ಚು ಮಾಡುವ ಸಂಪತ್ತನ್ನು ಲೋಕದ ಹಿತಕ್ಕಾಗಿ, ಹಸಿರನ್ನು ಬೆಳೆಸುವುದಕ್ಕಾಗಿ, ಪರಿಸರವನ್ನು ಸ್ವಚ್ಛಗೊಳಿಸಿ ಉತ್ತಮಪಡಿಸುವುದಕ್ಕಾಗಿ ಬೆಳೆಸಿದರೆ ಜಗತ್ತು ಹೆಚ್ಚು ಸುಂದರವಾಗುತ್ತದೆ. ಸೌಂದರ್ಯ ಸುಖಪ್ರದವಾದುದು. ಜನೋಪಯೋಗಿ ಕೆಲಸದಿಂದ, ಪರೋಪಕಾರ ಜೀವನದಿಂದ ವ್ಯಕ್ತಿಗೆ ಸಾಯುಜ್ಯ ಲಭಿಸುತ್ತದೆ ಎನ್ನಬಹುದು. ಅದಕ್ಕೆ ಬದಲಾಗಿ ಅವರ ಬೂದಿ ಮೂಳೆಗಳನ್ನು ಹೊಳೆಗೆ ಬಿಡುವುದರಿಂದ ಅವರಿಗೆ ಮುಕ್ತಿ ಲಭಿಸುವುದಿಲ್ಲ. ಇದು ಮೌಢ್ಯದ ಪರಮಾವಧಿ ಅಷ್ಟೇ. ಇಪ್ಪತ್ತು ನಾಲ್ಕು ಗಂಟೆಗಳೂ ನೀರಿನಲ್ಲೇ ಇರುವ ಜಲಚರಾದಿಗಳೆಲ್ಲ ಮಾನವರಿಗಿಂತ ಮೊದಲೇ ಸ್ವರ್ಗಕ್ಕೆ ಹೋಗಬೇಕಾಗಿತ್ತು ಎಂದು ಸ್ವಾಮಿ ವಿವೇಕಾನಂದರ ವಿವೇಕವಾಣಿ ಜನತೆಯ ಕಣ್ಣು ತೆರೆಸಬೇಕು. ಆದ್ದರಿಂದ ಜಲಮಾಲಿನ್ಯ ತಪ್ಪಿಸಲು ಸರ್ಕಾರ ಮುಂದಾಗಬೇಕು. ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ಮಾಡಿ ಗಲೀಜು ಮಾಡುವುದನ್ನು ತಪ್ಪಿಸಲು ಕರ್ನಾಟಕ ಸರ್ಕಾರ ಕಾಯ್ದೆ ಮಾಡಿದೆ. ನದಿಗಳಿಗೆ ಹೆಣಗಳನ್ನು ಬಿಸಾಡುವುದು, ದಹನವಾಗದ ಅಸ್ಥಿಗಳನ್ನು ವಿಸರ್ಜನೆ ಮಾಡುವುದು ಮುಂತಾದವುಗಳಿಂದ ಉಂಟಾಗುವ ಜಲಮಾಲಿನ್ಯವನ್ನು ನಿಷೇಧಿಸಲು ಶಾಸನ ತರುವುದು ಅಗತ್ಯವಾಗಿದೆ. ಇಲ್ಲದಿದ್ದರೆ ಕಾಲಾಂತರದಲ್ಲಿ ನಮ್ಮ ನದಿಗಳ ನೀರನ್ನು ಬಳಸುವುದಿರಲಿ, ಮುಟ್ಟುವುದಕ್ಕೂ ಸಾಧ್ಯವಾಗದಂಥ ಹೊಲಸು ಪರಿಸ್ಥಿತಿ ಉದ್ಭವಿಸುತ್ತದೆ. ಐರೋಪ್ಯ ದೇಶಗಳು ತಮ್ಮ ನಾಡಿನ ನದಿಗಳನ್ನು ಎಷ್ಟು ಚೊಕ್ಕಟವಾಗಿ ಕಾಪಾಡಿಕೊಂಡು ಬರುತ್ತಿವೆ ಎಂಬುದನ್ನು ಕೇಂದ್ರ ಮತ್ತು ವಿವಿಧ ರಾಜ್ಯ ಸರ್ಕಾರಗಳು ಚೆನ್ನಾಗಿ ಪರಿಶೀಲಿಸಬೇಕಾಗಿದೆ. ನದಿಗಳ ಸ್ವಚ್ಛ ನೀರಿನ ಸಂರಕ್ಷಣೆಗೆ ಶಾಸನದ ಅಗತ್ಯವಿದೆ. ಒಳ್ಳೆಯ ಮಾತಿಗೆ ಬಗ್ಗದ ಜನ ಪೊಲೀಸರ ಲಾಠಿಗೆ, ಕಾನೂನಿಗೆ ಬೆಲೆ ಕೊಡುತ್ತಾರೆ. ಅಸ್ಪೃಶ್ಯತೆಯನ್ನು ಆಚರಿಸಬೇಡಿ ಎಂದು ಉಪದೇಶ ಮಾಡಿದರೆ ಕೇಳಿದರೇ ಭಾರತೀಯರು? ಅದು ಕಾನೂನುಬಾಹಿರ, ಆಚರಿಸಿದರೆ ಉಗ್ರಶಿಕ್ಷೆ ಎಂದು ಕಟ್ಟಳೆ ಮಾಡಿದಾಗ ಅದನ್ನು ಕೈಬಿಟ್ಟರು! ಕಾನೂನಿನಿಂದಲೇ ಕಾರ್ಯಸಿದ್ಧಿ!

ಮತದ ಹೆಸರಿನಲ್ಲಿ ನಡೆಯುವ ಕಾರ್ಯಾವಳಿಗಳು ವೈವಿಧ್ಯಮಯವಾಗಿವೆ. ಈ ವಂಚನೆಯ ಜಾಲ ಹೇಗಿದೆ ಎಂಬುದನ್ನು ಮುಂದಿನ ರೂಪಕದಿಂದ ವಿವರಿಸಬಹುದು:

ನಮ್ಮ ಹಳ್ಳಿಯ ನಮ್ಮ ಹಿತ್ತಲ ಬೇಲಿಗಳಲ್ಲಿ ಕಾಚಿಗಿಡ, ಹೂಲಿಕಡ್ಡಿ ಮತ್ತು ಉಣ್ಣೆಮುಳ್ಳುಗಳು ಇತ್ಯಾದಿ ಇವೆ. ಈ ಗಿಡಗಳ ಮೇಲೆ ಜೇಡ ಬಲೆ ಕಟ್ಟುತ್ತದೆ. ಅದರ ಬಲೆ ಸಾಮಾನ್ಯವಾಗಿ ಒಂದೂವರೆ ಗೇಣುದ್ದ, ಚೋಟಗಲ ಇರುತ್ತದೆ. ಕೆಲವೊಮ್ಮೆ ಮೊಳದುದ್ದ ದೊಡ್ಡದಾಗಿರುತ್ತದೆ. ಈ ಜೇಡರ ಬಲೆಗೆ ಏನಾದರೂ ಕ್ರಿಮಿಕೀಟಗಳು ಬಂದರೆ, ಅದರ ಮೇಲೆ ಹರಿದಾಡಿದರೆ ತನ್ನ ರಂಧ್ರಗೃಹದೊಳಗೆ ಇದ್ದ ಜೇಡ ಬರ್ರನೆ ಹೊರಗೆ ಬರುತ್ತದೆ. ತನ್ನ ಬಲೆಗೆ ಬಿದ್ದಿರುವ ಮಿಕದ ಮೇಲೆ ಅತ್ತಿಂದಿತ್ತ ಇತ್ತಿಂದತ್ತ ತನ್ನ ಒಡಲ ನೂಲಿನಿಂದ ಬಲೆ ನೇಯುತ್ತದೆ. ಜೇಡನ ಮೈಯಿಂದ ಬರುವ ದಾರ ಬಹುಶಃ ನುಣ್ಣಗೆ ತಂಪಾಗಿ ಹುಳು ಅಥವಾ ಕೀಟಕ್ಕೆ ಆಪ್ಯಾಯಮಾನವಾಗಿ ಕಂಡು, ತನಗೇನೋ ರಕ್ಷಣೆ ದೊರಕುತ್ತಿದೆ ಎಂದು ಅದು ಚಲಿಸದ ಅಥವಾ ಬಚಾವಾಗಲು ಪ್ರಯತ್ನಿಸದೆ ಅಲ್ಲೇ ಕೂರುತ್ತದೆ. ಜೇಡ ಅದರ ಮೇಲೆ ಬಲೆ ಹೆಣೆದು ಅದು ಅತ್ತ ಇತ್ತ ಅಲುಗಾಡಲಾರದು ಎಂದು ಖಾತರಿಪಡಿಸಿಕೊಂಡು ಅದರ ಮೇಲೆ ದಾಳಿ ಮಾಡುತ್ತದೆ. ಅದನ್ನು ಹಿಡಿದು ಕಚ್ಚಿಕೊಂಡು ತನ್ನ ಮನೆಯೊಳಕ್ಕೆ ಹೋಗುತ್ತದೆ. ಕಾಣದಂತೆ ಭಕ್ಷಿಸುತ್ತದೆ.

ನಮ್ಮೀ ವ್ಯವಸ್ಥೆ ಜೇಡದ ಜಾಲದಂತಿದೆ. ಎಚ್ಚರ ತಪ್ಪಿದರೆ ಸಾಕು, ಜನ ಬಲಿಯಾಗುತ್ತಾರೆ. 'ದಾಸನ ಮಾಡಿಕೋ' ಎಂದು ಬೇಡಿದರೆ, ಹಾಡಿದರೆ ಮಾಡಿಕೊಳ್ಳುವವರು ಸದಾ ಸಿದ್ಧರಾಗಿರುತ್ತಾರೆ. ಆಗ ಇವರನ್ನು ಅವರನ್ನು ಬೈದು ಏನೂ ಫಲವಿಲ್ಲ. ನಿಮ್ಮ ಬದುಕಿಗೆ ನೀವೇ ಹೊಣೆಗಾರರು. ನಾವು ದುರ್ಬಲರಾದರೆ ಪ್ರಬಲರು ನಮ್ಮನ್ನು ಆಳಲು ಕಾಯುತ್ತಿರುತ್ತಾರೆ. ಆದ್ದರಿಂದ ಆಯ್ಕೆ ನಿಮ್ಮದು.

ಸ್ವಚ್ಛತೆಯನ್ನು ಸೃಷ್ಟಿಸುವ ಅಗತ್ಯವಿಲ್ಲ. ಕಸ ಗುಡಿಸಿದರೆ ಸ್ವಚ್ಛತೆ ತಾನಾಗಿಯೇ ಉಂಟಾಗುತ್ತದೆ! ಮೌಢ್ಯ ಕೆಸರು. ವಿಚಾರ ಏಣಿಯೇರು.

ಪ್ರೊ॥ ಕೆ. ಎಸ್. ಭಗವಾನ್
[illegible], ಕುವೆಂಪುನಗರ
ಮೈಸೂರು - [illegible]

# ವಾಗ್ಗೇಯಕಾರರ ಅಪರೂಪದ ವಕ್ತಾರ: ಆನಂದರಾಮ ಉಡುಪ

ವಿದ್ವಾಂಸ, ಲಿಪಿಕಾರ, ಸಂಶೋಧಕ, ಪರಿಷ್ಕರಣ ಕರ್ತ ಹಾಗೂ ಸಂಪಾದಕರಾದ ಶ್ರೀ ಆನಂದರಾಮ ಉಡುಪರಿಗೆ ಸಂಗೀತ ಹುಟ್ಟಿನಿಂದಲೇ ಬಂದ ಕೊಡುಗೆ. ಇವರು ೧೯೨೯ರಲ್ಲಿ ಉಡುಪಿ ಜಿಲ್ಲೆಯ ಬಾರಕೂರಿನಲ್ಲಿ ಜನಿಸಿದರು. ಜೀವನೋಪಾಯಕ್ಕಾಗಿ ಅಂಚೆ-ತಂತಿ ಇಲಾಖೆಯಲ್ಲಿ ಸೇವೆ ಸಲ್ಲಿಸಿದರೂ ಬಾಳಿನುದ್ದಕ್ಕೂ ಉಸಿರಾಡಿದ್ದು ಸಂಗೀತವನ್ನೇ. ೧೯೮೭ರಲ್ಲಿ ಕೆಲಸದಿಂದ ನಿವೃತ್ತರಾದ ನಂತರ ತಮ್ಮ ಸಂಪೂರ್ಣ ಸಮಯವನ್ನು ಸಂಗೀತ ಶಾಸ್ತ್ರ ಅಧ್ಯಯನ, ಸತತ ಅಭ್ಯಾಸ, ಬರವಣಿಗೆ ಮತ್ತು ಜ್ಞಾನ ವಿನಿಮಯಕ್ಕೆ ಮುಡಿಪಾಗಿ ಇಟ್ಟಿದ್ದಾರೆ. ೧೯೬೪ರಿಂದ ಬೆಂಗಳೂರಿನಲ್ಲಿ ನೆಲೆಸಿದ್ದಾರೆ.

ವೇದಿಕೆ ವಿದ್ವಾಂಸರಾಗಬಯಸದೆ, ಕೀರ್ತಿಗೆ ಹಂಬಲಿಸದೆ, ಕಲಾಲೋಕಕ್ಕೆ ಅತ್ಯಮೂಲ್ಯವೆನಿಸಿರುವ ೪೦೦೦ಕ್ಕೂ ಮಿಕ್ಕಿದ ವಾಗ್ಗೇಯ ರತ್ನಗಳನ್ನು ಸ್ವರ ಬಂಧಗಳೊಡನೆ ಸಂಚಯಿಸಿ, ಪರಿಷ್ಕರಿಸಿ ತಮ್ಮದೇ ಅಂದವಾದ ಕೈಬರಹದಲ್ಲಿ ಬರೆದಿದ್ದಾರೆ. ಅನನ್ಯ ಸಂಸ್ಥೆಯ 'ಅಭಿವ್ಯಕ್ತಿ' ಮಾಸಪತ್ರಿಕೆಯಲ್ಲಿ ಈಗ ಉಡುಪರ 'ಅಪೂರ್ವ ರಾಗಗಳಲ್ಲಿ ರಂಜನೆ' ಎಂಬ ಶೀರ್ಷಿಕೆಯಡಿಯಲ್ಲಿ ಸಂಗೀತ ರತ್ನತ್ರಯರ ಮತ್ತು ಆನಂತರದ ಇತರ ವಾಗ್ಗೇಯಕಾರರ ರಚನೆಗಳ ಅಪೂರ್ವ ರಾಗಗಳ ಕೃತಿಗಳು ಪ್ರಕಟವಾಗುತ್ತಿವೆ.

'ಮೀನಾಕ್ಷಿಸುತ' ಎಂಬ ವಿದ್ವಾನ್ ನಾಗರಾಜರ ಎಲ್ಲ ತಮಿಳು ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಸುಬ್ಬರಾಯ ದೀಕ್ಷಿತರು ೧೯೦೫ರಲ್ಲಿ ರಚಿಸಿದ ತೆಲುಗು ಮೂಲಕೃತಿಯನ್ನು 'ಪ್ರಥಮಾಭ್ಯಾಸ ಪುಸ್ತಕವು' ಎಂಬ ಹೆಸರಿನಲ್ಲಿ ಕನ್ನಡಕ್ಕೆ ತಂದಿದ್ದಾರೆ. ದೀಕ್ಷಿತರ ಉಪಲಬ್ಧವಿರುವ ಎಲ್ಲ ರಚನೆಗಳನ್ನೂ ಸ್ವರಪ್ರಸ್ತಾರದೊಡನೆ ಸ್ವಹಸ್ತಾಕ್ಷರದಲ್ಲಿ ಬರೆದಿದ್ದಾರೆ. ಅಂತೆಯೇ ಶ್ಯಾಮಾಶಾಸ್ತ್ರಿ, ಸುಬ್ಬರಾಯ ಶಾಸ್ತ್ರಿ, ಅಣ್ಣಾಸ್ವಾಮಿ ಶಾಸ್ತ್ರಿಗಳ ಉಪಲಬ್ಧವಿರುವ ಎಲ್ಲಾ ರಚನೆಗಳನ್ನೂ ಸ್ವರಪ್ರಸ್ತಾರದೊಡನೆ ನೀಡಿದ್ದಾರೆ. ತಮ್ಮ ತಂದೆಯವರ ಬಾಲಪಾಠಾವಳಿಯನ್ನು ಕಾಪಾಡಿ, ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಇದಲ್ಲದೆ ಪು.ತಿ.ನ. ಅವರ ನಾಟಕ 'ಶಬರಿ' ಹಾಗೂ ಡಿ.ವಿ.ಜಿ. ಅವರ 'ಗೀತ ಶಾಕುಂತಲ' ನಾಟಕಗಳನ್ನೂ ಸ್ವರ ಪ್ರಸ್ತಾರದ ಸಮೇತ ಬರೆದಿಟ್ಟಿದ್ದಾರೆ. ಇನ್ನೂ ಅನೇಕ ಕೃತಿಗಳು ಪ್ರಕಟವಾಗಿದ್ದು, ಕೆಲವು ಪ್ರಕಟಣೆಯಲ್ಲಿವೆ ಹಾಗೂ ಕೆಲವು ಸಂಪೂರ್ಣ ತಯಾರಾಗಿ ಪ್ರಕಟಣೆಯನ್ನು ಇದಿರುನೋಡುತ್ತಿವೆ. ಅವರ ಮುದ್ದಾದ ಕೈಬರಹದ ಸೊಬಗನ್ನು ನೋಡಿಯೇ ತಿಳಿಯಬೇಕು. ಸದ್ಯಕ್ಕೆ ಆರು ಬೃಹತ್ ಸಂಪುಟಗಳ 'ಸಂಗೀತ ಸಂಪ್ರದಾಯ ಪ್ರದರ್ಶಿನಿ'ಯ ಐದು ಮತ್ತು ಆರನೆಯ ಸಂಪುಟಗಳ ಬರವಣಿಗೆಯಲ್ಲಿ ನಿರತರಾಗಿದ್ದಾರೆ.

'ಹೊಸತು' ಪರವಾಗಿ ಜಿ. ದ್ವಾರಕನಾಥ್ (ನಿವೃತ್ತ ಸಹ ಸಂಪಾದಕರು, 'ದಿ ಹಿಂದು'), ಡಾ॥ ಜಿ. ರಾಮಕೃಷ್ಣ, ಎಸ್. ಸುರೇಂದ್ರ, ಕೆ. ಎಸ್. ಪಾರ್ಥಸಾರಥಿ ಹಾಗೂ ಕುಮಾರಿ ಸಹನ ಆನಂದರಾಮ ಉಡುಪರನ್ನು ಭೇಟಿ ಮಾಡಿ ಸಂದರ್ಶಿಸಿದರು. ಅವರೆಲ್ಲಾ ಶ್ರೀಮತಿ ಅನಸೂಯಾ ಶರ್ಮ ಅವರ ಸಹಕಾರಕ್ಕೆ ಕೃತಜ್ಞರು. ಲೇಖನ ಸಿದ್ಧಗೊಳಿಸಿದ್ದು ಸಹನ.

> ವೇದಿಕೆ ವಿದ್ವಾಂಸರಾಗಬಯಸದೆ, ಕೀರ್ತಿಗೆ ಹಂಬಲಿಸದೆ, ಕಲಾಲೋಕಕ್ಕೆ ಅತ್ಯಮೂಲ್ಯವೆನಿಸಿದ ೪೦೦೦ಕ್ಕೂ ಮಿಕ್ಕಿದ ವಾಗ್ಗೇಯ ರತ್ನಗಳನ್ನು ಸ್ವರಬಂಧಗಳೊಡನೆ ಸಂಚಯಿಸಿ, ಪರಿಷ್ಕರಿಸಿ, ಬರೆದು, ಕರ್ನಾಟಕ ಸಂಗೀತಕ್ಕೆ ಪ್ರಸ್ತುತವಾಗುವ ಅಪರೂಪದ ವ್ಯಕ್ತಿ ಶ್ರೀ ಆನಂದರಾಮ ಉಡುಪ ಅವರೊಂದಿಗೆ
>
> **ಒಂದು ಸಂದರ್ಶನ**

ಶ್ರೀ ಉಡುಪರು ಅನಾರೋಗ್ಯದಿಂದ ಬಳಲಿ ಚೇತರಿಸಿಕೊಳ್ಳುತ್ತಿದ್ದರೂ ಅವರ ಸಂಗೀತಾಸಕ್ತಿ, ಉತ್ಸಾಹ ಎಳ್ಳಷ್ಟೂ ಕುಗ್ಗಿಲ್ಲ. ಎರಡು ತಾಸಿಗೂ ಮೀರಿ ತೆಗೆದುಕೊಂಡ ಸಂದರ್ಶನವನ್ನು ಒಲ್ಲದ ಮನಸ್ಸಿನಿಂದಲೇ ಮುಗಿಸಿ ಉಡುಪರಿಂದ ಬೀಳ್ಕೊಂಡೆವು. ಸಜ್ಜನಿಕೆ, ವಿನಯ, ಔದಾರ್ಯ, ನಮ್ರತೆ, ಹೃದಯ ವೈಶಾಲ್ಯವೇ ಮೈವೆತ್ತಂತಿರುವ ಇವರ ಎಲ್ಲ ಹೊತ್ತಿಗೆಗಳನ್ನೂ ಎಳೆಯರು ಉಪಯೋಗಿಸಿಕೊಳ್ಳಲಿ, ಸಂಗೀತ ಸಾಮ್ರಾಜ್ಯವನ್ನು ಸಮೃದ್ಧಗೊಳಿಸಲಿ, ಅವರ ಪರಿಶ್ರಮ ಸಾರ್ಥಕವಾಗಲಿ ಎಂದು ಆಶಿಸುತ್ತೇವೆ.

**ಹೊಸತು :** ನಿಮಗೆ ಸಂಗೀತದಲ್ಲಿ ಆಸಕ್ತಿ ಬೆಳೆದದ್ದು ಹೇಗೆ ?



**ಉಡುಪ :** ನಮ್ಮ ತಂದೆ, ಕೃಷ್ಣ ಉಡುಪರು ಉತ್ತಮ ಗಾಯಕರಾಗಿದ್ದರು. ಒಳ್ಳೆಯ ಪಿಟೀಲು ವಿದ್ವಾಂಸರಾಗಿದ್ದರು. ಮೋರ್ಚಿಂಗ್ ಚೆನ್ನಾಗಿ ನುಡಿಸುತ್ತಿದ್ದರು. ಅವರು ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಕೊಲ್ಲೂರಿನಲ್ಲಿ ಸಂಗೀತ ಕೇಳಿ ತಾವೂ ಸಂಗೀತ ಕಲಿಯಬೇಕೆಂದು ಮನೆ ಬಿಟ್ಟು ಹೋಗಿ ತಿರುವನಂತಪುರದಲ್ಲಿ ಮೇಲ್‌ಶಾಂತಿಯ ವಾದ್ಯ ಅರಮನೆಯಲ್ಲಿ ಸಂಗೀತ ಕಲಿತವರು.

ನನಗೆ ಪ್ರೈಮರಿ ಶಾಲೆಯಲ್ಲಿದ್ದಾಗಲೆ ಒಳ್ಳೆಯ ಸ್ವರ ಜ್ಞಾನವಿತ್ತೆಂದು ನೆನಪಾಗುತ್ತದೆ. ಆದರೆ ರಾಗಗಳು ಯಾವುವೆಂದು ತಿಳಿಯುತ್ತಿರಲಿಲ್ಲ. ನಾನು ಹಾಡುತ್ತಿದ್ದುದು ಯಾವ ರಾಗವೇ ಆಗಿತ್ತಾದರೂ, ಅಲ್ಲಿನವು ಯಾವ ಸ್ವರಗಳೆಂದು ತಿಳಿದಿರಲಿಲ್ಲ. ಆದರೆ ಅವುಗಳನ್ನು ಸರಿಯಾಗಿ ತಪ್ಪಿಲ್ಲದಂತೆ ಉಚ್ಚರಿಸುತ್ತಿದ್ದೆ. ಕೆಲವೊಮ್ಮೆ ಆ ರಾಗದ ಧಾಟಿ ಹಿಡಿದು, ಅದೇ ಧಾಟಿಯ ಕೀರ್ತನೆಯನ್ನು ಜ್ಞಾಪಿಸಿಕೊಂಡು ಆಯಾ ರಾಗ ಯಾವುದೆಂದು ಹೇಳುತ್ತಿದ್ದೆ. ಕರ್ಣಾಟಕ ಸಂಗೀತವೇ ಆಗಲಿ, ಹಿಂದೂಸ್ತಾನಿಯೇ ಆಗಲಿ ಅಥವಾ ಎರಡೂ ಶೈಲಿಯ ವಾದ್ಯಸಂಗೀತಗಳೇ ಆಗಲಿ, ಎರಡೂ ಪದ್ಧತಿಯ ವಿದ್ವಾಂಸರ ನೂರಾರು ಕಛೇರಿಗಳನ್ನು ಕೇಳಿದ್ದೇನೆ. ಆಗ ಉಡುಪಿಗೆ ಬಂದವರೆಲ್ಲ ಮಂಗಳೂರಿಗೆ ಬರುತ್ತಿದ್ದರು. ಜಿ.ಎನ್.ಬಿ., ಯಶವಂತರಾಯ ಪುರಾಣಿಕ್, ಬಸವರಾಜ ರಾಜಗುರು, ಲಾಲ್‌ಗುಡಿ, ಬಡೇ ಗುಲಾಮ್ ಅಲಿ ಖಾನ್ ಮೊದಲಾದವರೆಲ್ಲರೂ ಸಂಗೀತದ ದಿಗ್ಗಜರು ಮಂಗಳೂರಿಗೆ ಕಚೇರಿಗೆಂದು ಬರುತ್ತಿದ್ದರು. ಶಿಷ್ಯ ಸಂಪತ್ತು ಇದ್ದರೆ ಮಂಗಳೂರಿಗೆ ಶಿಕ್ಷಕರಾಗಿ ಸಂಗೀತ ಪಾಠ ಹೇಳಲೂ ಬರುತ್ತಿದ್ದರು. ಆದರೆ ಯಾರೂ ಅದನ್ನು ಮುಂದುವರೆಸಲಿಲ್ಲ. ಒಂದು ವೃತ್ತಿ ಅಂತ ಮಾಡಿಕೊಂಡಿದ್ದು ಕಡಿಮೆ ಎನ್ನಬೇಕು. ನಮ್ಮ ತಂದೆಯವರೇ ಹೇಳ್ತಿದ್ದರು, ಸಂಗೀತ ನಂಬಿದರೆ ಜೀವನದಲ್ಲಿ ದುಡ್ಡು ಹುಟ್ಟೋದಿಲ್ಲ, ಬೇರೆ ಕೆಲಸ ಮಾಡಿರಿ ಎಂದು. ಮಂಗಳೂರಿನಲ್ಲಿ ಆಗಿನ ಪ್ರತಿಷ್ಠಿತ ವಾರಪತ್ರಿಕೆ 'ನವಭಾರತ'ದವರು ನೀಡಿದ ಫ್ರೀ ಪಾಸು ತೆಗೆದುಕೊಂಡು ಹೋಗಿ, ಸಂಗೀತ ಕೇಳಿ ಚಿಕ್ಕ ವಿಮರ್ಶೆಯನ್ನೂ ಬರೆದು ಕೊಡುತ್ತಿದ್ದೆ. ಮದರಾಸಿನಲ್ಲಿ ಆನರ್ಸ್ ಮಾಡಿದ ಸ್ನೇಹಿತರೊಬ್ಬರಿಂದ ವಿಮರ್ಶೆಯ ಸ್ವರೂಪದ ಬಗ್ಗೆಯೂ ತಿಳಿದುಕೊಂಡೆ. ಆನಂತರ 'ಚಿತ್ರಗುಪ್ತ' ಎಂಬ ಬೆಂಗಳೂರಿನ ವಾರಪತ್ರಿಕೆಯೊಂದಕ್ಕೆ ಆಯಾ ವಾರದ ರೇಡಿಯೊ ಕಛೇರಿಗಳ ವಿಮರ್ಶೆ ಬರೆದು ಕಳಿಸುತ್ತಿದ್ದೆ. ಮುಂದೆ ಸಂಗೀತದ ಬಗ್ಗೆ ಬರೆಯುವುದನ್ನು ಕೈಬಿಟ್ಟು ಸಂಗೀತಾಭ್ಯಾಸಕ್ಕೇ ಒಲವು ತೋರಿದೆ. ಮೊದಲಿಗೆ ನಮ್ಮ ತಂದೆ, ಬಳಿಕ ಸಂಗೀತಗಾರರಾಗಿದ್ದ ನಮ್ಮಣ್ಣ ಶ್ರೀನಿವಾಸ ಉಡುಪರು, ಮಂಗಳೂರಿನ ಕಲಾನಿಕೇತನದ ಪ್ರಾಂಶುಪಾಲರಾದ



ಎನ್. ಗೋಪಾಲಕೃಷ್ಣ ಅಯ್ಯರರು ನನ್ನ ಗುರುಗಳು.

**ಹೊ :** ಈಗ್ಯಾಕೆ ಜನ ಸಂಗೀತ ಕಛೇರಿಗಳಿಗೆ ಹೆಚ್ಚು ಬರ್‍ತಾ ಇಲ್ಲ? ನಿಮ್ಮ ಅನುಭವದಲ್ಲಿ ಈಗ ಶಾಸ್ತ್ರೀಯ ಸಂಗೀತ ಕೇಳಲಿಕ್ಕೆ ಕಡಿಮೆ ಜನ ಬರ್‍ತಾ ಇದ್ದಾರೆ ಎನ್ನಿಸುತ್ತಾ ?

**ಉ :** 'ಫ್ಯೂಶನ್' ಸಂಗೀತದ ಕಡೆಗೆ ಈಗಿನ ಯುವಕರಿಗೆ ಒಲವು ಜಾಸ್ತಿ... ಶಾಸ್ತ್ರೀಯ ಸಂಗೀತ ಅರ್ಥ ಮಾಡಿಕೊಂಡರೆ ಅದನ್ನು ಗ್ರಹಿಸಿ ಆಸ್ವಾದಿಸುವುದು ಸುಲಭ. ತರುಣರಲ್ಲಿ, ಆಲಿಸುವ ಕಲೆಯು ಚೆನ್ನಾಗಿ ಬೆಳೆದು ಕರಗತವಾಗಿರುತ್ತೆ.

ನಾನು ಸಿಟ್ಟಿನಿಂದ ಹೇಳುತ್ತಿದ್ದೆ ''ಸುಗಮ ಸಂಗೀತ is a negotiation of disgruntled musicians'' ಅಂತ. ಸುಗಮ ಸಂಗೀತಕ್ಕೆ ಶಾಸ್ತ್ರೀಯ ಸಂಗೀತದ ಸ್ವರ ಜ್ಞಾನ, ಗಮಕ ಜ್ಞಾನ ಬೇಕು.

ನೋಡಿ ಈಗ... ಮನ್ನಾ ಡೇ, ಸೈಗಲ್ ಇವರಿಗೆಲ್ಲ ಸಂಗೀತದ classicality ಯಲ್ಲಿ ತುಂಬ ಅಭಿರುಚಿ ಇತ್ತು. ಅವರೆಲ್ಲ ಶಾಸ್ತ್ರೀಯ ಸಂಗೀತ ಕಲಿತವರು. 'ಫ್ಯೂಶನ್' ಸಂಗೀತದಲ್ಲಿ ಬೇಕಾದ್ದು ಮಾಡಬಹುದು. ಮೊದಲು ಶಾಸ್ತ್ರೀಯ ಸಂಗೀತದ ಜ್ಞಾನ ಇರಬೇಕು.

**ಹೊ :** ಇದಕ್ಕೆ ಕಾರಣ ಏನು ? ಶಾಸ್ತ್ರೀಯ ಸಂಗೀತದ ಬಗ್ಗೆ ಒಲವು, ಆಸಕ್ತಿ ಮೂಡುವಂತೆ ಮಾಡುವುದು ಹೇಗೆ ?

**ಉ :** ಸಂಗೀತದಲ್ಲಿ ತ್ರಿಶ್ರ, ಮಿಶ್ರ ಖಂಡ ಸಂಕೀರ್ಣಗಳೆಂದರೆ ಏನು, ಸ್ವರಜಾತಿಯೆಂದರೆ ಏನು, ಜತಿ ಭೇದಗಳು, ಜಾತಿ ಭೇದಗಳು ಇಂಥ ಶಾಸ್ತ್ರಗಳನ್ನೆಲ್ಲ ಸ್ವಲ್ಪ ತಿಳಿದಿರಬೇಕು. ಆಗಷ್ಟೇ ಎಳೆಯರು ಸಂಗೀತದ ಶಾಸ್ತ್ರೀಯತೆಯನ್ನು ಗ್ರಹಿಸಲು ಮೆಚ್ಚಲು ಸಾಧ್ಯ. ಇಲ್ಲದಿದ್ದಲ್ಲಿ ಸಂಗೀತ ಕೇವಲ ಒಂದು ಕಸರತ್ತು ಆಗಿಬಿಡುತ್ತೆ.

ನಮ್ಮ ಎಳೆಯ ಜನಾಂಗಕ್ಕೆ ಒಲವು ಮೂಡುವಂತೆ ಮಾಡಲು ನಾವು ಸಂಗೀತದ ಶಿಕ್ಷಣ ಕೊಡಬೇಕು. ಬರಿ ಒಂದೆರಡು ದೇವರನಾಮ, ನಾಲ್ಕು ಸಿನೆಮಾ ಹಾಡುಗಳನ್ನು ನಮ್ಮ ಕಡೆಯಿಂದ ಒಪ್ಪಿಸಿದರೆ ಸಾಲದು.

ಒಳ್ಳೆಯ ಆಲಿಸುವ ಹಾಗೂ ಸೂಕ್ಷ್ಮ ಗ್ರಹಿಕೆಯ ಶಾಸ್ತ್ರೀಯ ಸಂಗೀತವನ್ನು ಮೆಚ್ಚುವ ಶ್ರೋತೃಗಳು ಕಡಿಮೆ ಆಗ್ತಾ ಇದ್ದಾರೆ ಅನ್ನಿಸಿದರೆ... ಅದು ಶ್ರೋತೃಗಳ ತಪ್ಪಲ್ಲ, ನಮ್ಮಲ್ಲಿ ಹೃದಯ, ಆ ವೈಶಾಲ್ಯ ಇಲ್ಲ.

**ಹೊ :** ಸಂಗೀತದ ವಿಶೇಷತೆಯನ್ನು ಗ್ರಹಿಸುವುದು, ಆಸ್ವಾದಿಸುವುದು ಹೇಗೆಂದು ಕಲಿಸುವ ತರಗತಿಗಳು ಬೇಕೆ ?

**ಉ :** ಹೌದು. ನಂತರ ಸಂಗೀತ ಕಲಿಯಬೇಕು. ಅಂತಹ ಮಕ್ಕಳಲ್ಲಿ ಆಸಕ್ತಿ ಹುಟ್ಟುವಂತಾಗಬೇಕು.

**ಹೊ :** ಏನಾಗಿದೆ ಈಗ ಅಂದರೆ, ಹಾಡುವವರಲ್ಲಿ ಸೌಂದರ್ಯಾಭಿರುಚಿ ಇಲ್ಲ. ಈಗಿನವರು ಸರಿಯಾಗಿ ಸಂಗೀತ ಕಲಿತೇ ಇರೋದಿಲ್ಲ. ಇದು ನಿಜವೆ ?

**ಉ :** ಅದಕ್ಕೆ ಮುಖ್ಯ ಕಾರಣ... ಕಲಾವಿದ ಶ್ರೋತೃಗಳನ್ನು ಮೆಚ್ಚಿಸಲೆಂದು ಹಾಡುತ್ತಾನೆ, ತನಗಾಗಿ ಅಲ್ಲ, ಕಲೆಗಾಗಿಯೂ ಅಲ್ಲ.

**ಹೊ :** ಈಗ, ಕಲಾವಿದ ಹಾಡುವುದು ವಿಮರ್ಶಕನಿಗೆ, ಶ್ರೋತೃಗಳಿಗೂ ಅಲ್ಲ ಎಂಬಂತಾಗಿ ಬಿಟ್ಟಿದೆ ಎಂಬ ಅಭಿಪ್ರಾಯವೂ ಇದೆ ಅಲ್ಲವೆ ?

**ಹೊ :** ಹಳೆಯ ಪಠ್ಯಕ್ರಮವನ್ನು ಇಂದಿನ ಪರಿಸ್ಥಿತಿಯಲ್ಲಿ ಬದಲಾಯಿಸಬೇಕೆ ?

**ಉ :** ಸಂಗೀತ ತಿಳಿದವರು ಬರಿ ಸಿ.ಡಿ. ಮಾಡಿಸಿದರೆ ಸಾಲದು. ಅದಕ್ಕೆ ಪ್ರಸ್ತಾರ ಕೊಡಬೇಕು. ನಾನು ಹಳಬರನ್ನು ಕೇಳಿರುವ ಕಾರಣ ಹೀಗೆ ಹೇಳ್ತಾ ಇದ್ದೀನಿ. ಮಹಾರಾಜಪುರಂ ವಿಶ್ವನಾಥಯ್ಯನವರು ಹಾಡಿದ್ದು ಕೇಳಿದ್ದೀನಿ... ಹ್ಯಾಗೆ ಹಾಡ್ತಾ ಇದ್ದರು. ಹಳೆಯ ಪಠ್ಯಕ್ರಮವೇ ಸರಿ, ಕಲಿಯುವವರು ಕೃತಿಗಳ ಭಾವಾರ್ಥವನ್ನೂ ತಿಳಿದಿರಬೇಕು. ಅರ್ಥ ತಿಳಿದುಕೊಳ್ಳುವ ಪ್ರಯತ್ನ ಮಾಡುವುದು ಅವಶ್ಯ

## ಕಾರಂತರು : ಆನಂದರಾಮ ಉಡುಪರ ನೆನಪಿನ ತುಣುಕು

೫೦ರ ದಶಕದಲ್ಲಿ ಒಂದು ರಾತ್ರಿ. ಸುಮಾರು ೧೦-೧೫ ಜನ ಬಾಲವನದ ಮಹಡಿಯಲ್ಲಿ ಸೇರಿದ್ದರು. ಊಟವಾದ ಬಳಿಕ ಏನಾದರೂ ಓದುವುದು, ಚರ್ಚೆ ಮಾಡುವುದು ಹವ್ಯಾಸ.

ನೆರೆದ ಗಣ್ಯರಲ್ಲಿ ಉಗ್ರಾಣ ಮಂಗೇಶರಾಯರು, ನಾಗೇಶ ರಾಯರು (ನಿವೃತ್ತ ಉಪಾಧ್ಯಾಯರು ಹಾಗೂ ಕಾರಂತರ ನಿಕಟ ಸ್ನೇಹಿತರು) ಇದ್ದರು. ಒಂದು ಗೀತನಾಟಕವನ್ನು ಓದಬೇಕೆಂದು ನಾಗೇಶರಾಯರು ಕೇಳಿದ್ದಕ್ಕೆ ಕಾರಂತರು 'ಸೋಮಿಯ ಸೌಭಾಗ್ಯ' ಗೀತನಾಟಕ ಓದಿದರು.

''ಕಾಡಿಗೆ ಬಣ್ಣದ ಹುಡುಗಿಯು ಅವಳು, ಕಾಡಿನ ಬದಿಯಲ್ಲೇ ಬೆಳೆದುಬಂದವಳು'' ಎಂದು ಆರಂಭಿಸಿದ ಕಾರಂತರು ಸೋಮಿ ಚನಿಯರ ಪ್ರಣಯದ ನಾಟಕವನ್ನು ಅತಿರಮ್ಯವಾಗಿ, ರಾಗವಾಗಿ, ಅಲ್ಲಲ್ಲಿ ಓಟ, ಅಲ್ಲಲ್ಲಿ ಮೆಲುನಡೆ, ಅಲ್ಲಲ್ಲಿ ಭಾವುಕತೆ ತುಂಬಿ ಓದಿದ ರೀತಿ ನನ್ನನ್ನು ಮೈಮರೆಸಿತ್ತು. ಅದೊಂದು ವಿಶೇಷ ಅನುಭವ. ಮನಸ್ಸಿನಲ್ಲಿ ಆಳವಾದ ಛಾಪು ಮೂಡಿಸಿದ ಪ್ರಸಂಗ. ಆಗ ನನಗೆ ೧೮-೨೦ ವರ್ಷ ಇರಬೇಕು. ಮುಂದೊಮ್ಮೆ ಮಂಗಳೂರು ಕೆನರಾ ಹೈಸ್ಕೂಲಿನ 'ಭುವನೇಂದ್ರ ಸಭಾಂಗಣ'ದಲ್ಲಿ ಒಂದು ಸಮಾರಂಭ. ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳೂ ಡಾ॥ ಶಿವರಾಮ ಕಾರಂತರೂ ಮುಖ್ಯ ಅತಿಥಿಗಳು. ಅತಿಥಿಗಳು ಬರುವುದು ಸ್ವಲ್ಪ ತಡವಾದ್ದರಿಂದ ಕಾರ್ಯಕರ್ತರು ನನ್ನನ್ನು ಕರೆದು ಕಾರಂತರ ಒಂದು ಗೀತನಾಟಕ ಓದಲು ಹೇಳಿದರು. ಧೈರ್ಯಮಾಡಿ ಓದುತ್ತಿದ್ದಾಗ ದಯಮಾಡಿಸಿದ ಕಾರಂತರು ಒಮ್ಮೆ ಮುಖ ನೋಡಿ ಆಸೀನರಾದರು. ಕತ್ತೆತ್ತದೆ ಕೇಳಿಸಿಕೊಂಡ ಕಾರಂತರು ಮಾತಾಡಲಿಲ್ಲ. ತಾವು ರಚಿಸಿದ ಕೃತಿಗಳಿಗೆ ಮನಬಂದಂತೆ ರಾಗ ಹಾಕಿದರೆ ಅವರು ಸಹಿಸುತ್ತಿರಲಿಲ್ಲ. ನನ್ನನ್ನು ಅವರು ಬಯ್ಯಲಿಲ್ಲವೆಂಬುದೇ ನನಗೆ ದೊರೆತ ಪ್ರಶಸ್ತಿ.

ಸುಮಾರು ೬೦ರ ದಶಕದಲ್ಲಿ ಖ್ಯಾತ ಸಂಗೀತ ಸಂಯೋಜಕ 'ಪದ್ಮಚರಣ್' ಅವರು ರೇಡಿಯೊ ಕೇಂದ್ರದಿಂದ ಕಾರಂತರ ನಾಟಕ ಬಿತ್ತರಿಸಬೇಕೆಂದು ಅವರಿಗೆ ಪತ್ರ ಬರೆದರಂತೆ. ಅದಕ್ಕೆ ಉತ್ತರಿಸಿದ ಕಾರಂತರು, ''ಬೆಂಗಳೂರಿನಲ್ಲಿ ಶ್ರೀನಿವಾಸ ಉಡುಪರ ತಮ್ಮ ಇದ್ದಾನೆ. ಒಮ್ಮೆ ಅವನಿಂದ ನಾಟಕ ಓದಿಸಿ ನಂತರ ಬಿತ್ತರಿಸಬೇಕೆಂಬುದು ನನ್ನ ಆಶಯ'' ಎಂದು ಬರೆದಿದ್ದರಂತೆ. ಪದ್ಮಚರಣ್ ಅವರ ಜೊತೆಗೆ ಶ್ರೀ ಎಚ್. ಕೆ. ನಾರಾಯಣ ಸಹ ಬಂದಿದ್ದರು. ನಾನು ನಾಟಕ ಓದಿದಾಗ ರಾಗಗಳನ್ನು ಗುರುತು ಹಾಕಿಕೊಂಡರು. ಅದು ನಂತರ ಬಿತ್ತರವಾದದ್ದು ಇತಿಹಾಸ.

ಇದಾದ ಸ್ವಲ್ಪ ಸಮಯದ ನಂತರ ಬೆಂಗಳೂರು ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮ ಮತ್ತು ಕಾರಂತರ ಆಪ್ತಮಿತ್ರರಾದ ಜಿ. ಪಿ. ರಾಜರತ್ನಂ ಅವರೆದುರು 'ಸೋಮಿಯ ಸೌಭಾಗ್ಯ' ಗೀತನಾಟಕವನ್ನೂ ಸೇಡಿಯಾಪು ಕೃಷ್ಣಭಟ್ಟರ 'ಪಿರಿಯಕ್ಕರ'ದ ಒಂದು ಕಾವ್ಯವನ್ನೂ ಓದುವ ಸುಸಂದರ್ಭ ನನಗೆ ಲಭಿಸಿತ್ತು. ಕಾರಂತರ ನಿಕಟವರ್ತಿಗಳಾದ ರಾಜರತ್ನಂರವರು ವಾಚನ ಮೆಚ್ಚಿಕೊಂಡದ್ದು ಬಹುದೊಡ್ಡ ಭಾಗ್ಯವೆಂದು ನನ್ನ ಅನಿಸಿಕೆ.

ಆನಂದರಾಮ ಉಡುಪ

ಇದೆ. ಇಲ್ಲದಿದ್ದರೆ ಸಾಹಿತ್ಯ ಯಾಕೆ ಬೇಕು ? ಸಾಹಿತ್ಯವನ್ನು ಮೂಲತಃ ತಿಳಿದುಕೊಳ್ಳಬೇಕು.

ವರ್ಣಗಳ ಹಾಡಿಕೆಗೆ ತಲುಪಿದಾಗ ಗಮಕಯುಕ್ತವಾದ ಸಂಚಾರಗಳ ಅಭ್ಯಾಸ ನಡೆಯಬೇಕು. ಉಚ್ಚಾರವು ಕಿವಿಗೆ ಹಿತವಾಗಿರಬೇಕು. ಕಾಲ ಪ್ರಮಾಣದಲ್ಲಿ ಏಕಪ್ರಕಾರವಾದ ಓಟವನ್ನು ಸಾಧಿಸಬೇಕು. ಇವೆಲ್ಲಕ್ಕೂ ಉತ್ತಮ ಶಾಸ್ತ್ರೀಯ ಸಂಗೀತ ಕಛೇರಿಗಳ ಕೇಳ್ಮೆ ಬೇಕು. ಯೋಗ್ಯ ಗುರುವಿನ ಮಾರ್ಗದರ್ಶನ ಲಭ್ಯವಾಗಬೇಕು ಅಷ್ಟೇ.

**ಹೊ** : ನೀವು ವೃತ್ತಿಪರ ಸಂಗೀತಗಾರರು ಎಂದು ಅನ್ನಿಸಿಕೊಳ್ಳಲಿಲ್ಲ ಅಲ್ಲವೆ ?

**ಉ** : ಅದಕ್ಕೆ ಬೇಕಾದ ಆರೋಗ್ಯ ಶಕ್ತಿ ನನ್ನಲ್ಲಿ ಇರಲಿಲ್ಲ.

**ಹೊ** : ಸಂಗೀತ ವಿದ್ಯಾರ್ಥಿಗಳಿಗೆ, ಸಂಗೀತ ಪ್ರೇಮಿಗಳಿಗೆ, ರಸಿಕರಿಗೆ ನಿಮ್ಮ ಸಂದೇಶವೇನು ?

**ಉ** : ಉತ್ತಮ ರಾಗಜ್ಞಾನ, ಸ್ವರಜ್ಞಾನ, ಗಮಕಗಳ ಪ್ರಯೋಗ, ಸಾಹಿತ್ಯವನ್ನು ಸ್ಥೂಲವಾಗಿ ಯಾದರೂ ಅರ್ಥೈಸಲು ಬೇಕಾದಷ್ಟು ಸಂಸ್ಕೃತ, ತೆಲುಗು, ತಮಿಳು ಭಾಷೆಗಳ ಜ್ಞಾನ- ಇವಿಷ್ಟು ಇದ್ದರೆ, ಉತ್ತಮ ಕೇಳ್ಮೆಯನ್ನು ರೂಢಿಸಿಕೊಂಡಲ್ಲಿ, ಸ್ವರಲಿಪಿಯಿಂದ ವಾಗ್ಗೇಯಕಾರರ ಆಶಯಕ್ಕೆ ಚ್ಯುತಿಯಿಲ್ಲದೆ ಯಥಾವತ್ತಾಗಿ ಹಾಡಬಹುದು.

ನಮಗೆ ಭಾಷೆ ಅಥವಾ ಉಪಭಾಷೆ ಎಷ್ಟು ಚೆನ್ನಾಗಿ ಬಂದರೂ ಅದೊಂದು ಆಸ್ತಿಯೇ ವಿನಾ ಅದನ್ನು ನಮ್ಮ ದುರ್ಬಲತೆ ಅಂತ ತಿಳಿಯಬಾರದು. ತಾವು ಒಪ್ಪುತ್ತೀರಲ್ಲ ನನ್ನ ಮಾತನ್ನ ?

**ಹೊ** : ಓಹೋ ! ನಾವೆಲ್ಲ ಸಹಮತರು ಆ ವಿಷಯದಲ್ಲಿ.

**ಉ** : ಬೇರೆ ಭಾಷೆಗಳನ್ನು ತಿಳಿದುಕೊಳ್ಳುವುದು ಕನ್ನಡಕ್ಕೆ ಕೊರತೆ ಅಲ್ಲ. 'ಕನ್ನಡಕ್ಕೆ ಇಂಗ್ಲಿಷು ಕಿಂಚಿತ್ತು ಬೆರೆತರದು ಸಿನ್ನುಗಳ ಲಿಸ್ಟಿನಲ್ಲಿ ಹೈಯೆಷ್ಟು, ಅದರಿಂದ ಫನ್ನಿಗೂ ಮಿಕ್ಸದಿರು ಸರ್ವಜ್ಞ' ಅಂತ ರಾಜರತ್ನಂ ಹೇಳಿದ್ರು.

**ಹೊ** : ಕೀರ್ತನೆಗಳನ್ನೆಲ್ಲ ಬರೆದಿದ್ದೀರ. ಅದನ್ನೆಲ್ಲ ಸರಿಯಾಗಿ ಹಾಡುವವರು ಇದ್ದಾರಾ ?

**ಉ** : ಈಗ... ನಾನು ಬರೆದದ್ದನ್ನು ತಕ್ಕೊಂಡು ಎಷ್ಟು ಉಪಯೋಗಿಸ್ತಾರೊ... ಅಥವಾ ಇದನ್ನು... ನಾನು ಅದಕ್ಕೆ ಹೋಗಲೇ ಇಲ್ಲ. ನಾನಿವತ್ತು ಬರೆದದ್ದಲ್ಲ. ನಲವತ್ತು ವರ್ಷಗಳಿಂದ ಮಾಡ್ತಾನೆ ಇದ್ದೀನಿ.

**ಹೊ** : ಇಂದಿನ ಸಂಗೀತ ಕ್ಷೇತ್ರದ ಅಗತ್ಯಗಳೇನು ?

**ಉ** : ವಿವಿಧ ಭಾಷೆಗಳಲ್ಲಿ ವಾಗ್ಗೇಯಕಾರರ ಸಮಗ್ರ ರಚನೆಗಳು ಕನ್ನಡದಲ್ಲೂ ಸಿಗುವಂತಾಗಬೇಕು. ಬರೇ ಶಾಸ್ತ್ರಗ್ರಂಥಗಳನ್ನು ಓದಿಕೊಂಡರೆ ಸಾಲದು. ಪ್ರಯೋಗ ಭಾಗದಲ್ಲೂ ಅಷ್ಟೇ ನೈಪುಣ್ಯವನ್ನು ಸಾಧಿಸುವುದು ಅವಶ್ಯ.

ಸಂಗೀತಗಾರರು ಆದಷ್ಟು ಮಟ್ಟಿಗೆ ವೈವಿಧ್ಯಪೂರ್ಣ ರಚನೆಗಳನ್ನು ಅಭ್ಯಾಸ ಮಾಡಬೇಕು. ಗುರುಗಳು ಹೇಳಿದ್ದಷ್ಟೇ ಅಂತ ಇಟ್ಟುಕೊಳ್ಳಬಾರದು. ರಾಗಗಳ ಸ್ವರೂಪಗಳನ್ನು ತಿಳಿಯಲಿಕ್ಕೆ ಪ್ರಯತ್ನಪಟ್ಟು - ರಾಗಗಳ ಸ್ವರೂಪವನ್ನು ಮನಸ್ಸಿನ ಅಂತಃಚಕ್ಷುಗಳಿಗೆ ಕಾಣುವಂತೆ ಕಲ್ಪಿಸಿಕೊಂಡಾಗ ಮಾತ್ರ ಹೊಸ ರಚನೆಗಳು ಹೆಚ್ಚು ಪ್ರಚಾರಕ್ಕೆ ಬರುತ್ತವೆ. ಅದರಲ್ಲಿರುವ ಸಾಹಿತ್ಯ ವಿಶೇಷವನ್ನು ಎತ್ತಿ ಹಿಡಿಯುವ ಹಾಗೆ ಹಾಡುವ ಚಾತುರ್ಯ ಬೆಳೆಸಿಕೊಳ್ಳಬೇಕು.

ನಮ್ಮಲ್ಲಿ ಕನ್ನಡದ ರಚನೆಗಳು ಬಹಳ ಬಹಳ ಕಡಿಮೆ. ಸಾಹಿತ್ಯ ವಿದ್ವಾಂಸನಿಗೆ ಸಂಗೀತದ ಗಂಧ ಇರುವುದಿಲ್ಲ. ಒಳ್ಳೆಯ ಸಂಗೀತ ತಿಳಿದವನಿಗೆ ಸಾಹಿತ್ಯ ಜ್ಞಾನ ಸೊನ್ನೆ. ನಮ್ಮಲ್ಲಿ ಇದೊಂದು ಅಪೂರ್ಣತೆ ಅಂತ ಹೇಳ್ತೇನೆ. ಯಾಕೆಂದರೆ ಸಂಗೀತದಲ್ಲಿ ನಾವು ರಚನೆಗಳನ್ನು ಶ್ರಮಪಟ್ಟು ಬರೆಯಬೇಕೆಂದರೆ ಸಾಹಿತ್ಯ ಜ್ಞಾನ ಇರಬೇಕು. ಅದಕ್ಕೆ ದೀಕ್ಷಿತರ ಕೃತಿಗಳೇ ಉದಾಹರಣೆ.





ಸಂಗೀತ ಮತ್ತು ಸಾಹಿತ್ಯ ಎರಡೂ ಅಂಟಿಕೊಂಡೇ ಇರಬೇಕು. ವಾಗ್ಗೇಯಕಾರರಿಂದ ಸಾಹಿತ್ಯದ ಜೊತೆ ಜೊತೆಯಾಗಿ ಸಂಗೀತ ಹರಿದು ಬರಬೇಕೇ ವಿನಾ ಒಂದಿಷ್ಟು ಸಾಹಿತ್ಯ ಬರೆದು ಅದನ್ನು ಸಂಗೀತ ಮಾಡಿದರೆ ಅದು ವಾಗ್ಗೇಯ ರಚನೆ ಆಗುವುದಿಲ್ಲ.

**ಹೊ** : ಎರಡನ್ನೂ ಸೇರಿಸಿ ಪು.ತಿ.ನ. ಅಂಥವರು ರಚನೆ ಮಾಡಿದ್ದಾರಲ್ಲ ?

**ಉ** : ಹೌದು. ಪು.ತಿ.ನ. ಅವರು ಒಂದು ದಿನ 'ಶಬರಿ' ನಾಟಕವನ್ನು ಹಾಡಿ ತೋರಿಸಿದರು. ಅದನ್ನು ರೆಕಾರ್ಡ್ ಮಾಡಿಕೊಂಡು ಮನೆಗೆ ತಂದು ನಾನೂ ಕೇಳಿ, ಪರಿಷ್ಕರಣೆ ಮಾಡಿ ಅವರಿಗೆ ಹಾಡಿ ತೋರಿಸಿದೆ.

**ಹೊ** : ಡಿ.ವಿ.ಜಿ. ಅವರ ಅಂತಃಪುರ ರಚನೆ ?

**ಉ** : ನಾನು ಅದೆಲ್ಲಕ್ಕೂ ಪ್ರಸ್ತಾರ ಹಾಕಿ ಬರೆದಿಟ್ಟಿದ್ದೀನಿ... ಅದನ್ನೆಲ್ಲ ಯಾರು ಪ್ರಕಟಿಸುತ್ತಾರೆ ? ದುಡ್ಡು ಬೇಕಲ್ಲ ಇದಕ್ಕೆಲ್ಲ. ಇವತ್ತು ನಾಳೆ ಮಾರಿ ಹೋಗುವಂಥವಲ್ಲ ಸಂಗೀತ ಪುಸ್ತಕಗಳು.

**ಹೊ** : ಪುರಂದರದಾಸರ ಕೊಡುಗೆ ಏನು ?

**ಉ** : ಪುರಂದರದಾಸರ ಅತ್ಯಂತ ಮಹತ್ವದ ಕೊಡುಗೆ ಎಂದರೆ ಸಂಗೀತ ಕಲಿಯಲು ಆರಂಭಿಸುವವರಿಗೆ ದಾರಿ ತೋರಿಸಿದ್ದು. ಪುರಂದರದಾಸರು ಕೃತಿ ರಚನೆ ಮಾಡಿದ್ದು ಮುಖ್ಯವಾಗಿ ಸಮಾಜದ ರೀತಿ ನೀತಿಗಳನ್ನು, ಓರೆಕೋರೆಗಳನ್ನು ತಿದ್ದಲಿಕ್ಕೆ ! ''ಹಂದಿ ಇದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ ನಿಂದಕರಿರಬೇಕಿರಬೇಕು'' ಅಂತ ಹೇಳಿದ್ರು. ಅವರ ಕೃತಿಗಳಲ್ಲಿ ಸಾಹಿತ್ಯದ ಆಳ ಬಹಳ ಚೆನ್ನಾಗಿದೆ.

ಕನಕದಾಸರು ಬರೆದ ಒಂದು ವಿಶೇಷವಾದ ಕೃತಿ... ಇದು ಪ್ರಚಲಿತದಲ್ಲಿಯೇ ಇಲ್ಲ.

'ಪರಮ ಪುರುಷ ನೀ ನೆಲ್ಲಿಕಾಯಿ
ಸರಸಿಯೊಳಗಡಗಿರೆ, ಕೂಹೀರೆಕಾಯಿ
ಹಿರಿದು ಮಾಡಿದ ಪಾಪ ನುಗ್ಗೆಕಾಯಿ.'

ಒಂದೊಂದು ಸಾಲೂ ಎರಡು ನಮೂನೆಯಲ್ಲಿ ಹಾಡಬೇಕು. ಕನ್ನಡ ಚೆನ್ನಾಗಿ ಗೊತ್ತಿದ್ದರೆ ಅದರ ಅರ್ಥವೈಭವ ತಿಳಿಯುತ್ತೆ.

**ಹೊ** : 'ರಾಗಿ ತಂದಿರಾ' ಎಂಬುದೂ ಅಷ್ಟೆ. ಹೀಗೆಯೇ ಇದೆ.

**ಹೊ** : ಕನ್ನಡದಲ್ಲಿ ಹೊಸ ಕೃತಿಗಳ ರಚನೆ ಅಗತ್ಯ ಇದೆಯೇ ?

**ಉ** : ಅಗತ್ಯ ಇದೆ. ನೀವು ಕನ್ನಡದ ಕೃತಿಗಳನ್ನು ಹಾಡ್ತೀರಾದರೆ ಅಗತ್ಯ ಇದೆ. ಕನ್ನಡದಲ್ಲಿ ಆ ರೀತಿಯ ರಚನೆಗಳು ಬಂದರೆ ಅದು ಸ್ವಾಗತಾರ್ಹ. ರಚನೆಗಳು ಹೆಚ್ಚು ಹೆಚ್ಚಾಗಿ ಆಗಬೇಕು. ಸಾಹಿತ್ಯದಲ್ಲಿ ಪ್ರಗಲ್ಭವಾದ ಜ್ಞಾನ ಇದ್ದು ಬರೆದರೆ ಅವು ಉತ್ತಮ ವಾಗ್ಗೇಯ ಕೃತಿಗಳಾಗುತ್ತವೆ. ಸಂಗೀತ ಬೆಳೆಯಬೇಕಾದಲ್ಲಿ ರಚನೆಗಳನ್ನು ಮಾಡುತ್ತಾ ಹೋಗಬೇಕು. ಮಾಡಿದ ಎಲ್ಲ ರಚನೆಗಳನ್ನೂ ಜನರು ತಿಳಿದುಕೊಂಡು ಅದರಲ್ಲಿ ಅಂತಃಸತ್ವ ಇರುವ ಕೃತಿಗಳು ಉಳಿದುಕೊಳ್ತವೆ. ಸತ್ವವಿಲ್ಲದಿದ್ದ ಕೃತಿಗಳು ಜೊಳ್ಳು. ಅವು ಬಿದ್ದುಹೋಗ್ತಾವೆ. ಪ್ರಸ್ತಾರ ಸಹಿತ ಅವರು ಇದನ್ನು ಬರೆಯಬೇಕು. ಅಣ್ಣಮಾಚಾರ್ಯರು ಅವರ ರಚನೆಗಳಲ್ಲಿ ಒಂದೂವರೆ ಕೃತಿ ಕೂಡ ಹಾಡುವವರು ಯಾರೂ ಇಲ್ಲ.

ವಾಗ್ಗೇಯ ಕೃತಿಯನ್ನು ರಚಿಸುವುದು ಸಾಹಿತ್ಯದಲ್ಲಿ ಒಳ್ಳೆಯ ಪಾಂಡಿತ್ಯ, ಅಡಿಪಾಯ ಇದ್ದವರಿಗೆ ಕಷ್ಟವೇನಲ್ಲ. ಅಂತ್ಯಪ್ರಾಸ, ಆದಿಪ್ರಾಸ ಎಲ್ಲ ಹಾಕಿ ಮುತ್ತುಸ್ವಾಮಿ ದೀಕ್ಷಿತರು ಬರೆದ ಹಾಗೆ ಬರೀಲಿಕ್ಕೆ ನಮಗೆ ಸಾಧ್ಯ ಇಲ್ಲ ಅಥವಾ ಕಷ್ಟ ಆಗಬಹುದು. 'ಸೂರ್ಯ' ಅಂತ ಹೇಳಲಿಕ್ಕೆ ಒಂದು ಹದಿನೈದು ನಮೂನೆಯಲ್ಲಿ ಹೇಳಿದ್ದಾರೆ. 'ಬ್ರಹ್ಮ' ಅಂತ ಹೇಳಲಿಕ್ಕೆ ಒಂದು ಇಪ್ಪತ್ತು ನಮೂನೆಯಲ್ಲಿ ಹೇಳಿದ್ದಾರೆ. ರಾಜಗೋಪಾಲಚಾರಿ ಅವರ ನಿಘಂಟು ಇಟ್ಟುಕೊಂಡು ಎಲ್ಲ ಅರ್ಥ ನೋಡಿ ಭಾವಾರ್ಥ ಬರೆದೆ ನಾನದಕ್ಕೆ. ಅಷ್ಟು ಅರ್ಥ ವೈಶಾಲ್ಯ ! ಅದರ ಅರ್ಥ ವೈಶಾಲ್ಯ ತಿಳಿದರೆ ಮಾತ್ರ ರಸಾನುಭವ ಸಾಧ್ಯ. ಇಲ್ಲದಿದ್ದರೆ ''ಅಜಗಜ ರಾಕ್ಷಸ ಗಜಚರ್ಮಾಂಬರ'' ಅಂತ ಹಾಡ್ತಿದ್ದರು. 'ಅಜಗಜ ರಕ್ಷಕ' ಅಂತ ಹೇಳಲಿಕ್ಕೆ ! ನೋಡಿ – 'ಶ್ರೀ ಚಾ... ಮುಂಡೇಶ್ವರಿ' ಮಾಡಿಬಿಟ್ಟರು. ಈ ರೀತಿ ಸಾಹಿತ್ಯ ಮಾಡಿದರೆ ?? ಕೃತಿ ರಚನಕಾರರು ಏನು ಮಾಡಿದರೆಂದರೆ 'ಚಾ'ಗೆ ಪ್ರಸ್ತಾರ ಜಾಸ್ತಿ ಕೊಟ್ಟುಬಿಟ್ಟರು. 'ಮುಂಡೇಶ್ವರಿ' ಆಯ್ತು. ಅರ್ಥ ತಿಳಿದು ಹಾಡುವಾಗ ಮಾತ್ರ ಅದು ಚಾಮುಂಡೇಶ್ವರಿ ಅಂತ ಹಾಡಲಿಕ್ಕೆ ಆಗುತ್ತೆ. ಅದಕ್ಕೆ ಅಭ್ಯಾಸ ಬೇಕು. ಅರ್ಥ ವೈಶಾಲ್ಯದ ಗ್ರಹಣ ಶಕ್ತಿಯೂ ಬೇಕು. ಸಾಹಿತ್ಯಕ್ಕೆ ಸರಿಯಾದ ಪರಿಪಕ್ವತೆ ಬೇಕು. ಗಮಕಕ್ಕಾಗಿ ಹಾಗೆ ಏನೇನೋ ಪ್ರಸ್ತಾರ ಹಾಕಿದರು ಅಂತ ಇಟ್ಟುಕೊಳ್ಳಿ. ಆಗೇನಾಗುತ್ತೆ?

**ಹೊ** : ಇರುವ ದಾಸರ ಪದಗಳಿಗೆ ಹೊಸ ರಾಗ ಸಂಯೋಜಿಸಿ ಪ್ರಯೋಗ ಮಾಡಬೇಕೇ ?

**ಉ** : ಪುರಂದರ - ಕನಕದಾಸರ ಅಥವಾ ಇತರ ದಾಸರ ಪದಗಳನ್ನು ವಿಧ ವಿಧ ರಾಗಗಳ ಸಂಯೋಜನೆಗಳಿಂದ ಕಛೇರಿಗಳಲ್ಲಿ ಹಾಡುವಿಕೆಯು ಅಷ್ಟು ಸಮರ್ಪಕವಲ್ಲ ಎಂದು ನನ್ನ ಭಾವನೆ. ದಾಸರ ಪದಗಳು ಜನಜೀವನದಲ್ಲಿ ಉನ್ನತಿಯನ್ನು ಸಾಧಿಸುವಲ್ಲಿ ನೆರವಾಗುವ, ತಾನಾಗಿ ಆವಿರ್ಭವಿಸಿದ ರಚನೆಗಳು.

ಆಯಾ ರಚನೆಗಳಿಗೆ ಯೋಗ್ಯವಾದ, ಭಾವಾಭಿವ್ಯಕ್ತಿಯನ್ನು ಸಾಧಿಸಬಲ್ಲ ಆರ್ಷೇಯವಾದ ರಾಗಗಳನ್ನು ಆರಿಸಿಕೊಂಡು ದಾಸರ ಪದಗಳಿಗೆ ಪ್ರಸ್ತಾರ ಕಲ್ಪಿಸಿ ಹಾಡಿದರೆ ಒಳಿತು. ಹೊಸದಾಗಿ ಆವಿಷ್ಕಾರವಾದ ರಾಗಗಳಲ್ಲಿ ದಾಸರ ಪದಗಳಿಗೆ ಸ್ವರ ಪ್ರಸ್ತಾರದ ವೈಭವ ತೋರುವುದು ಅಷ್ಟು ಸಮಂಜಸವಾಗಲಾರದೆಂದು ನನ್ನ ಪ್ರಾಮಾಣಿಕವಾದ ಅಭಿಪ್ರಾಯ.

**ಹೊ** : ಹೊಸ ರಾಗಗಳನ್ನು ನಿರ್ಮಿಸಬಹುದೆ ?

**ಉ** : ಸಂಗೀತ ಒಂದು ಕಲೆ. ಮೊದಲು ಆಲಿಸಬೇಕು. ನಂತರ ಗ್ರಹಿಸುವುದು, ಅರ್ಥಮಾಡಿಕೊಳ್ಳುವುದು ಮತ್ತು ಆಸ್ವಾದಿಸುವುದು, ನಂತರ ಕಲಿಯುವುದು, ಆಮೇಲಷ್ಟೆ ಸುಧಾರಣೆ, ಅಭಿವೃದ್ಧಿ ಸಾಧ್ಯ.

ಹೊಸ ರಾಗಗಳನ್ನು ನಿರ್ಮಿಸುವುದೆಂದರೆ ಆರೋಹಣ-ಅವರೋಹಣಗಳನ್ನು ಮಾತ್ರ ಹೇಳಿದರೆ ಸಾಲದು. ಆ ರಾಗದ ಸ್ವರೂಪವನ್ನು ಮನಃಪಟಲದಲ್ಲಿ ಕಲ್ಪಿಸಿ ಕೊಂಡು ವಾಗ್ಗೇಯ ರಚನೆಗಳನ್ನು ನೀಡಿದಾಗ ಮಾತ್ರ ಹೊಸ ರಾಗಗಳ ನಿರ್ಮಿತಿಯಾಗುತ್ತದೆ.

ತ್ಯಾಗರಾಜ, ದೀಕ್ಷಿತ, ಶ್ಯಾಮಾಶಾಸ್ತ್ರಿಗಳಾದಿಯಾಗಿ ಮುತ್ತಯ್ಯ ಭಾಗವತರು, ಜಯ ಚಾಮರಾಜೇಂದ್ರ ಒಡೆಯರು, ಯೋಗಾನರಸಿಂಹ, ಚೆನ್ನಕೇಶವಯ್ಯ, ಬಾಲಮುರಳೀಕೃಷ್ಣ ಮುಂತಾದ ಅನೇಕ ವಿದ್ವಾಂಸರು ಹೊಸ ರಾಗಗಳನ್ನು ಕಂಡು ಕೊಂಡು ರಚನೆಗಳನ್ನು ನೀಡಿದ್ದಾರೆ. ಅವುಗಳ ಅಭ್ಯಾಸ ನಡೆಯಬೇಕು.

ಒಡೆಯರ ೯೦ಕ್ಕೂ ಮಿಕ್ಕಿದ ರಚನೆಗಳು ಪ್ರಸ್ತಾರಸಹಿತ ಹೊರಬೀಳಬೇಕು.

**ಹೊ** : ಅಧ್ಯಯನಪೂರ್ಣ ಪ್ರಬಂಧಗಳು, ಪ್ರಕಟಣೆಗಳು ಏನಾಗಬೇಕು ?

**ಉ** : ಎಲ್ಲ ರಚನೆಗಳೂ ಪ್ರಸ್ತಾರಸಹಿತವಾಗಿ ಪ್ರಕಟಣೆಯಾಗಬೇಕು.

ತ್ಯಾಗರಾಜ ಕೃತಿಗಳ ಅಧ್ಯಯನಕ್ಕೆ ನೆರವಾಗುವ 'ಸ್ಪಿರಿಚುಯಲ್ ಹೆರಿಟೇಜ್ ಆಫ್ ತ್ಯಾಗರಾಜ' ಎಂಬ ರಾಮಕೃಷ್ಣಾಶ್ರಮದ ಪ್ರಕಟಣೆ ಇಂದಿಗೂ ಪ್ರಸ್ತುತವಾಗಿದೆ. ಅಧ್ಯಯನ ಯೋಗ್ಯವಾಗಿದೆ. ಪುರಂದರದಾಸರ ಪದಗಳ ನಾಲ್ಕು ಸಂಪುಟಗಳಿಗೂ ಸಂಪಾದಕರಾಗಿದ್ದ ಪ್ರೊ|| ಎಸ್. ಕೆ. ರಾಮಚಂದ್ರರಾಯರು ಬರೆದ ಪ್ರಬಂಧಗಳೂ ಪ್ರತಿಯೊಂದು ಕ್ಲಿಷ್ಟ ಪದದ ಅರ್ಥವಿಶ್ಲೇಷಣೆಯೂ ಯಾವೊತ್ತಿಗೂ ಮನನಯೋಗ್ಯವಾಗಿವೆ.

ದೀಕ್ಷಿತರು, ಶ್ಯಾಮಾಶಾಸ್ತ್ರಿಗಳ ಕೃತಿಗಳ ಬಗ್ಗೆಯೂ ಸರ್ವಾಂಗೀಣ ಹಿರಿಮೆಯುಳ್ಳ ಎಲ್ಲಾ ಕೃತಿಗಳ ಅರ್ಥವೈಭವದ ಬಗ್ಗೆ ಗ್ರಂಥಗಳ ಪ್ರಕಟಣೆಗಳು ಆಗಬೇಕು.

**ಹೊ** : ಕರ್ನಾಟಕ ಸಂಗೀತದ ಭವಿಷ್ಯವೇನು ? ಸಂಗೀತದ ವಾಣಿಜ್ಯೀಕರಣ ನಡೀತಾ ಇದೆ. ಸಿನಿಮಾ ಹಾಡುಗಳ ಭರಾಟೆ ಜಾಸ್ತಿ ಆಗ್ತಾ ಇದೆ. ಸುಗಮಸಂಗೀತ ಬರ್ತಾ ಇದೆ. ಕರ್ನಾಟಕ ಸಂಗೀತ ಉಳಿಯಲಿಕ್ಕೆ ಸಾಧ್ಯವೆ? ಇವೆಲ್ಲ ಕೂಡಿ ಬಾಳುವುದು ಸಾಧ್ಯ ಇದೆಯಾ ?

**ಉ** : ಕರ್ನಾಟಕ ಶಾಸ್ತ್ರೀಯ ಸಂಗೀತದ ಭವಿಷ್ಯ ಉಜ್ವಲವಾಗಿದೆ ಎಂಬುದು ನಿಸ್ಸಂದೇಹ.

ಗುರುವಿನಿಂದ ಶಿಷ್ಯನಿಗೆ ಬರತಕ್ಕ ವಿದ್ಯೆ. ಇಂತಹ ಮೌಲ್ಯಗಳು ಇದ್ದಾವೆ ಅಂತ ಗುರು ಶಿಷ್ಯನಿಗೆ ಹೇಳಿಕೊಡದಿದ್ದರೆ ಶಿಷ್ಯನಿಗೇ ಅವುಗಳನ್ನು ಬೆಳೆಸಿ ಕೊಳ್ಳುವ ಹೊತ್ತಿಗೆ ನನ್ನಷ್ಟು ವಯಸ್ಸಾಗಿರುತ್ತೆ.

ಶ್ರೋತೃಗಳನ್ನು ಮೆಚ್ಚಿಸಲೆಂದು ಹಾಡುವ ಮನೋಭಾವ ಹೋಗ ಬೇಕು. ಅಂತಃಸತ್ವವನ್ನು ಜನರಿಗೆ ತೋರಿಸುವುದು ಹೇಗೆ? ನನ್ನ ಕ್ರಮ ಹೀಗೆ... ನೀವು ಮೆಚ್ಚಿ, ಇಲ್ಲ ಬಿಡಿ. ಕೇಳುಗರು ಬಂದರೆ ಬರಲಿ ಬರದಿದ್ದರೆ ಬೇಡ – ಈ ರೀತಿಯ ಭಾವನೆ ನಮ್ಮ ಈಗಿನ ಕಲಾವಿದರಲ್ಲಿ ಇಲ್ಲ. ಇದು ತಪ್ಪು. ಹತ್ತು ಜನರು ಮಾತ್ರ ತಿಳಿದವರು ಬಂದು ಕೂತುಕೋಬಹುದು. ಮೊದಲಿಗೆ ಹಾಗಲ್ಲ... ಎಂ. ಎಸ್. ಸುಬ್ಬುಲಕ್ಷ್ಮಿಯವರು ಹಾಡುವಾಗ ವಾಸುದೇವಾಚಾರ್ಯರು ಕಛೇರಿ ಕೇಳಲು ಹೋಗುತ್ತಿದ್ದರಂತೆ. ಎಂ. ಎಸ್. 'ಬ್ರೋಚೇವಾರೆವರುರಾ' ಹಾಡಿದಾಗ ವಾಸುದೇವಾಚಾರ್ಯರು ''ನನ್ನ ಕೃತಿ ಹಾಡಿದರೆ ಇಷ್ಟು ಚೆನ್ನಾಗಿ ಆಗುತ್ತೆ ಅಂತ ನನಗೆ ಗೊತ್ತೇ ಇರಲಿಲ್ಲ!'' ಹಾಗೆ ಅಂತ ಹೇಳಿದರಂತೆ. ವಾಸುದೇವಾಚಾರ್ಯರಿಗೆ ಒಳ್ಳೆಯ ಸಂಸ್ಕೃತ ಬರ್ತಿತ್ತು.

ಹಳೆಯ ಸಂಗೀತದ ರೂಪುರೇಷೆಯನ್ನು ನೀಡುವ ಬ್ರಹ್ಮಶ್ರೀ ಸುಬ್ಬರಾಮ ದೀಕ್ಷಿತರ 'ಸಂಗೀತ ಸಂಪ್ರದಾಯಪ್ರದರ್ಶಿನಿ'ಯ ಕನ್ನಡ ಭಾಷಾಂತರದ ಸಂಪುಟಗಳು ಮತ್ತು ಪ್ರಥಮಾಭ್ಯಾಸ ಪುಸ್ತಕವು (ಅನನ್ಯ ಸಂಸ್ಥೆಯಿಂದ ಪ್ರಕಟಿತ), ಗೋವಿಂದಾಚಾರ್ಯರ ಸಂಗ್ರಹ ಚೂಡಾಮಣಿ ಮತ್ತು ಅವರು ಬರೆದ ಲಕ್ಷಣಗೀತೆಗಳನ್ನು ಮಹಾವೈದ್ಯ ನಾಥಯ್ಯರ ಮೇಳರಾಗಮಾಲಿಕೆ (ಇದು ಶ್ರುತಿರಂಜನಿ ಸಂಸ್ಥೆಯಿಂದ ಪ್ರಕಟಿತ) ಮುಂತಾದ ಶಾಸ್ತ್ರ ಪ್ರಯೋಗ ಎರಡನ್ನೂ ಒಳಗೊಂಡ ರಚನೆಗಳು ಅಭ್ಯಾಸ ಯೋಗ್ಯವಾಗಿವೆ. ಇವುಗಳ ಅಧ್ಯಯನ, ಅಭ್ಯಾಸಗಳಿಂದ ಶಾಸ್ತ್ರೀಯ ಸಂಗೀತದ ತಳಪಾಯ ಇನ್ನಷ್ಟು ಭದ್ರವಾಗುತ್ತದೆ. ಸ್ವರಜ್ಞಾನ ವೃದ್ಧಿಯಾಗುತ್ತದೆ.

ಇಂದಿನ ಅಭ್ಯಾಸ, ವಿನಿಕೆಗಳೇ ನಾಳಿನ ಸಂಪ್ರದಾಯವಾಗುತ್ತದೆ ಎಂಬುದು ನಾವು ಮನಗಂಡಿರುವ ಸತ್ಯ.

**ಹೊ** : ಬಹಳ ಸಮಯ ತೆಗೆದುಕೊಂಡೆವು. ನಿಮಗೆ ಆಯಾಸವಾಗುವಂತೆ ಮಾಡಿದೆವು. ಕ್ಷಮಿಸಿ. 'ಹೊಸತು' ಪರವಾಗಿ ನಿಮಗೆ ನಮ್ಮೆಲ್ಲರ ಧನ್ಯವಾದಗಳು.

*(ಮಾಹಿತಿ : ಶ್ರೀ ಆನಂದರಾಮ ಉಡುಪರು ಬರೆದ ಪುಸ್ತಕಗಳು ಬೆಂಗಳೂರಿನ ಅನನ್ಯ ಮತ್ತು ಶ್ರುತಿರಂಜನಿ ಸಂಸ್ಥೆಗಳಲ್ಲಿ ದೊರೆಯುತ್ತವೆ. ಆನಂದರಾಮ ಉಡುಪರ ವಿಳಾಸ: ಆನಂದರಾಮ ಉಡುಪ, ೭೬, ೧ನೇ ಹಂತ, ೫ನೇ ಮುಖ್ಯರಸ್ತೆ, ಪೋಸ್ಟಲ್ ಕಾಲೋನಿ, ಸಂಜಯನಗರ, ಬೆಂಗಳೂರು - ೫೬೦ ೦೯೪.)*

ಲೇಖನ ಸಿದ್ಧಪಡಿಸಿದವರು : ಸಹನ
ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಷನ್, ಇಸ್ರೋ ಲೇಔಟ್, ಬೆಂಗಳೂರು - ೭೮

# ಇರುವೆ ಮತ್ತು ಮಿಡತೆಯ ಕತೆ

ಅನು : ಡಾ|| ಸುಧಾ

ಸಣ್ಣವನಾಗಿದ್ದಾಗ, ನನಗೆ ಕತೆಗಳನ್ನು ಓದುವ ಚಟ ಬಹಳ ಇತ್ತು. ಆಗೆಲ್ಲ ನನಗೆ ಓದಲು ಸಿಗುತ್ತಿದ್ದ ಕತೆಗಳಲ್ಲಿ ಹೆಚ್ಚಿನವು ನೀತಿಕತೆಗಳೇ ಆಗಿರುತ್ತಿದ್ದವು. ತರಗತಿಯ ಪಠ್ಯದಲ್ಲಿ ಮಾತ್ರವೇ ಅಲ್ಲದೆ ನಾನು ಓದುತ್ತಿದ್ದ ಮಕ್ಕಳ ಕತೆ ಪುಸ್ತಕಗಳಲ್ಲಿ ಬಹಳಷ್ಟು ಇರುತ್ತಿದ್ದದ್ದು ಇಂಥವೇ. ಅಂತಹವುಗಳಲ್ಲಿ ಒಂದು 'ಇರುವೆ ಮತ್ತು ಮಿಡತೆ'ಯ ಕತೆ. ಆಡು ಮಾತಿನಲ್ಲಿ ಹೇಳಬೇಕೆಂದರೆ, 'ಕಷ್ಟಪಟ್ಟರೆ ಸುಖವುಂಟು, ಇಲ್ಲದಿದ್ದರೆ ಇಲ್ಲ' ಎಂಬುದೇ ಈ ಕತೆಯ ನೀತಿ. ಕತೆಯಲ್ಲಿ ಬರುವ ಇರುವೆ ಬೇಸಿಗೆಯಲ್ಲಿ ಬಹಳ ಕಷ್ಟಪಟ್ಟು, ಚಳಿಗಾಲದ ದಿನಗಳಿಗಾಗಿ ಆಹಾರವನ್ನು ಕೂಡಿಟ್ಟುಕೊಂಡಿರುತ್ತದೆ. ಮಿಡತೆ ಮಾತ್ರ ಎಳೆ ಬಿಸಿಲಿನಲ್ಲಿ ಮೈ ಕಾಯಿಸಿಕೊಳ್ಳುತ್ತ, ಅತ್ತಿತ್ತ ಆರಾಮವಾಗಿ ಹಾರುತ್ತ ಬೇಸಿಗೆಯ ದಿನಗಳನ್ನೆಲ್ಲ ಸೋಮಾರಿಯಾಗಿಯೇ ಕಳೆದು ಬಿಟ್ಟಿರುತ್ತದೆ. ಚಳಿಗಾಲ ಬರುತ್ತಿದ್ದಂತೆ, ತನ್ನ ಸೋಮಾರಿತನದ ಪರಿಣಾಮ ಮಿಡತೆಗೆ ತಿಳಿಯ ತೊಡಗುತ್ತದೆ. ಕಷ್ಟಪಡಬೇಕಾದ ಕಾಲದಲ್ಲಿ ಸೋಮಾರಿಯಾಗಿರದೆ ದುಡಿದ ಇರುವೆ ಯಾದರೋ ಈಗ ಸುಖವಾಗಿ ದಿನ ಕಳೆಯುತ್ತಿರುತ್ತದೆ. ಆಹಾರಕ್ಕಾಗಿ ಇರುವೆಯನ್ನು ಬೇಡಲು ಬಂದ ಮಿಡತೆಗೆ ಖಾರವಾದ, ನಕಾರಾತ್ಮಕ ಉತ್ತರ ಸಿಗುತ್ತದೆ.

''ಬೇಸಿಗೆಯಲ್ಲೆಲ್ಲ ಹಾಡುತ್ತ ಕುಣಿಯುತ್ತ ಇದ್ದೆಯಲ್ಲವೇ ನೀನು ? ಹೋಗು, ಈಗಲೂ ಅದೇ ಕೆಲಸವನ್ನು ಮುಂದುವರಿಸು.'' ಮಿಡತೆ ಬರಿಗೈಯಿಂದ ಹಿಂದಿರುಗುತ್ತದೆ.

ಎಳೆಯನಾಗಿದ್ದ ನನಗೆ, ಅಷ್ಟೊಂದು ದರ್ಪದಿಂದ ಉತ್ತರಿಸಿದ ಆ ಇರುವೆಯ ಮೇಲೆ ತುಂಬ ಕೋಪ ಮತ್ತು ಉಪವಾಸದಿಂದ ಬಳಲಿದ ಮಿಡತೆಯ ಸ್ಥಿತಿಗೆ 'ಅಯ್ಯೋ ಪಾಪ' ಅನ್ನಿಸಿತ್ತು. ಈ ಕಾರಣಕ್ಕಾಗೇ, ಕಂಡ ಕಂಡ ಇರುವೆಗಳನ್ನೆಲ್ಲ ತುಳಿದು ಕೊಂದುಬಿಡುವ ಅಭ್ಯಾಸ ನನಗಿತ್ತು ಎಂದರೆ ನೀವು ನಂಬಲಿಕ್ಕಿಲ್ಲ, ಅಲ್ಲವೆ ? ಆದರೆ ಬಹಳ ವಿಚಿತ್ರ ಹಾಗೂ ಅಸಹಜ ಎನ್ನಿಸುವ ಆ ದೃಷ್ಟಿಕೋನ ಅಂದಿನ ದಿನಗಳಲ್ಲಿ ನನ್ನದಾಗಿದ್ದದ್ದು ನಿಜ. ಬಹುಶಃ ನನ್ನ ವಯಸ್ಸಿನ ಅಪ್ರಬುದ್ಧತೆಯೇ ಇದಕ್ಕೆ ಕಾರಣವಾಗಿರಬಹುದು. ಅದೇನೇ ಇರಲಿ, ನಾನು ಬೆಳೆದಂತೆಲ್ಲ ಈ ಬಾಲಿಶ ವಿಚಾರ ಮರೆಯಾಗಿ, ಅದಕ್ಕೆ ಬದಲಾಗಿ ಈ ಕತೆಯ ನೀತಿ ಇಂದಿನ ಆಧುನಿಕ ಯುಗದಲ್ಲಿ ಪ್ರಸ್ತುತವೇ ಎಂಬ ಪ್ರಶ್ನೆ ಸಹಜವಾಗಿಯೇ ನನ್ನಲ್ಲಿ ಮೂಡತೊಡಗಿತ್ತು. ಇಂತಹ ಮೂಲಭೂತ ಪ್ರಶ್ನೆಗಳಿಗೆ ಖಚಿತವಾದ ಉತ್ತರ ಇರುತ್ತದೆ ಎಂಬ ಭ್ರಮೆಯನ್ನೇನೂ ನಾನಿಟ್ಟುಕೊಂಡಿಲ್ಲ, ಬಿಡಿ.

ಇತ್ತೀಚೆಗೆ ನನ್ನ ಗೆಳೆಯ ಜಾರ್ಜ್ ರಾಮ್‌ಸೇಯನ್ನು ಭೇಟಿಯಾದಾಗ ನನಗೆ ಈ ಕತೆ ನೆನಪಾಗದೇ ಇರುವುದು ಸಾಧ್ಯವೇ ಇರಲಿಲ್ಲ. ಹೋಟೆಲೊಂದರಲ್ಲಿ ಊಟ ಮಾಡುತ್ತಿದ್ದ ಅವನು ತುಂಬ ಬೇಸರದಲ್ಲಿದ್ದಂತೆ ನನಗನಿಸಿತು. ಅಷ್ಟೊಂದು ದುಃಖದ ಮುಖಭಾವ ಹೊಂದಿದ್ದವರನ್ನು ಹಿಂದೆಂದೂ ಬಹುಶಃ ನಾನು ನೋಡಿಯೇ ಇರಲಿಲ್ಲ. ಎತ್ತಲೋ ದಿಟ್ಟಿಸುತ್ತಿದ್ದ ಆತನ ಕಣ್ಣುಗಳಲ್ಲಿ ಶೂನ್ಯ ಭಾವವಿತ್ತು. ಪ್ರಪಂಚದ ಭಾರವನ್ನೆಲ್ಲ ತನ್ನ ಭುಜಗಳ ಮೇಲೆ ಹೊತ್ತು ಬಸವಳಿದವನಂತೆ ಕಾಣುತ್ತಿದ್ದ ಆತ. ನನಗವನನ್ನು ಕಂಡು ಕರುಣೆ ಉಕ್ಕಿ ಬಂತು. ಅವನೀ ಮನಃಸ್ಥಿತಿಗೆ ಅವನ ತಮ್ಮ ಟಾಮ್ ಕಾರಣ ಆಗಿರಬಹುದು ಎಂದು ಒಮ್ಮೇಲೇ ನನಗನಿಸಿತು. ''ಹಲೋ ಜಾರ್ಜ್, ಹೇಗಿದ್ದೀ ?'' ''ನಿಜ ಹೇಳಬೇಕೆಂದರೆ, ನಾನೇನೂ ಸಂತೋಷವಾಗಿಲ್ಲ ಇವತ್ತು'' ಉತ್ತರಿಸಿದ ಜಾರ್ಜ್. ''ಟಾಮ್‌ನ ದೆಸೆಯಿಂದ ಬೇಜಾರು ಮಾಡಿಕೊಂಡಿದ್ದೀಯಾ ?'' ''ಹೂಂ'' ಆತ ನಿಟ್ಟುಸಿರುಬಿಟ್ಟ. ನಾನೆಂದೆ, ''ನೀನೂ ಬಿಡು ಜಾರ್ಜ್. ಸುಮ್ಮನೆ ಅವನ ಬಗ್ಗೆ ಯೋಚಿಸುತ್ತಾ ನಿನ್ನ ಜೀವನ ಹಾಳು ಮಾಡಿಕೊಳ್ಳುತ್ತೀ, ಒಬ್ಬ ಅಣ್ಣನಾಗಿ, ಅವನ ಜೀವನ ಚೆನ್ನಾಗಿರಲಿಕ್ಕೆ ಏನು ಮಾಡಬೇಕೋ ಅದನ್ನೆಲ್ಲ ಮಾಡಿದ್ದೀ ನೀನು. ಅವನೊಬ್ಬ ನಿಷ್ಪ್ರಯೋಜಕ ಎಂದು ಇಷ್ಟು ದಿನಗಳ ನಂತರವಾದರೂ ನಿನಗೆ ತಿಳಿಯಬೇಕಿತ್ತು. ಇನ್ನಾದರೂ ಮರೆತುಬಿಡು ಅವನನ್ನು.''



ಸುಂದರವಾದ ಚಿತ್ರವೊಂದರ ಸೌಂದರ್ಯ ಕೆಡಿಸುವ ಕಪ್ಪುಚುಕ್ಕೆಯಂತಿದ್ದ ಟಾಮ್ ಅವನ ಅಣ್ಣ ಜಾರ್ಜ್‌ನ ಗೌರವಾನ್ವಿತ ಸಂಸಾರಕ್ಕೆ. ಕಳೆದ ಇಪ್ಪತ್ತು ವರ್ಷಗಳಿಂದ ಅವನಿಂದ ಜಾರ್ಜ್‌ಗೆ ಆಗುತ್ತಿದ್ದ ತೊಂದರೆಗಳು ಒಂದಲ್ಲ, ಎರಡಲ್ಲ. ಹಾಗೆ ಹೇಳಬೇಕೆಂದರೆ ಟಾಮ್ ತನ್ನ ಜೀವನದ ಆರಂಭವನ್ನೇನೋ ಸಾಕಷ್ಟು ಒಳ್ಳೆಯ ರೀತಿಯಲ್ಲೇ ಮಾಡಿದ್ದ. ಸ್ವಂತ ವ್ಯವಹಾರವೇನನ್ನೋ ಮಾಡುತ್ತಿದ್ದ. ಅವನದೇ ಆದ ಆಫೀಸನ್ನೂ ತೆರೆದಿದ್ದ. ಮದುವೆಯಾಗಿ ಎರಡು ಸುಂದರವಾದ ಮಕ್ಕಳ ತಂದೆಯಾಗಿದ್ದ. ಇದ್ದಕ್ಕಿದ್ದಂತೆ ಅದೇನು ಗ್ರಹಚಾರ ಬಂತೋ ಅವನಿಗೆ, ಒಂದು ದಿನ ಜಾರ್ಜ್ ಬಳಿ ಬಂದು ಹೇಳಿದನಂತೆ, ತನಗೆ ಯಾವ ಕೆಲಸವನ್ನೂ ಮಾಡಲು ಮನಸ್ಸಿಲ್ಲ. ಜೀವನದ ಉಳಿದ ಭಾಗವನ್ನು ಬಹಳ ಮೋಜಿನಿಂದ ಕಳೆಯುವ ಉದ್ದೇಶವಿದೆ ತನಗೆ, ಎಂದು. ತನ್ನಂಥವನಿಗೆ ವಿವಾಹ ಬಂಧನ ಬೇಡವಾಗಿತ್ತು ಎಂತಲೂ ಹೇಳಿದನಂತೆ. ಜಾರ್ಜ್ ಎಷ್ಟೆಲ್ಲ ಉಪದೇಶ ಮಾಡಿದರೂ ಆತ ಕೇಳಲೇ ಇಲ್ಲ. ಮನೆ, ಆಫೀಸು ಹಾಗೂ ಊರನ್ನೇ ಬಿಟ್ಟು ಹೊರಟುಹೋದ. ತನ್ನಲ್ಲಿದ್ದ ಎಲ್ಲ ಹಣವನ್ನೂ ಕೊಂಡೊಯ್ದಿದ್ದ ಕೂಡ. ಎರಡು ವರ್ಷ ಕೈಯಲ್ಲಿದ್ದ ಹಣದಿಂದ ಅವನು ಸಾಗಿಸುತ್ತಿದ್ದ ವಿಲಾಸಿ ಜೀವನದ ವಿವರಗಳು ಬಲ್ಲ ಮೂಲಗಳಿಂದ ಅವನ ಮನೆಯವರಿಗೆ ತಿಳಿದುಬರುತ್ತಿತ್ತು. ಇಂತಹ ದುಂದುಗಾರಿಕೆಯ ಜೀವನ ನಡೆಸಿದರೆ ಇವನ ಕೈಯಲ್ಲಿರುವ ಹಣ ಎಷ್ಟು ದಿನ ಬಂದೀತು ಮತ್ತು ನಂತರ ಏನು ಮಾಡಿಯಾನು ಎಂದು ಜಾರ್ಜನಾದಿಯಾಗಿ ಎಲ್ಲರೂ ಯೋಚಿಸುತ್ತಿದ್ದರು. ಅವರೆಲ್ಲ ಈ ಪ್ರಶ್ನೆಯ ಉತ್ತರಕ್ಕಾಗಿ ಬಹಳ ದಿನ ಕಾಯಬೇಕಾಗಿರಲಿಲ್ಲವೆನ್ನಿ. ಕಿಸೆ ಬರಿದಾದಾಗ ತನ್ನ ಸ್ನೇಹಿತರ ಕಿಸೆಗಳ ಮೇಲೆ ಕಣ್ಣಿಟ್ಟ ಟಾಮ್. ಕಳ್ಳತನ ಪ್ರಾರಂಭಿಸಿದನೇ ಎಂದು ಕೇಳುತ್ತಿದ್ದೀರಾ ? ಛೇ, ಇಲ್ಲ.

ಅವನಿನ್ನೂ ಅಷ್ಟೊಂದು ಕೆಳಮಟ್ಟಕ್ಕಿಳಿದಿರಲಿಲ್ಲ! ಸಾಲ ಕೇಳುತ್ತಿದ್ದ ಅಷ್ಟೇ! ಅವನ ಪರಿಚಯದವರ, ಸ್ನೇಹಿತರ ಬಳಗವೇನೂ ಸಣ್ಣದಾಗಿರಲಿಲ್ಲ. ಚಿಟಿಕೆ ಹೊಡೆಯುವಷ್ಟೇ ಸುಲಭವಾಗಿ ಅವನು ಜನರ ಸ್ನೇಹ ಸಂಪಾದಿಸುತ್ತಿದ್ದ. ಟಾಮ್‌ಗೆ ಎಂಥಾ ಮೋಡಿ ಮಾಡುವಂಥ ವ್ಯಕ್ತಿತ್ವ ಹಾಗೂ ಮಾತನಾಡುವ ಕಲೆ ಇತ್ತು ಎಂದರೆ ಅವನು ಸಾಲ ಕೇಳಿದರೆ 'ಇಲ್ಲ' ಎನ್ನಲು ಯಾರಿಗಾದರೂ ಬಹಳ ಕಷ್ಟವಾಗುತ್ತಿತ್ತು. ಅವನ ಸ್ವಭಾವ ಚೆನ್ನಾಗಿ ತಿಳಿದ ನನ್ನಂಥವರಿಗೇ ಹೀಗಾಗುತ್ತಿತ್ತೆಂದರೆ, ಇನ್ನು ಉಳಿದವರ ಕತೆ ಬಿಡಿ. ಹೀಗಾಗಿ ಟಾಮ್‌ನ ಜೀವನಕ್ಕೇನೂ ಕಷ್ಟವಾಗಲಿಲ್ಲ. ಆದರೆ ಅಷ್ಟಕ್ಕೇ ತೃಪ್ತನಾಗುವವನೇ ನಮ್ಮೀ ಟಾಮ್? ಅಗತ್ಯಗಳಿಗೆ ಹಣ ಖರ್ಚು ಮಾಡುವ ಕ್ರಿಯೆ ತುಂಬ ನೀರಸ ಹಾಗೂ ಮೋಜಿಗಾಗಿ ಹಣ ವ್ಯಯಿಸುವುದರಲ್ಲಿ ಸಿಗುವ ಸಂತೋಷ ಅಸದಳ ಎಂಬುದು ಅವನ ಅಂಬೋಣ. ಈ ಮೋಜಿನ ಹಣಕ್ಕಾಗಿ ಟಾಮ್ ತನ್ನಣ್ಣನ ಮೇಲೆ ಕಣ್ಣಿಟ್ಟಿದ್ದ. ಅಣ್ಣನ ಮೇಲೆ ಪ್ರಯೋಗಿಸಲು ಅವನು ಕಾದಿಟ್ಟಿದ್ದ ಅಸ್ತ್ರಗಳೂ ವಿಧವಿಧವಾಗಿದ್ದವು. ತನ್ನ ಬೇಜವಾಬ್ದಾರಿಯಿಂದ ತನಗೆ ಪಶ್ಚಾತ್ತಾಪವಾಗಿದೆ, ಒಂದಷ್ಟು ಹಣ ಕೊಟ್ಟರೆ ಮತ್ತೆ ಗೌರವಾನ್ವಿತ ವೃತ್ತಿ ಹಿಡಿಯುತ್ತೇನೆ ಎಂದು ನಂಬಿಸಿ ಒಮ್ಮೆ ಜಾರ್ಜ್‌ನಿಂದ ದೊಡ್ಡ ಮೊತ್ತದ ಹಣ ಪಡೆದು ಕೊಂಡಿದ್ದ. ಎರಡೇ ದಿನದಲ್ಲಿ ಈ ಹಣ ಮಂಗಮಾಯ ವಾಗಿತ್ತು. ಹೇಗೆ? ಟಾಮ್ ಹೊಸ ಕಾರೊಂದನ್ನೂ ಒಂದಷ್ಟು ದುಬಾರಿ ಬಟ್ಟೆಗಳನ್ನೂ ಕೊರಳಿಗೊಂದು ಬಂಗಾರದ ಚೈನನ್ನೂ ಕೊಂಡಿದ್ದ! ಇಂಥದ್ದೇ ಘಟನೆಗಳ ಪುನರಾವರ್ತನೆ ಆದ ಬಳಿಕ ಜಾರ್ಜ್ ಎಚ್ಚೆತ್ತಿದ್ದ. ತನ್ನ ತಮ್ಮ ಹೀಗೆ ಉಂಡಾಡಿಯಾಗಿಯೇ ದಿನ ಕಳೆಯುವವನಿದ್ದಾನೆ ಎಂಬ ಕಟುಸತ್ಯ ಮನವರಿಕೆ ಯಾದೊಡನೆ ಅವನಿಗೆ ಬಿಡಿಗಾಸನ್ನೂ ಕೊಡುವುದಿಲ್ಲ ವೆಂದು ಖಡಾಖಂಡಿತವಾಗಿ ಹೇಳಿದ. ಟಾಮ್ ತನ್ನ ಬತ್ತಳಿಕೆಯ ಮತ್ತೊಂದು ಅಸ್ತ್ರ ಹೊರತೆಗೆದ. ಜಾರ್ಜನ ಗೌರವಕ್ಕೆ ಧಕ್ಕೆ ಆಗುವಂಥ ಕೆಲಸಗಳನ್ನು ಮಾಡಲು ಆರಂಭಿಸಿದ. ಪರಿಚಯದವರ ಬಾರೊಂದರಲ್ಲಿ ಸಪ್ಲೈಯರ್ ಆಗಿ ಸೇರಿಕೊಂಡ. ಅಲ್ಲದೆ ಹಗಲು ಹೊತ್ತಿನಲ್ಲಿ ಬೂಟ್ ಪಾಲಿಶ್ ಮಾಡುತ್ತಿದ್ದ (ಮಾಡುತ್ತಿದ್ದ ಎನ್ನುವುದಕ್ಕಿಂತ ಹಾಗೆ ನಟಿಸುತ್ತಿದ್ದ ಎಂದರೆ ಸೂಕ್ತವೇನೋ! ಹಾಗೆಲ್ಲ ಕಷ್ಟಪಟ್ಟು ದುಡಿಯುವವನೇ ಆತ! ಅದೆಲ್ಲ ತನ್ನಣ್ಣನ ಕಣ್ಣಿಗೆ ಮಣ್ಣೆರಚುವ ತಂತ್ರವಾಗಿತ್ತು. ಅಷ್ಟೇ!) ಊರಿನ ಪ್ರತಿಷ್ಠಿತ ವಕೀಲನೊಬ್ಬನ ಸಹೋದರ ಬಾರೊಂದರಲ್ಲಿ ಸಪ್ಲೈಯರ್ ಆಗಿ ಕೆಲಸ ಮಾಡುತ್ತಾನೆ, ಬೂಟ್ ಪಾಲಿಶ್ ಮಾಡುತ್ತಾನೆ ಎಂದರೆ ಎಷ್ಟು ಅವಮಾನ ವಲ್ಲವೆ? ಅಂತಹ ಕೆಲಸ ಮಾಡಬೇಡ ಎಂದು ಜಾರ್ಜ್ ಹೇಳಿದಾಗ, ''ಡಿಗ್ನಿಟಿ ಆಫ್ ಲೇಬರ್'' ಬಗ್ಗೆ ಬಹಳ ಚೆನ್ನಾಗಿ ವಾದ ಮಾಡಿದ್ದ ಟಾಮ್. ''ಸಣ್ಣ ಕೆಲಸಗಳಾದರೇನು, ಅವುಗಳೂ ಗೌರವಯುತವಾದ ಕೆಲಸಗಳು. ಅವುಗಳನ್ನೇ ಮುಂದುವರಿಸುತ್ತೇನೆ'' ಎಂತಲೂ ಹೇಳಿದ್ದ. ಹಾಗೇನಾದರೂ ನಿನ್ನ ತಮ್ಮ




ಇಂತಹ ಕೆಲಸ ಮಾಡುತ್ತಾನೆ ಎಂಬುದು ನಿನಗೆ ಅವಮಾನದ ಸಂಗತಿಯಾದರೆ, ಅವುಗಳನ್ನು ಬಿಟ್ಟುಬಿಡುತ್ತೇನೆ. ಆದರೆ ಪ್ರತಿರೂಪವಾಗಿ ತಿಂಗಳಿಗೆ ಇನ್ನೂರು ಪೌಂಡುಗಳಷ್ಟು ಹಣವನ್ನು ತನಗೆ ಕೊಡಬೇಕು ಎಂದು ಕರಾರುಹಾಕಿದ್ದ. ಒಪ್ಪಲೇಬೇಕಾದ ಪರಿಸ್ಥಿತಿ ಜಾರ್ಜನದಾಗಿತ್ತು. ತನ್ನ ಹಾಗೂ ತನ್ನ ಮನೆತನದ ಗೌರವಕ್ಕಿಂತ ಕೆಲವು ಪೌಂಡುಗಳಷ್ಟು ಹಣ ದೊಡ್ಡದಾಗಿರಲಿಲ್ಲ. ಅಣ್ಣನ ಈ ದೌರ್ಬಲ್ಯದ ಸಂಪೂರ್ಣ ಅರಿವು ಟಾಮ್‌ಗೆ ಇತ್ತು. ಎಷ್ಟಾದರೂ ಚಾಣಾಕ್ಷ ಅಲ್ಲವೆ?

ಒಮ್ಮೆ ಟಾಮ್ ಜೈಲಿಗೆ ಹೋಗಲೇಬೇಕಾದ ಪರಿಸ್ಥಿತಿ ಬಂದೊದಗಿತ್ತು. ಆ ಪ್ರಸಂಗ ಎಂಥದ್ದಾಗಿ ತ್ತೆಂದರೆ, ಟಾಮ್ ತುಂಬ ಅವಿವೇಕ ಹಾಗೂ ಸ್ವಾರ್ಥದಿಂದ ವರ್ತಿಸಿ ಕ್ರೊನ್‌ಶಾ ಎಂಬಾತನನ್ನು ವಂಚಿಸಿದ್ದ. ವಂಚನೆಗೊಳಪಟ್ಟ ಕ್ರೊನ್‌ಶಾ ಬಹಳ ಹಟವಾದಿ ವ್ಯಕ್ತಿಯಾಗಿದ್ದ. ಕೋರ್ಟಿನಲ್ಲಿ ಕೇಸ್ ಹಾಕಿಸಿ, ಟಾಮ್‌ನಂಥ ಲಫಂಗನನ್ನು ಶಿಕ್ಷಿಸುವುದಾಗಿ ಪಣವನ್ನೇ ತೊಟ್ಟಿದ್ದ ಆತ. ಸ್ವತಃ ಲಾಯರ್ ಆಗಿದ್ದ ಜಾರ್ಜ್‌ಗೆ ಈ ಕೇಸಿನ ವಿವರಗಳನ್ನು ಕುರಿತು ಪರಿಶೀಲಿಸಿದಾಗ ತನ್ನ ತಮ್ಮ ಇದರಿಂದ ಹೊರಬರುವ ಸಾಧ್ಯತೆಗಳು ಬಹಳ ಕಡಿಮೆ ಎಂದು ಮನವರಿಕೆ ಯಾಗಿತ್ತು. ಹಾಗೆ ಆತನನ್ನು ಜೈಲಿಗೆ ಹೋಗಲು ಬಿಟ್ಟು ಸುಮ್ಮನೆ ಕೂಡಬಲ್ಲಂಥ ವ್ಯಕ್ತಿಯಾಗಿರಲಿಲ್ಲ ನಮ್ಮ ಜಾರ್ಜ್. ತನ್ನ ಬುದ್ಧಿಯನ್ನೆಲ್ಲ ಉಪಯೋಗಿಸಿ ಕ್ರೊನ್‌ಶಾ ಕೋರ್ಟಿನಲ್ಲಿ ಕೇಸ್ ದಾಖಲು ಮಾಡದಂತೆ ಅವನ ಮನವೊಲಿಸಿದ್ದ. ಕ್ರೊನ್‌ಶಾನಂಥ ಜಿಗುಟು ಸ್ವಭಾವದ ಮನುಷ್ಯನೊಂದಿಗಿನ ವ್ಯವಹಾರ ಜಾರ್ಜ್‌ನ ಮುಖದ ನೀರೆಲ್ಲವನ್ನೂ ಇಳಿಸಿತ್ತಷ್ಟೇ ಅಲ್ಲದೆ ಅವನ ಕಿಸೆಯ ಐನೂರು ಪೌಂಡುಗಳಿಗೆ ಕತ್ತರಿಯನ್ನೂ ಹಾಕಿತ್ತು. ಆದರೆ ಈ ಹಣ ಪಡೆದ ಕೂಡಲೇ ಕ್ರೊನ್‌ಶಾ ಏನು ಮಾಡಿದ್ದ ಗೊತ್ತೇ? ಟಾಮ್‌ನೊಂದಿಗೆ 'ಪ್ಲೆಶರ್ ಟ್ರಿಪ್'ಗೆಂದು ಮೊಂಟೆಕಾರಲೊಗೆ ಹೋಗಿದ್ದ ಹಾಗೂ ಅವರಿಬ್ಬರೂ ಅಲ್ಲಿ ಸುಮಾರು ಒಂದು ತಿಂಗಳು ಮಜವಾಗಿ ಕಳೆದಿದ್ದರು!! ಈ ಸುದ್ದಿ ತಿಳಿದಾಗ ಜಾರ್ಜ್‌ನಿಗೆ ಹೇಗನಿಸಿರಬಹುದು ಎಂದು ನೀವೆಲ್ಲ ಊಹಿಸಬಲ್ಲಿರಿ, ಅಲ್ಲವೆ? ಅವನಿಗೆ ಅಂದು ಬಂದಷ್ಟು ಕೋಪ ಬಹುಶಃ ಆತನ ಜೀವಮಾನದಲ್ಲಿ ಇನ್ನೆಂದೂ ಬಂದಿರಲಿಕ್ಕಿಲ್ಲ.

ಸುಮಾರು ಇಪ್ಪತ್ತು ವರ್ಷಗಳಷ್ಟು ಕಾಲ ಟಾಮ್ ಹೀಗೆಯೇ ಸುಖವಾಗಿ ಕಳೆದ. ಜೂಜಾಡುತ್ತಿದ್ದ, ಸುಂದರವಾದ ತರುಣಿಯರೊಂದಿಗೆ ಅಲೆಯುತ್ತಿದ್ದ, ಒಳ್ಳೊಳ್ಳೆ ಹೋಟೆಲುಗಳಲ್ಲಿ ತಿನ್ನುತ್ತಿದ್ದ, ಅಲ್ಲಿಯ ಹುಡುಗಿಯರೊಂದಿಗೆ ನರ್ತಿಸುತ್ತಿದ್ದ, ದುಬಾರಿ ಬೆಲೆಯ ಬಟ್ಟೆಗಳನ್ನು ಧರಿಸುತ್ತಿದ್ದ. ಬಹಳ ಚೆನ್ನಾಗಿ ತನ್ನನ್ನು ಅಲಂಕರಿಸಿಕೊಳ್ಳುವ ಕಲೆ ಆತನಿಗೆ ಸಿದ್ಧಿಸಿತ್ತು. ಒಪ್ಪ ಓರಣಗಳಿಲ್ಲದೆ ಅವನನ್ನು ನೀವೆಂದೂ ನೋಡಲು ಸಾಧ್ಯವಿರಲಿಲ್ಲ. ಒಟ್ಟಿನಲ್ಲಿ ಮಹಾ ಸೊಗಸುಗಾರನಾಗಿದ್ದ ಟಾಮ್. ಆತನ ವಯಸ್ಸು ನಲವತ್ತಾರು ಆಗಿದ್ದರೂ, ಇನ್ನೂ ಮೂವತ್ತೈದರವನಂತೆ ಕಾಣುತ್ತಿದ್ದ. ಅವನೊಬ್ಬ ಅಪ್ರಯೋಜಕ ಎಂದು ಎಲ್ಲರಿಗೂ ತಿಳಿದಿದ್ದರೂ ಅವನ ಸಹವಾಸ ತುಂಬ ಉಲ್ಲಾಸಭರಿತವಾಗಿರುತ್ತದೆ ಎಂದು ಹೆಚ್ಚಿನವರು ಒಪ್ಪುತ್ತಿದ್ದರು. ಅವನ ಮಾತುಕತೆ, ನಡೆ ನುಡಿಗಳೇ ಅಂತಿದ್ದವು. ಮರುಳು ಮಾಡುವಂಥವು. ಇನ್ನು ನನ್ನ ವಿಷಯವನ್ನೇ ಹೇಳಬೇಕೆಂದರೆ, ನಾನೂ ಅವನಿಗೆ ಒಂದೆರಡು ಬಾರಿ ೨೫-೩೦ ಪೌಂಡ್ ಸಾಲ ಕೊಟ್ಟಿದ್ದುಂಟು; ಆದರೆ ಯಾಕೋ ಏನೋ ಆ ಬಗ್ಗೆ ನನಗೆ ಬೇಸರವೇನೂ ಆಗಿರಲಿಲ್ಲ. ಕಾರಣ ನನಗೇ ತಿಳಿದಿಲ್ಲ. ನನ್ನಂತೆ ಎಲ್ಲರಿಗೂ ಟಾಮ್ ರಾಮ್‌ಸೇಯ ಬಗ್ಗೆ ತಿಳಿದಿತ್ತು ಹಾಗೂ ಟಾಮ್ ರಾಮ್‌ಸೇಗೆ ನಮ್ಮೆಲ್ಲರ ಬಗ್ಗೆ ತಿಳಿದಿತ್ತು. ಅವನ ಜೀವನ ವಿಧಾನ ಸರಿಯಾದ್ದು ಎಂದು ನಾವ್ಯಾರೂ ಒಪ್ಪುತ್ತಿರಲಿಲ್ಲವಾದರೂ ಅವನಿಂದ ಆಕರ್ಷಿತರಾಗದೆ ಇರುವುದು ಮಾತ್ರ ನಮ್ಮಿಂದ ಸಾಧ್ಯವಾಗುತ್ತಿರಲಿಲ್ಲ.

ಪಾಪ ಜಾರ್ಜ್! ಅವನು ಟಾಮ್‌ಗಿಂತ ಕೇವಲ ಎರಡೇ ವರ್ಷಕ್ಕೆ ದೊಡ್ಡವನಾದರೂ ಅರವತ್ತರವನಂತೆ ಕಾಣುತ್ತಿದ್ದ. ಹಿಂದಿನ ಇಪ್ಪತ್ತೈದು ವರ್ಷಗಳಲ್ಲಿ ಆತ, ತನ್ನ ಕೆಲಸದಿಂದ ವಿರಾಮ ಪಡೆದದ್ದು ಹೆಚ್ಚೆಂದರೆ ೧೫ ದಿನಗಳಷ್ಟಾಗಿರಬಹುದು. ನಿಜವಾದ ಪರಿಶ್ರಮಿ ಆತ. ಜೊತೆಗೆ ಪ್ರಾಮಾಣಿಕನೂ ಕೂಡ. ತನ್ನ ಪತ್ನಿಗೆ ಆತ ಎಷ್ಟು ಒಳ್ಳೆಯ ಗಂಡನಾಗಿದ್ದನೆಂದರೆ, ಆಕೆಯನ್ನು ಬಿಟ್ಟು ಇನ್ಯಾವ ಹೆಂಗಸನ್ನಾದರೂ ಕಣ್ಣೆತ್ತಿ ನೋಡುವ ವಿಚಾರ ಕನಸಿನಲ್ಲಿ ಕೂಡ ಬರುತ್ತಿರಲಿಲ್ಲ. ಜಾರ್ಜ್ ತನ್ನ ನಾಲ್ವರು ಹೆಣ್ಣು ಮಕ್ಕಳಿಗೆ ಸಹ ಒಳ್ಳೆಯ ತಂದೆಯಾಗಿದ್ದ. ಅವರ ಭವಿಷ್ಯಕ್ಕಾಗಿ ತನ್ನಾದಾಯದ ಮೂರನೇ ಒಂದು ಭಾಗವನ್ನು ಉಳಿತಾಯ ಖಾತೆಯಲ್ಲಿ ತಪ್ಪದೇ ಇಡುತ್ತಿದ್ದ. ತನ್ನ ಐವತ್ತೈದನೇ ವರ್ಷಕ್ಕೆ ನಿವೃತ್ತಿ ಹೊಂದಿ ನಗರದ ಹೊರಭಾಗದಲ್ಲಿ ಚಿಕ್ಕದೊಂದು ಮನೆಯನ್ನು ಕೊಂಡು ತನ್ನ ಸಂಸಾರದೊಂದಿಗೆ ವಾಸಿಸುವ ಯೋಚನೆ ಆತನಿಗಿತ್ತು. ತನ್ನದೇ ಆದ ಮನೆಯಲ್ಲಿ ತನ್ನ ನೆಚ್ಚಿನ ಹವ್ಯಾಸಗಳಾದ ತೋಟಗಾರಿಕೆ ಹಾಗೂ ಗಾಲ್ಫ್ ಆಟಗಳನ್ನು

ಮುಂದುವರಿಸುವ ಕನಸನ್ನು ಅತ ಕಟ್ಟಿಕೊಂಡಿದ್ದ. ಒಟ್ಟಿನಲ್ಲಿ ಹೇಳಬೇಕೆಂದರೆ, ಒಂದು ಪರಿಪೂರ್ಣ ಜೀವನ ಅವನದಾಗಿತ್ತು – ಟಾಮ್‌ನಂಥ ಪುಂಡ ಸಹೋದರನೊಬ್ಬನನ್ನು ಹೊರತುಪಡಿಸಿದರೆ.

ತನಗೆ ವಯಸ್ಸಾಗುತ್ತಿದ್ದುದರ ಬಗ್ಗೆ ಜಾರ್ಜ್‌ಗೆ ಒಂದು ರೀತಿಯ ವಿಲಕ್ಷಣ ಆನಂದ ಇತ್ತು, ಆ ಆನಂದದ ಕಾರಣ ಇನ್ನಾರೂ ಆಗಿರದೆ ಟಾಮ್‌ನೇ ಆಗಿದ್ದ. ಟಾಮ್ ಕೂಡ ತನ್ನಂತೆ ಮಧ್ಯ ವಯಸ್ಸನ್ನು ದಾಟುತ್ತಿದ್ದಾನೆ ಎಂದು ನೆನೆದಾಗಲೆಲ್ಲ ಜಾರ್ಜನಿಗೆ ವಿಚಿತ್ರ ತೃಪ್ತಿ ಆಗುತ್ತಿತ್ತು. ಒಮ್ಮೆ ಜಾರ್ಜ್ ಹೇಳಿದ್ದ "ನೋಡು, ಟಾಮ್ ನನಗಿಂತ ಎರಡೇ ವರ್ಷ ಚಿಕ್ಕವನು. ಇನ್ನು ನಾಲ್ಕು ವರ್ಷದಲ್ಲಿ ಅವನಿಗೂ ಐವತ್ತು ವರ್ಷ ಆಗುತ್ತದೆ. ಇಳಿವಯಸ್ಸಿನ ತೊಂದರೆಗಳು ಒಂದೊಂದಾಗಿ ಅವನ ಅನುಭವಕ್ಕೆ ಬಂದೇ ಬರುತ್ತವೆ. ನನ್ನ ಬಳಿಯಾದರೋ ಇನ್ನೆರಡೇ ವರ್ಷಗಳಲ್ಲಿ ಸುಮಾರು ಮೂವತ್ತು ಸಾವಿರ ಪೌಂಡುಗಳಷ್ಟು ಹಣ ಇರುತ್ತದೆ. ಅವನ ಹತ್ತಿರ ಏನೂ ಇರುವುದಿಲ್ಲ. ಒಂದೊಂದು ಪೌಂಡಿಗಾಗಿ ಯಾರನ್ನಾದರೂ ಕೇಳುವಾಗ ಹೇಗನಿಸಬೇಡ ಅವನಿಗೆ? ಅವನದನ್ನು ಹೇಗೆ ಎದುರಿಸುತ್ತಾನೋ ನೋಡಬೇಕು ನಾನು."

ನನಗೆ ಜಾರ್ಜ್‌ನ ಬಗೆಗೆ ಯಾವತ್ತಿಗೂ ತುಂಬ ಅನುಕಂಪ ಇತ್ತು. ಇಂದೂ ಕೂಡ ಅವನ ಪೇಲವವಾಗಿದ್ದ ಮುಖ ನೋಡುತ್ತಿದ್ದಂತೆ ಆ ಕಿಡಿಗೇಡಿ ಟಾಮ್ ಇನ್ನಾವ ಹೊಸ ತಲೆನೋವನ್ನು ಈ ಬಡಪಾಯಿಗೆ ದಯಪಾಲಿಸಿರಬಹುದು ಎಂದು ಯೋಚಿಸುತ್ತಿದ್ದೆ. ಜಾರ್ಜ್‌ನ ಸ್ಥಿತಿ ನೋಡಿದರೆ ಈ ಬಾರಿಯ ಸುದ್ದಿ ಬಹಳ ಕೆಟ್ಟದಾಗಿರಬಹುದು ಅನಿಸುತ್ತಿತ್ತು. ಬಹುಶಃ ಟಾಮ್ ಇನ್ನೇನಾದರೂ ಹರಕತ್ತು ಮಾಡಿ ಪೊಲೀಸರ ಕೈಗೆ ಸಿಕ್ಕಿಹಾಕಿಕೊಂಡಿರಬಹುದೇನೋ! ಅಥವಾ ಅದಕ್ಕಿಂತ ಕೆಟ್ಟದ್ದೇನಾದರೂ ಇರಬಹುದೆ?... ಮೇಜಿಗೆ ತಲೆಯಾನಿಸಿ, ಪ್ರಪಂಚಕ್ಕೆ ವಿಮುಖನಾಗಬಯಸುವಂತೆ ಕುಳಿತಿದ್ದ ಜಾರ್ಜನ ಪಕ್ಕಕ್ಕೇ ಹೋಗಿ ಅವನ ಹೆಗಲ ಸುತ್ತ ಕೈ ಹಾಕಿ ಸಂತೈಸಲು ಯತ್ನಿಸಿದೆ. ತಲೆಯೆತ್ತಿ ನನ್ನತ್ತ ನೋಡಿದ ಜಾರ್ಜ್‌ನ ಕಣ್ಣುಗಳಲ್ಲಿ ನೀರು ತುಂಬಿತ್ತು. "ನಾನೊಬ್ಬ ಸಭ್ಯ, ಪ್ರಾಮಾಣಿಕ, ಕಷ್ಟಜೀವಿ ಹಾಗೂ ನೇರಮಾತಿನ ವ್ಯಕ್ತಿ. ಹೌದು ತಾನೆ?" ಒಮ್ಮೆ ತಡೆದು ಮತ್ತೆ ಮುಂದುವರಿಸಿದ ಜಾರ್ಜ್. "ಪರಿಶ್ರಮ ಹಾಗೂ ಮಿತವ್ಯಯದ ಆಧಾರದ ಮೇಲೆ ಜೀವನದ ಹೆಚ್ಚಿನ ಭಾಗವನ್ನೆಲ್ಲ ಕಳೆದವ ನಾನು. ಉಳಿತಾಯದ ಒಂದಷ್ಟು ಹಣ ಇದೆ. ನಾನು ಇದುವರೆಗೂ ಪಟ್ಟಿರುವ ಕಷ್ಟಕ್ಕೆ, ಒಂದು ಒಳ್ಳೆಯ ನಿವೃತ್ತ ಜೀವನ ಸಿಗಬೇಕಾಗಿರೋದು ನ್ಯಾಯ, ಅಲ್ಲವೇ?" ಕಂಠ ಗದ್ಗದಿತವಾದದ್ದರಿಂದ ಮಾತನಾಡಲು ಕಷ್ಟವಾಗುತ್ತಿತ್ತು. ಅರೆ, ಜಾರ್ಜನ ಉಳಿತಾಯದ ಹಣವನ್ನೇನಾದರೂ ಎಗರಿಸಿರಬಹುದೇ ಟಾಮ್? ಛೇ, ಇರಲಿಕ್ಕಿಲ್ಲ, ಅಂತಹ ನೀಚ ಅವನಲ್ಲ.

"ಹಾಗೇನೇ, ಟಾಮ್ ಎಂತಹವನು ಎಂದೂ ಗೊತ್ತು ನಿನಗೆ. ಸೋಮಾರಿ, ಜವಾಬ್ದಾರಿಯಿಲ್ಲದವನು, ಕರ್ತವ್ಯ ಪಾಲನೆ ಮಾಡದವನು, ಇನ್ನೂ ಏನೇನೋ, ಹೌದು ತಾನೇ?" "ಹೌದು" "ಸತ್ಯ, ನ್ಯಾಯ ಅನ್ನೋದೇನಾದರೂ ಇದ್ದರೆ ಈ ಹೊತ್ತಿಗೆ ಅವನು ಭಿಕಾರಿಯಾಗಬೇಕಿತ್ತು ಅನಿಸೋದಿಲ್ವೇ ನಿನಗೆ?" "ಖಂಡಿತಾ" ತಲೆಯಾಡಿಸಿದೆ ನಾನು. ಈಗ ಜಾರ್ಜನ ಮುಖದಲ್ಲೂ, ದನಿಯಲ್ಲೂ ದುಃಖದ ಬದಲಾಗಿ ಕೋಪ ಕಾಣಿಸುತ್ತಿತ್ತು. "ಆದರೆ ಈಗೇನಾಗಿದೆ ನೋಡು. ಕೆಲವೇ ವಾರಗಳ ಹಿಂದೆ, ಇವನ ತಾಯಿಯ ವಯಸ್ಸಿನ ಒಬ್ಬ ಹೆಂಗಸು ಇವನನ್ನು ಬಹಳ ಇಷ್ಟಪಟ್ಟು ಮದುವೆ ಮಾಡಿಕೊಂಡಳಂತೆ. ಈಗ....ಆಕೆ ಸತ್ತುಹೋಗಿದ್ದಾಳೆ. ತನ್ನ ಆಸ್ತಿಯನ್ನೆಲ್ಲ ಈ ತಲೆಹೋಕನ ಹೆಸರಿಗೆ ಬರೆದಿಟ್ಟು ಅರ್ಧ ಮಿಲಿಯನ್ ಪೌಂಡು ಹಣ, ಲಂಡನ್‌ನಲ್ಲಿ ಒಂದು ಮನೆ ಮತ್ತು ಇಲ್ಲಿಯೂ ಕೂಡ ಒಂದು ಮನೆ, ವಿಹಾರಕ್ಕೆ ಒಂದು ದೋಣಿ..." ಜಾರ್ಜ್ ತನ್ನ ಬಿಗಿದ ಮುಷ್ಟಿಯಿಂದ ಮೇಜನ್ನು ಗುದ್ದುತ್ತಾ ಶಪಿಸಿದ. "ಇದೆಂಥಾ ನ್ಯಾಯ? ಥೂ... ಎಲ್ಲ ಹಾಳಾಗಿ ಹೋಗಲಿ."

ಈಗ ಮಾತ್ರ ನನಗೆ ನಗು ತಡೆಯಲಾಗಲಿಲ್ಲ. ಜಾರ್ಜ್‌ನ ಕೋಪಿಷ್ಟ ಮೋರೆಯನ್ನು ನೋಡಿದಷ್ಟೂ ನನ್ನ ನಗು ಎಷ್ಟು ಹೆಚ್ಚಾಯಿತೆಂದರೆ ಇನ್ನೇನು ನಾನು ಕುಳಿತಿದ್ದ ಕುರ್ಚಿಯಿಂದ ಬಿದ್ದೇ ಬಿಡುತ್ತಿದ್ದೆನೇನೋ. ಅತ್ತಿತ್ತ ಹೊರಳಿ, ಎದ್ದುಬಿದ್ದು ನಗುತ್ತಿದ್ದ ನನ್ನನ್ನು ಕಂಡ ಅವನಿಗೆ ಇನ್ನಷ್ಟು ಕೋಪ ಬಂತೋ ತಿಳಿಯದು. ನನಗಂತೂ ನನ್ನನ್ನು ಸಂಭಾಳಿಸಿಕೊಳ್ಳಲು ಸಾಕಷ್ಟು ಹೊತ್ತೇ ಬೇಕಾಯಿತು. ಅಷ್ಟರಲ್ಲಿ ಜಾರ್ಜ್ ಎದ್ದು ಹೋಗಿದ್ದ. ಅವನು ನನ್ನೀ ವರ್ತನೆಯನ್ನು ಎಂದೂ ಕ್ಷಮಿಸಲಾರನೇನೋ! ಜಾರ್ಜನ ಕತೆ ಹಾಗಿರಲಿ, ಟಾಮ್ ಮಾತ್ರ ಇಂದಿಗೂ ನನ್ನನ್ನು ತನ್ನ ಮೇಫೈರ್‌ನಲ್ಲಿರುವ ಚಂದದ ಮನೆಗೆ ಕರೆದೊಯ್ಯುತ್ತಿರುತ್ತಾನೆ. ಒಳ್ಳೊಳ್ಳೆಯ ಊಟಕೂಟಗಳನ್ನು ಏರ್ಪಡಿಸಿ ನನ್ನನ್ನು ಬರ ಹೇಳುತ್ತಾನೆ. ನೀವು ನಂಬಲಾರಿರಿ. ಈಗಲೂ ಅವನು ತನ್ನ ಹಳೆಯ ಅಭ್ಯಾಸವನ್ನು ಪೂರ್ತಿಯಾಗಿ ಬಿಟ್ಟಿಲ್ಲ. ಯಾವುದೆಂದಿರಾ? ಮತ್ತಾವುದು, ಅವರಿವರ ಬಳಿ ಸಾಲ ಕೇಳುವುದು! ಆದರೆ ನನಗೆ ಚೆನ್ನಾಗಿ ಗೊತ್ತು ಅವನು ಹೀಗೆ ಮಾಡುವುದು ಕೇವಲ ಅಭ್ಯಾಸ ಬಲದಿಂದಲೇ ವಿನಾ ಅವನಿಗೆ ಹಣ ಬೇಡುವ ಅಗತ್ಯ ಈಗ ಇಲ್ಲವೇ ಇಲ್ಲ. ಅದೂ ಅವನು ಕೇಳುವ ಹಣವಾದರೂ ಎಷ್ಟು ಗೊತ್ತೇ? ಕೇವಲ ಒಂದು ಪೌಂಡ್!!

*(ಪ್ರಸಿದ್ಧ ಇಂಗ್ಲಿಷ್ ಕತೆಗಾರ ವಿಲಿಯಮ್ ಸಾಮರ್‌ಸೆಟ್ ಮಾಮ್‌ರ 'ದಿ ಆ್ಯಂಟ್ ಆ್ಯಂಡ್ ದ ಗ್ರಾಸ್ ಹಾಪರ್' ಕತೆಯ ಭಾವಾನುವಾದ)*

ಅನುವಾದ : ಡಾ|| ಸುಧಾ
ಅಧ್ಯಾಪಕಿ, ಭೌತಶಾಸ್ತ್ರ ವಿಭಾಗ
ಕುವೆಂಪು ವಿಶ್ವವಿದ್ಯಾಲಯ
ಶಂಕರಘಟ್ಟ - ೫೭೭ ೪೫೧



'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪರ್ಬೀನ್ ಟಾಕೀಸ್ ಬಳಿ, ಉದ್ಗೀರ್ ರಸ್ತೆ, ಬೀದರ್ - ೫೮೫ ೪೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಈಡಿಗರ ಹಾಸ್ಟೆಲ್ ಆವರಣ, ಕೋರ್ಟ್ ರಸ್ತೆ, ಬಳ್ಳಾರಿ - ೫೮೩ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಗ್ರಂಥಾಲಯದ ಆವರಣ, ಸ್ಟೇಷನ್ ರಸ್ತೆ, ಗದಗ - ೫೮೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬಾಯಿ ಕೂವರ್‌ಬಾಯಿ ಶಾಲಾ ಆವರಣ, ಸಿಂಡಿಕೇಟ್ ಬ್ಯಾಂಕ್ ಬಳಿ, ಮುಖ್ಯರಸ್ತೆ, ಕಾರವಾರ - ೫೮೧ ೩೦೧



# ಕವಿ ಕಾಣದ್ದನ್ನು ರವಿ ಕಂಡ

ಡಾ॥ ಅನಿಲ ಕಮತಿ

ಅದೆಷ್ಟೋ ಸಲ ನಾವು ಕಣ್ಣಾರೆ ಕಂಡ, ವಾಸ್ತವದಲ್ಲಿ ನಡೆದುಹೋದ ನಿಜ ಘಟನೆಗಳು ಕಟ್ಟುಕಥೆಗಳಿಗಿಂತ ಹೆಚ್ಚು ರೋಚಕವಾಗಿರುತ್ತವೆ; ರಂಜಕವಾಗಿರುತ್ತವೆ; ನಂಬಲಸದಳವಾಗಿರುತ್ತವೆ.

ನಮ್ಮಲ್ಲಿಯ ಹೆಚ್ಚಿನ ಕಥೆಗಳು ಎಂದೋ, ಎಲ್ಲೋ ಕೇಳಿದ ಒಂದು ಘಟನೆಗೆ ಪುಷ್ಕಳವಾಗಿ ಕಲ್ಪನೆಗಳನ್ನು ಬೆರೆಸಿ ಮಸಾಲೆ ಸಿಂಪಡಿಸಿ ಒಗ್ಗರಣೆ ಹಾಕಿ, ಆಕರ್ಷಕವಾಗಿ ಹೊಂದಿಸಿಟ್ಟು ತಟ್ಟೆಯೊಳಗಿಟ್ಟು ಪ್ರಸ್ತುತಪಡಿಸಿದವೇ ಆಗಿರುತ್ತವೆ.

ಇಷ್ಟಾಗಿಯೂ ಘಟನೆ, ಕಥೆಯನ್ನು ಮೀರಿ ನಿಲ್ಲಲುಂಟೇ ? ಇಲ್ಲಿವೆ ನೋಡಿ ಕೆಲವು ಸ್ಯಾಂಪಲ್‌ಗಳು –

ಒಂದು ಸಿನೇಮಾ ನಡೆದಿರುತ್ತದೆ. ಪ್ರೇಕ್ಷಕರಲ್ಲಿ ನಡುವೆ ಕುಳಿತ ಗುಂಡ ಬಲು ತಲ್ಲೀನನಾಗಿ ಆಸ್ವಾದಿಸುತ್ತಿರುತ್ತಾನೆ. ನದಿಯ ದಂಡೆಯ ಮೇಲೆ ಸುಂದರಿಯೊಬ್ಬಳು ಅದೇ ನದಿಯಲ್ಲಿ ಮಿಂದು ಒದ್ದೆಬಟ್ಟೆಯಲ್ಲಿಯೇ ದಡದ ಮೇಲಿಟ್ಟ ತನ್ನ ಒಣ ಬಟ್ಟೆಗಳತ್ತ ಬರುತ್ತಿದ್ದಾಳೆ. ಒದ್ದೆಬಟ್ಟೆಯಲ್ಲಿ ಎದ್ದು ಕಾಣುತ್ತಿದ್ದ ಅವಳ ಮೈಯ ಅಂಕುಡೊಂಕುಗಳನ್ನೆಲ್ಲ ಕಣ್ತುಂಬ ನೋಡಿ ಗುಂಡ ಬಾಯಿ ಚಪ್ಪರಿಸುತ್ತಿದ್ದಾನೆ. ತನ್ನ ಕೇಶರಾಶಿಯನ್ನೆಲ್ಲ ಒಣಗಲು ಬೆನ್ನಮೇಲೆಲ್ಲ ಹರಡಿ ಬಟ್ಟೆ ಬದಲಿಸಲೆಂದು ಕುಪ್ಪಸದ ಗುಂಡಿಗೆ ಕೈಹಾಕುತ್ತಾಳೆ ಎನ್ನುವಷ್ಟರಲ್ಲಿಯೇ ನದಿಯ ಸೇತುವೆಯ ಮೇಲೊಂದು ಟ್ರೇನು ಭುಕುಬುಕು ಎನ್ನುತ್ತಾ ಬಂದು ಸಿಳ್ಳೆಹಾಕಿ ದಾಟಿ ಹೋಗುತ್ತದೆ. ಇಷ್ಟರೊಳಗೆ ತನ್ನ ಉಡುಪು ಬದಲಿಸಿದ ಷೋಡಶಿ, ಒಣಗಿದ ತನ್ನ ತಲೆಗೂದಲಿಗೆ ಗಂಟು ಹಾಕುತ್ತಿರುತ್ತಾಳೆ. ಈ ಚಲನಚಿತ್ರವನ್ನು ದಿನಂಪ್ರತಿ – ಕೆಲವು ಸಲ ಒಂದೇ ದಿನ ಎರಡೆರಡು ಷೋಗೆ ಗುಂಡ ಹೋಗುತ್ತಿದ್ದುದನ್ನು ಕಂಡ ಆತನ ಗೆಳೆಯ ಗುಂಡನನ್ನು ಕೇಳುತ್ತಾನೆ – ''ಅಲ್ಲಯ್ಯಾ, ಆ ಸಿನೇಮಾದಲ್ಲಿ ಏನಿದೆ ವಿಶೇಷ ಎಂದು ಇಷ್ಟು ಸಲ ಹೋಗುತ್ತಿದ್ದೀಯಾ ?'' ಗುಂಡ ನಾಚಿಕೊಳ್ಳುತ್ತಾ ಹೇಳುತ್ತಾನೆ – ''ಅಂದಿನಿಂದ ನಾನೂ ನೋಡ್ತಾನೆ ಇದ್ದೀನಿ. ಒಂದಾದರೂ ದಿನ ಅಥವಾ ಒಂದಾದರೂ ಟ್ರೇನು ಒಂದೇ ಒಂದು ಸಲವಾದರೂ ಲೇಟಾಗಿ ಬಂದೀತೆಂದು. ನಾನು ಮರಮರಳಿ ಯತ್ನವೇ ಮಾಡುತ್ತಲೇ ಇದ್ದೇನಾದರೂ ಎಲ್ಲವೂ ವ್ಯರ್ಥವಾಗುತ್ತಿದೆ !'' ನಿರಾಶೆ ಆತನ ಧ್ವನಿಯಲ್ಲಿ ಪ್ರತಿಧ್ವನಿಸುತ್ತಿತ್ತು.

ಈ ಜೋಕನ್ನು ನೀವೆಲ್ಲ ಅದೆಷ್ಟೋ ಸಲ ಕೇಳಿಯೇ ಇದ್ದೀರಿ. ಈಗ ಹಕೀಕತ್ತಿಗೆ ಬರೋಣ.

ನಾವೆಲ್ಲರೂ ಹತ್ತು ಹನ್ನೆರಡು ವರ್ಷದವರಿದ್ದಾಗಿನ ಮಾತು. ನಮ್ಮ ಗೆಳೆಯ ಅಶೋಕ ಸುಮಾರು ನಮ್ಮ ವಯಸ್ಸಿನವನೇ ಆದರೂ, ಅದೇನು ಕಾರಣವೋ ತಾರುಣ್ಯದ ಅಲೆಗಳು ಅವನ ಮೈಮನಗಳಲ್ಲಿ ಬಗೆಬಗೆಯ ತರಂಗಗಳನ್ನು ಎಬ್ಬಿಸುತ್ತಿದ್ದವು. ನಾವೆಲ್ಲ ಆಗ ಇದೊಂದೂ ತಿಳಿಯದ ಶುದ್ಧ ಅಮಾಯಕರು. ನಮ್ಮೂರಿನ ಜಾತ್ರೆಗೆ ಬಂದಿದ್ದ ಟೂರಿಂಗ್ ಟಾಕೀಸಿನ ಟೆಂಟಿನಲ್ಲಿ ಸಿನೇಮಾವೊಂದನ್ನು ನೋಡಲು ಗೆಳೆಯರೆಲ್ಲ ಸೇರಿ ಹೋಗಿದ್ದೆವು. ಆ ಸಿನೇಮಾದಲ್ಲೊಂದು ಸೀನು – ಒಂದು ಕೋಣೆಯಲ್ಲಿ ಸುಂದರಿಯೊಬ್ಬಳು ತನ್ನ ಉಡುಪು ಬದಲಿಸುತ್ತಿದ್ದಾಳೆ (ಬಹುಶಃ ಮುಮ್ತಾಜಳಿದ್ದ ನೆನಪು). ಆ ಚಿತ್ರದ ಛಾಯಾಗ್ರಾಹಕ ಈ ಸಂದರ್ಭದಲ್ಲಿ ಈ ಬೆತ್ತಲೆ ಬೆನ್ನನ್ನು ಸಿಂಹಕಟಿಯನ್ನು ನಾಲ್ಕಾರು ಸಲ ಝೂಮ್ ಮಾಡಿ ತೋರಿಸುತ್ತಾನೆ. ಇಂದಿನ ಚಿತ್ರಗಳಿಗೆ ಹೋಲಿಸಿದರೆ 'ಇದೆಷ್ಟು ಸಪ್ಪೆ' ಎಂದೆನಿಸಬಹುದಾದರೂ, ಅಂದಿನ ಕಾಲಕ್ಕೆ ಇದೊಂದು ರೋಮಾಂಚಕ ದೃಶ್ಯವೇ !

ಇಂದಿನ ಪೀಳಿಗೆಯವರು ಇವುಗಳನ್ನು ನೋಡಿರುವ ಸಾಧ್ಯತೆ ಕಡಿಮೆಯಾಗಿರುವುದರಿಂದ ಈ ಟೂರಿಂಗ್ ಟಾಕೀಸ್ ಟೆಂಟ್ ಸಿನೇಮಾಗಳ ಬಗ್ಗೆ ಒಂದಿಷ್ಟು ವಿವರವಾದ ಮಾಹಿತಿ ಅವಶ್ಯವೆನ್ನಿಸೀತು. ಮಧ್ಯದ ಎರಡು ಮುಖ್ಯ ಆಧಾರ ಸ್ತಂಭಗಳ ಮೇಲೆ ಗುಡಾಣದಂತೆ ಎಬ್ಬಿಸಿದ ಟೆಂಟ್‌ಗೆ ಸುತ್ತಲೂ ಕೆಲ ಕೋಲುಗಳನ್ನು ನಿಲ್ಲಿಸಿ, ಅವುಗಳಿಗೆ ಸುತ್ತ ಪರದೆ ಸುತ್ತಿ ಮೇಲಿಂದ ಮತ್ತು ಸುತ್ತಲಿಂದ ಚಂದ್ರನ ಬೆಳಕು, ವಿದ್ಯುದ್ದೀಪಗಳ ಝುಲಕು ಬಾರದಂತೆ ಕತ್ತಲೆ ನಿರ್ಮಿಸಿ, ಒಳಗಿನ ಒಂದು ಮುಖ್ಯ ಆಧಾರ ಸ್ತಂಭಕ್ಕೆ ಬಿಳಿ ಪರದೆ ತೂಗುಹಾಕಿ, ಅದರೆದುರಿಗೆ ನಿಲ್ಲಿಸಿದ ಒಂದು ವಾಹನದಲ್ಲಿರಿಸಿದ ಪ್ರೊಜೆಕ್ಟರ್ ಮೆಶೀನ್‌ನಿಂದ ಚಲನಚಿತ್ರ ಪ್ರದರ್ಶಿಸಲಾಗುತ್ತದೆ. ಇವು ವೃತ್ತಿ ನಾಟಕ ಕಂಪನಿಗಳಂತೆ ಊರಿಂದೂರಿಗೆ ಕ್ಯಾಂಪ್ ಹಾಕುತ್ತ ಅಲೆಯುವುದರಿಂದ ಇವುಗಳಿಗೆ ಟೂರಿಂಗ್ ಟಾಕೀಸ್ ಎಂದು ಹೆಸರು. ಮಧ್ಯದ ಆಧಾರಸ್ತಂಭಕ್ಕೆ ಪರದೆ ತೂಗು ಹಾಕಿರುವುದರಿಂದ ಪರದೆಯ ಹಿಂದೆ ಸೌಂಡ್ ಬಾಕ್ಸ್ ಇರಿಸಿದರೂ ಸ್ವಲ್ಪ ಸ್ಥಳಾವಕಾಶ ಇರುತ್ತದೆ.

ನಮ್ಮ ಹಳ್ಳಿಗೆ ಬಂದಿದ್ದ ಇಂಥದೊಂದು ಟೂರಿಂಗ್ ಟಾಕೀಸಿನಲ್ಲಿ ಈ ಸಿನೇಮಾ ನೋಡಿ ಬಂದ ಮೂರನೆಯ ದಿನ ಇದೇ ಸಿನೇಮಾ ನೋಡಲು ಮತ್ತೊಮ್ಮೆ ಹೋಗೋಣವೆಂದು ಅಶೋಕ ತಗಾದೆ ಹಚ್ಚಿದ. ನೋಡಿದ್ದನ್ನೇ ನೋಡುವುದು ಬೇಸರವೆಂದು ಒಲ್ಲೆಯೆಂದರೂ, ಟಿಕೇಟು ತಾನೇ ತೆಗೆಯುವುದಾಗಿಯೂ, ತನಗೆ 'ಕಂಪನಿ'ಗೋಸ್ಕರವೆಂದೂ ನಾನೂ ಬರಬೇಕೆಂದು ಪ್ರಲೋಭನೆಗಳೆಸೆದ. 'ಯಾಕೆ ? ಏನು ?' ಎಂದರೂ ಹೇಳಲೊಲ್ಲ. ಕೊನೆಗೆ ಅವನ ಒತ್ತಾಯಕ್ಕೆ ಮಣಿದು ಅಂದು ಹೋದೆ. ನಾನು

ಮೇಲೆ ಹೇಳಿದ 'ಆ ದೃಶ್ಯ' ಬರುವುದಕ್ಕೆ ನಾಲ್ಕಾರು ನಿಮಿಷ ಮೊದಲು ಬದಿಗೆ ಕುಳಿತಿದ್ದ ಅಶೋಕ ಮೂತ್ರವಿಸರ್ಜನೆಗೆ ಹೋಗಿಬರುವೆನೆಂದು ಮೆಲ್ಲನೆದ್ದ. ಯಾವುದೋ ಲಹರಿಯಲ್ಲಿದ್ದ ನಾನು ಹೂಂಗುಟ್ಟಿದೆನಾದರೂ ಒಂದೆರಡು ನಿಮಿಷ ಗಳಲ್ಲೇ ಕಾಲು ಜುಮುಗುಟ್ಟಿದಂತೆನಿಸಿದಾಗ, ಎದ್ದು ಅಶೋಕನನ್ನು ಹಿಂಬಾಲಿಸಿದೆ. ನನ್ನನ್ನು ನೋಡದ ಅಶೋಕ ನೇರವಾಗಿ ಪರದೆಯ ಹಿಂಬದಿಗೆ ಹೋಗಿ ಚಕ್ಕಳಮಕ್ಕಳ ಹಾಕಿ ಕುಳಿತುಬಿಟ್ಟ. ಆಶ್ಚರ್ಯಗೊಂಡ ನಾನು ಅಷ್ಟಂತರದಲ್ಲಿ ಆತನ ಹಿಂದೆ ನಿಂತೆ. ನಾನು ಮೇಲೆ ಹೇಳಿದ 'ಆ ದೃಶ್ಯ' ದಾಟುತ್ತಿದ್ದಂತೆಯೇ ಛೇ ಎನ್ನುತ್ತ ಕೈಕೈ ಹಿಸುಕಿಕೊಳ್ಳುತ್ತ ಎದ್ದ. ಹೊರಳಿ ನೋಡಿದಾಗ ನನ್ನನ್ನು ಕಂಡು ಬೆಪ್ಪನಾದ ಅಶೋಕ ನಂತರ ವಿವರಿಸಿದ್ದಿಷ್ಟು – 'ಪರದೆಯ ಮುಂಬದಿಗೆ ಬೆತ್ತಲೆ ಬೆನ್ನು ಕಾಣಿಸುತ್ತಾದರೆ, ಪರದೆಯ ಹಿಂಬದಿಗೆ ಆಗ ಅವಳ ಎದೆ ಕಾಣುತ್ತದೆ' ಎಂದು ಆತ ಭಾವಿಸಿದ್ದ.

ನಿನ್ನೆಯ ಸಿನೇಮಾದ ಟ್ರೇನು ಇಂದಿನ ಸಿನೇಮಾದಲ್ಲಿ ಲೇಟಾಗಬಹುದು ಎನ್ನುವುದ ಕ್ಕಿಂತಲೂ, ಪರದೆಯ ಮುಂಬದಿಗೆ ಬೆನ್ನು ಕಂಡರೆ, ಹಿಂಬದಿಗೆ ಎದೆ ಕಾಣುತ್ತದೆ ನ್ನುವುದು ಹೆಚ್ಚು ವಾಸ್ತವಕ್ಕೇ ಸಮೀಪವಿರುವ ಲಾಜಿಕ್ಕು ಎಂದೆನಿಸುವುದಿಲ್ಲವೇ ?

ನನ್ನ ಬಾಲ್ಯದಲ್ಲಿ ಇಂಥದೇ ಟೆಂಟ್ ಥಿಯೇಟರಿನಲ್ಲಿ ನಾನು ಇನ್ನೊಂದು ಕನ್ನಡ ಸಿನೇಮಾ ನೋಡಿದ್ದೆ. ನನಗಾಗ ಆರೇಳರ ಪ್ರಾಯವಿರಬೇಕಷ್ಟೆ. ಚಿತ್ರದ ಹೆಸರು ನೆನಪಿಲ್ಲವಾದರೂ ಅದರೊಳಗಿನ ಒಂದು ದೃಶ್ಯ ಇನ್ನೂ ನನ್ನ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿದಿದೆ. ನರಸಿಂಹರಾಜು ಎಲ್ಲೋ ಹೊರಗೆ ಹೋಗಿ ರಾತ್ರಿ ತಡವಾಗಿ ಮನೆಗೆ ಮರಳಿದಾಗ ಆತನ ತಾಯಿ ತನ್ನ ಸೊಸೆಯ ಬಗ್ಗೆ ಹತ್ತಾರು ತಕರಾರು ಹೇಳುತ್ತಾಳೆ. ನರಸಿಂಹರಾಜುಗೋ ಪೀಕಲಾಟ – ಹೆಂಡತಿಯ ಪರ ವಹಿಸುವಂತಿಲ್ಲ, ತಾಯಿಯನ್ನು ಬಿಟ್ಟುಕೊಡುವಂತಿಲ್ಲ. ಹೀಗಾಗಿ ತನ್ನ ಹೆಂಡತಿಯನ್ನೇ – 'ಏನೇ ಗಯ್ಯಾಳಿ, ನನ್ನ ತಾಯಿಗೆ ಎದುರಾಡ್ತೀಯೇನೇ ? ನಡೆ ನಿನ್ನ ಸೊಕ್ಕು ಇಳಸ್ತೀನಿ' ಎಂದು ಮೂಲೆಯಲ್ಲಿದ್ದ ಕೋಲನ್ನು ಎತ್ತಿಕೊಂಡು, ಹೆಂಡತಿಯನ್ನು ಕೈಹಿಡಿದು ತನ್ನ ಬೆಡ್‌ರೂಂಗೆ ಎಳೆದೊಯ್ಯುತ್ತಾನೆ ಮತ್ತು ಬಾಗಿಲಿಗೆ ಒಳಚಿಲಕ ಹಾಕಿ ಕೋಲಿನಿಂದ ರಪ್-ರಪ್ ಎಂದು ಹೊಡೆಯತೊಡಗುತ್ತಾನೆ. ಈ ಹೊಡೆತದ ಸದ್ದನ್ನೂ, ಸೊಸೆಯ ಕುಯ್ಯೋ-ಮುರ್ರೋ ಎಂಬ ಕಿರುಚಾಟವನ್ನೂ ಹೊರನಿಂತಿದ್ದ ಆತನ ತಾಯಿ ಹೀಗೇ ಆಗಬೇಕು ಈ ಮೂದೇವಿಗೆ ಎಂದು ಬೆಟ್ಟು ಮುರಿಯುತ್ತಾ ಸಂತೋಷಿಸುತ್ತಾಳೆ. ಆದರೆ ಕಠೋರಹೃದಯದ ಅತ್ತೆಯೂ ಕೆಲಸಮಯದ ನಂತರ ಮಗ ಈ ರೀತಿ ತನ್ನ ಹೆಂಡತಿಯನ್ನು ದನಕ್ಕೆ ಹೊಡೆದಂತೆ ಇನ್ನೂ ಹೊಡೆದರೆ, ತನ್ನ ಮಗನಿಗೂ ತನಗೂ ಜೈಲೇ ಗತಿ ಎಂದು ಗಾಬರಿಯಾಗಿ ದಡಬಡ ಬಾಗಿಲು ಬಡೆದು ಇನ್ನು ಸಾಕು ನಿಲ್ಲಿಸು ಎಂದು ಹಲುಬಿದರೂ ರೂಮಿನೊಳಗಿನ ಹೊಡೆತದ ಸದ್ದು-ಕಿರುಚಾಟ ನಿಲ್ಲುವುದಿಲ್ಲ. ಈಗ ನಿಜಕ್ಕೂ ಅವಳ ಕೈಕಾಲು ಥರಗುಟ್ಟತೊಡಗಿದಾಗ, ರೂಮಿನ ಹಿಂಬದಿಯ ಕಿಟಕಿಗೆ ಓಡಿಹೋಗಿ ಹಣಕಿಹಾಕಿದರೆ – ಮಗ ತನ್ನ ಹೆಂಡತಿಯನ್ನು ಎಡತೋಳಿನಲ್ಲಿ ಬಳಸಿಕೊಂಡು ಮುದ್ದುಮಾಡುತ್ತಲೇ, ಬಲಗೈಯಲ್ಲಿದ್ದ ಬಡಿಗೆಯಿಂದ ಗಾದಿಯ ಸುರಳಿಗೆ ರಪ್ ರಪ್ ಎಂದು ಹೊಡೆಯುತ್ತಲೇ, ಹೆಂಡತಿಗೆ ಕುಯ್ಯೋ-ಮರ್ರೋ ಎಂದು ಕಿರುಚಲು ಕಣ್ಸನ್ನೆಯಿಂದಲೇ ಪುಸಲಾಯಿಸುತ್ತಿರುತ್ತಾನೆ. ಕೊನೆಗೆ ಕಿಟಕಿಯಿಂದ ಹಣಕಿಹಾಕುತ್ತಿದ್ದ ತಾಯಿ-ಮಗನ ಕಣ್ಣುಗಳು ಸಂಧಿಸಿದಾಗ ಎಲ್ಲರೂ ಮನಸಾರೆ ನಗುತ್ತಾರೆ.

ಈ ದೃಶ್ಯ ಕಂಡ ನಾವೆಲ್ಲ ಚೆಣ್ಣರು ದೃಶ್ಯ ಮುಗಿದ ನಂತರವೂ ಕುಣಿಕುಣಿದು ಮನಸಾರೆ ನಕ್ಕಿದ್ದೂ ನಕ್ಕಿದ್ದೆ. ಆದರೆ ನಾನು ಈ ದೃಶ್ಯ ಕಂಡ ಕ್ಷಣದಿಂದಲೂ ಇಂಥ ದೃಶ್ಯವನ್ನು ನಾನು ಈ ಮೊದಲೇ ಇನ್ನೊಂದು ಸಿನೇಮಾದಲ್ಲೋ ಮತ್ತೆಲ್ಲೋ ಕಂಡಂತೆ ತಲೆಯಲ್ಲೆಲ್ಲೋ ಗೊಂದಲ. ನೆನಪಿಸಿಕೊಂಡರೂ ನೆನಪಾಗದೆ ತಲೆಯಲ್ಲೆಲ್ಲಾ ಕಲಸಿಹೋದಂತಾಗಲು ಸುಮ್ಮನಾಗಿಬಿಟ್ಟೆ. ಮಾರನೇ ದಿನವೋ ಅಥವಾ ಅದರ ಮರುದಿನವೋ ಮಧ್ಯಾಹ್ನದ ಊಟದ ನಂತರ ನನ್ನ ತಾಯಿ ನನ್ನನ್ನು ತಟ್ಟಿ ಮಲಗಿಸುತ್ತಿದ್ದಾಗ ಮೊನ್ನೆ ನೋಡಿದ ಈ ಸಿನೇಮಾದ ದೃಶ್ಯ ನೆನಪಾಗಿ, ಧಿಗ್ಗನೇ ಎದ್ದು ಕುಳಿತು ನಗು ತಡೆಯಲಾಗದೆ ಘೊಳ್ಳೆಂದು ನಗುತ್ತಲೇ ಸಾದ್ಯಂತವಾಗಿ ವಿವರಿಸಿದೆ. ಮನಸಾರೆ ನಕ್ಕ ಅವಳೂ ಇಂಥದೇ ಮತ್ತೊಂದು ಘಟನೆ ನಿನಗೆ ನೆನಪಾಗುತ್ತಿಲ್ಲವೇ ಎಂದು ಕೇಳಿದಾಗ ನಾನು ಹೌದು-ಇಲ್ಲ ಎಂಬಂತೆ ಗೋಣುಹಾಕಿದಾಗ ಅವಳು ವಿವರಿಸಿದಳು. ಅವಳು ನಾಲ್ಕಾರು ವಾಕ್ಯ ಪೂರೈಸುವುದರೊಳಗೇ ನನ್ನ ನೆನಪು ನಿಚ್ಚಳವಾಯಿತು.

ನಾನಾಗ ಮೂರು-ನಾಲ್ಕರ ಪೋರನಂತೆ. ನಮ್ಮ ನೆರೆಮನೆಯಲ್ಲೊಂದು ಮಧ್ಯ



## ನನ್ನಜ್ಜಿ

ಬೆಳ್ಳನೆ ಬೆಳಿಗ್ಗೆ 'ಕರಿಯ' ಸುದ್ದಿ
ಬೆರಗುಗಣ್ಣಲ್ಲಿ ಬಾಲ್ಯ ಬೆಸೆದ
ನನ್ನ 'ಕರಿಯಜ್ಜಿ'
ಕೊಂಡಿ ಕಳಚಿ – ಸಾವನವಚಿ
ಹೊರಟೇ ಬಿಟ್ಟಳು
ಅಳಲಿಲ್ಲ – 'ನನ್ನಜ್ಜಿಗೆ ಸಾವಿಲ್ಲ'

ಮನೆಯಲ್ಲೀಗ –
ಸತ್ತ ಸೂತಕದ ಕೊಳೆಗೆ
ಸುಣ್ಣ ಬಣ್ಣದ ಕಳೆ
ಆಟ ಮುಗಿಸಿ ಅಟ್ಟ ಆಡರಿದ್ದ
ಪಾತ್ರೆ - ಪಗಡಿ - ಜರಡಿ
ಅಂಗಳದಲ್ಲೆಲ್ಲಾ ಹರಡಿ
ಒರಲೆ - ಜಿರಲೆ
ಮೂಲೆ - ಮೂಲೆಯ ಮಾಲೆ - ಜೇಡರ ಬಲೆ
ಬಟಾ ಬಯಲಲ್ಲಿ
ಬೆತ್ತಲಾದ ಭಾವಗಳ ಕೊಲೆ

ಅರೆ ! ಧೂಳಲ್ಲಿ, ಧೂಳಿಡಿದಿದ್ದ
ಅಜ್ಜಿಯ ಆ "ಪುಟ್ಟ ಪುಸ್ತಕ"
ಆದಿಯಲ್ಲಿ ಇಷ್ಟ ದೈವದ ಶ್ಲೋಕ
ಸರದಿಯಲ್ಲಿ ಸಾಲು ಲೆಕ್ಕಗಳ ಶೋಕ

ಟೊಮೋಟೋ - ಕೊತ್ತಂಬರಿ - ಕರಿಬೇವು
ಲೆಕ್ಕ ಒಪ್ಪಿಸುವ ನೋವು

ನೂಲಿಗೆ ಮೂರು - ಹಾಲಿಗೆ ನೂರು
ಹೀ... ಗೆ... ಸಾವಿರಾರು
ಲೆಕ್ಕದ ಚಕ್ರವ್ಯೂಹದಲ್ಲಿ
ಅವಳ ದಾಂಪತ್ಯದ ಬೇರು

ಕಾಸು ಕಾಸು ಕೂಡಿ ಕಳೆದು
ಲೆಕ್ಕವನ್ನೇ ಹಾಸಿ ಹೊದೆದು
ಪೈಸ ಪೈಸ ಕಾದಿದ್ದ ಆ ನನ್ನಜ್ಜ
ಜೀವನದ 'ಬೀಜ'–
ಗಣಿತ ಕಲಿತಿದ್ದನಾ ?

ನಿಜ ಹೇಳಜ್ಜ –
ನಿನ್ನ ಕನಸುಗಳನ್ನು ಕಳೆದಷ್ಟು
ಕನಸುಗಳ ಕೂಡಿ ಕಾದಿದ್ದನಾ...
ಆ ನಿನ್ನ ಮದನ
ಇದ್ದಾಗ ನೀ
ನಿತ್ಯ ಕದನ
ಇದೀಗ –
ನಿನ್ನದೇ ಧ್ಯಾನ

ನಿನ್ನ ಚರ್ಮದಲ್ಲಿನ
ಸುಕ್ಕು ಸುಕ್ಕುಗಳಲ್ಲಿ
ಸೊಕ್ಕಿದವರು ಕುಕ್ಕಿದ
ರೆಕ್ಕೆ ಕಳೆದ ಹಕ್ಕಿಯ
ಮೂಕ ಬಿಕ್ಕಳಿಕೆ

ಜಗದ ಕಣ್ಣಿಗೆ
'ನೀ'
'ಹಸನ್ಮುಖಿ'
'ಎಲ್ಲರ ಸಖಿ'
'ಸದಾ ಸುಖಿ'
'ಅಜ್ಜನ ಪ್ರೀತಿಯ ಮನದನ್ನೆ'

ಈಗ ನಿನಗೆ
ಮುತ್ತೈದೆ ಸಾವಿನ ಪುಣ್ಯ (?)

**ಶೀಲಾ ಪ್ರಕಾಶ್**
ಮುಖ್ಯಸ್ಥರು ಕನ್ನಡ ವಿಭಾಗ
ಆರ್.ವಿ. ಕಾಲೇಜ್, ಜಯನಗರ
ಬೆಂಗಳೂರು - ೫೬೦ ೦೧೧

**ಒಬ್ಬಂಟಿ**

ಕೋಗಿಲೆ ಕೂಗುತಿದೆ

ಹೌದು ಇಂದು, ಇಂದೇ

ಬಳಿಯಲ್ಲಾರೂ ಇಲ್ಲ!

**ರತ್ನಾಕರ ಶೆಟ್ಟಿ**
ಮುಂಬಯಿ

---

ವಯಸ್ಸು ದಾಟಿದ ಅಜ್ಜ-ಅಜ್ಜಿ– ಮತ್ತು ಬೆಳೆದು ನಿಂತ ಮೂರ್ನಾಲ್ಕು ಮಕ್ಕಳ ತುಂಬು ಕುಟುಂಬ. ಗಟ್ಟಿಮುಟ್ಟಾದ ಅಜ್ಜಿಯದು ಸ್ವಲ್ಪ ಸ್ಥೂಲದೇಹ; ಒರಟು ಸ್ವಭಾವ. ಸಣಕಲು ಅಜ್ಜನದು ಸರಳ ಸಂಭಾವಿತ ವ್ಯಕ್ತಿತ್ವ. ಒಂದು ಮಧ್ಯಾಹ್ನ ಮಕ್ಕಳೆಲ್ಲ ಶಾಲೆ-ಕಾಲೇಜುಗಳಿಗೆ ಹೋದಾಗ, ಅಜ್ಜ-ಅಜ್ಜಿಯರ ಮಧ್ಯೆ ನಮ್ಮ ಮನೆಯಲ್ಲೂ ಕೇಳಿಬರುವಂತೆ ಜೋರು ಜೋರಾಗಿ ವಾದ ವಿವಾದವಾಗಿ ಅದು ಜಗಳಕ್ಕೆ ತಿರುಗಿದೆ. ಕೆಲಸಮಯದಲ್ಲಿಯೇ ಕೈಗೆ ಕೈ ಹತ್ತಿದ ಸದ್ದು. ಮುಂದಿನ ನಾಲ್ಕಾರು ನಿಮಿಷದಲ್ಲಿಯೇ ರಪ್-ರಪ್ ಹೊಡೆತದ ಶಬ್ದದೊಂದಿಗೆ ಅಜ್ಜಿಯ ಮುಲುಕಾಟ, ನರಳಾಟದೊಂದಿಗೆ, ಅಜ್ಜನ –''ಇಂದು ಏನಾದರೊಂದು ಫೈಸಲ್ ಆಗಿಯೇ ಹೋಗಲಿ – ಒಂದೋ ಈ ಮನೆಯಲ್ಲಿ ನಾನಿರಬೇಕು. ಇಲ್ಲಾ ನೀನಿರಬೇಕು. ನಿನಗೆ ಗಂಡನೆಂದರೆ ಕಾಲಕಸ. ಇಂದು ನಿನ್ನ ಕೈಕಾಲು ಮುರಿದು ದನದ ಕೊಟ್ಟಿಗೆಗೆ ಹಾಕದಿದ್ದರೆ ನನ್ನ ಹೆಸರು...'' ಎಂಬರ್ಥದ ವೀರಾವೇಶದ ಮಾತುಗಳು. ಮೊದಮೊದಲು 'ಗಂಡ ಹೆಂಡಿರ ಜಗಳದಲ್ಲಿ ನಾವ್ಯಾಕೆ?' ಎಂಬ ಇರಾದೆಯಿಂದ ನನ್ನನ್ನು ಪಕ್ಕದಲ್ಲಿಯೇ ಕೂಡ್ರಿಸಿಕೊಂಡು ಅಕ್ಕಿ ಹಸನು ಮಾಡುತ್ತಿದ್ದ ನನ್ನವ್ವ, ಕೊನೆಗೆ ಮತ್ತೇನಾದರೂ ಅನಾಹುತವಾಗಬಹುದೆಂದು, ತೊಟ್ಟಿಲಲ್ಲಿ ಮಲಗಿ ನಿದ್ರಿಸುತ್ತಿದ್ದ ನನ್ನ ತಂಗಿಯನ್ನು ಅಲ್ಲಿಯೇ ಬಿಟ್ಟು, ನನ್ನ ಕೈಹಿಡಿದು ಅವರ ಮನೆಗೆ ಕರೆದೊಯ್ದಳು. ಅಲ್ಲಿ ನಾವು ನೋಡಿದ್ದೇನು?

ಮೂಲೆಯಲ್ಲಿ ಕುಕ್ಕುರುಗಾಲು ಹಾಕಿ ಕುಳಿತಂತೆಯೇ ಪೆಟ್ಟು ತಪ್ಪಿಸಿಕೊಳ್ಳಲು ಅತ್ತಿತ್ತ ಕೈಅಡ್ಡ ತರುತ್ತಿದ್ದ ಅಜ್ಜನನ್ನು ಗಟ್ಟಿಗಿತ್ತಿ ಅಜ್ಜಿ ಕೋಲಿನಿಂದ ಯದ್ವಾತದ್ವಾ ತದಕುತ್ತಿದ್ದಾಳೆ. ಇಂಥ ಸಂದಿಗ್ಧ ಸಮಯದಲ್ಲೂ ಅಜ್ಜನ ಬಾಯಿಂದ ಬರುತ್ತಿದ್ದುದು ವೀರಾವೇಶದ 'ಮೂಳೆ ಮುರಿಯುವೆ'ನೆಂಬರ್ಥದ ಮಾತುಗಳಾದರೆ, ಮೈಕೈ ನೋಡದೆ ಥಳಿಸುತ್ತಿದ್ದ ಅಜ್ಜಿಯ ಬಾಯಿಯಿಂದ ನರಳಾಟ, ಮುಲುಕಾಟ! ನೋಡಿ ಅವಾಕ್ಕಾದರೂ ಸಾವರಿಸಿಕೊಂಡು 'ಗಂಡ-ಹೆಂಡಿರ ಜಗಳ' ಬಿಡಿಸಿ ಮನೆಗೆ ಮರಳಿದೆವು ನಾನು-ನನ್ನ ತಾಯಿ.

ನರಸಿಂಹರಾಜುರವರ ಅಮೋಘ ಅಭಿನಯದಲ್ಲಿ ಮೂಡಿಬಂದ ಆ ಸಿನೇಮಾ ಕಾಲ್ಪನಿಕ ದೃಶ್ಯ ನಮ್ಮೆಲ್ಲರನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸಿದ್ದೇನೋ ಸತ್ಯವೇ. ಕೌಟುಂಬಿಕ ಸಾಮರಸ್ಯಕ್ಕೆ ಗಂಡ ಯಾವಾಗಲೂ ಶ್ರೇಷ್ಠ ಮತ್ತು ಹೆಂಡತಿ ಕನಿಷ್ಠ, ಗಂಡ ಹೆಂಡತಿಯನ್ನು ಸದಾ ಹದ್ದುಬಸ್ತಿನಲ್ಲಿಡಬೇಕು ಎಂಬ ನಮ್ಮ ಪರಂಪರಾಗತ ಕಲ್ಪನೆಯನ್ನು ಗಟ್ಟಿಗೊಳಿಸಲು ಗಂಡಹೆಂಡಂದಿರು ಎಂತೆಂಥ ನಾಟಕ ಮಾಡಬೇಕಾಗುತ್ತದೆ.

ಕಲ್ಪನೆಗಿಂತ ವಾಸ್ತವ ಒಂದು ಮೆಟ್ಟಿಲು ಮೇಲೆ ಎಂಬುದನ್ನು ಮೇಲಿನ ಈ ಘಟನೆ ಶ್ರುತಪಡಿಸುವುದಿಲ್ಲವೆ?

ವಿಶ್ವದೆಲ್ಲೆಡೆಗಿಂತ ಭಾರತೀಯರ ವಿವಾಹಬಂಧನ ತುಂಬ ಘಟ್ಟಿಯಾಗಿರುವುದರ ಹಿಂದೆ ಪ್ರೀತಿ, ವಿಶ್ವಾಸ ಮೌಲ್ಯಗಳ ಜತೆಜತೆಗೆ ಎಂತೆಂಥ ವಿಪರೀತ ಪರಿಸ್ಥಿತಿಗಳಲ್ಲೂ ಈ ರೀತಿಯ ನಾಟಕವಾಡಿಯಾದರೂ ಅನುಸರಿಸಿಕೊಂಡು ಹೋಗುವುದೂ ಒಂದು ಕಾರಣವಾಗಿರಬಹುದಲ್ಲವೇ?

'ಬಂಗಾರದ ಮನುಷ್ಯ' ಚಿತ್ರದಲ್ಲಿ ದ್ವಾರಕೀಶ ತಂದೆಯಿಂದ ನಿವಾಳಿಸಿಕೊಂಡು ಹೋಗಿ ಊರಕೆರೆಯ ದಡದಲ್ಲಿ ಕುಳಿತಿದ್ದುದು, ಇಲ್ಯಾಕೆ ಕುಳಿತಿರುವೆ ಎಂದು ಕೇಳಿದಾಗ ನಾನು ಹೊಳೆಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುವವನಿರುವುದಾಗಿ ಹೇಳಿದಾಗ, 'ಹಾಗಾದರೆ ಹಾರು ಮತ್ತೆ, ಯಾರಿಗಾಗಿ ಕಾಯುತ್ತಿರುವೆ' ಎಂದು ಕೇಳಿದಾಗ – 'ಇಲ್ಲಾ ಕೆರೆಯ ನೀರು ತುಂಬ ತಂಪಾಗಿರುವುದಾಗಿಯೂ, ಬಿಸಿಲಿಗೆ ನೀರು ಕೊಂಚ ಬೆಚ್ಚಗಾಗಲಿ ಎಂದು ಕಾಯುತ್ತಿದ್ದೇನೆ' ಎಂದಾಗ ನಾವೆಲ್ಲ ಹೊಟ್ಟೆಹಿಡಿದು ನಕ್ಕಿದ್ದೇ ನಕ್ಕಿದ್ದು. ಪ್ರತಿ ಕನ್ನಡಿಗನ ಮಿದುಳಿನಲ್ಲಿ ಇದು ಸುರುಳಿಸುತ್ತಿ ಕುಳಿತಿರುವ ದೃಶ್ಯವೇ.

ಇಂಥದೇ ಒಂದು ಘಟನೆ – ಈಗ ಕೇಳಿ. ಒಂದು ರಾತ್ರಿ ಸರಿಹೊತ್ತಿನಲ್ಲಿ ನನ್ನ ಬಾಗಿಲ ಚಿಲಕ ಬಾರಿಸಿತು. ನಿದ್ದೆಗಣ್ಣಲ್ಲೇ ಹೋಗಿ ಬಾಗಿಲು ತೆರೆದರೆ ನನಗೆ ನಿಕಟವರ್ತಿಯಾದ ಹಿರಿಯರೊಬ್ಬರು ನಿಂತಿದ್ದಾರೆ. ನಾನಿನ್ನೂ ನಿದ್ದೆಗಣ್ಣುಗಳನ್ನು ಮುಂಗೈಯಿಂದ ತಿಕ್ಕುತ್ತಿರುವಂತೆಯೇ ಅವರು – 'ತಮ್ಮ ಪತ್ನಿ ಮೂರ್ಛೆ ಹೋಗಿ ಬಿದ್ದಿದ್ದು ಅರ್ಜಂಟ್ ಬರಬೇಕೆಂದು' ಅವಸರಿಸಿದರು. 'ಇಂಥ ಅಪರಾತ್ರಿಯಲ್ಲಿ ಏನು ಮಾಡಲು ಹೋಗಿ ಮೂರ್ಛೆ ಹೋದಳು?' ಎಂದು ನಾನು ಪ್ರಶ್ನಿಸಿದಾಗ – 'ಅದೆಲ್ಲ ಆಮೇಲೆ ಮಾತಾಡೋಣ ಡಾಕ್ಟರ್, ಮೊದಲು ಹೊರಡಿ' ಎಂದಾಗ ಲಗುಬಗೆಯಲ್ಲಿ ಬಟ್ಟೆ ಬದಲಿಸಿದವನೇ ಅವನ ಬೆನ್ನ ಹಿಂದೆ ನಡೆದೆ. ಮನೆಬಾಗಿಲು ತೆರೆದೊಡನೆಯೇ ಏನೋ ಘಾಟುವಾಸನೆ ಮೂಗಿಗಡರಿತು. ಬೆಡ್‌ರೂಂನ ಕಾಟಿನ ಮೇಲೆ ಬಟ್ಟೆಯೆಲ್ಲ ತೊಯ್ದು ತೊಪ್ಪೆಯಾದ ಮಹಿಳೆ ಪವಡಿಸಿದ್ದಳು. ಪ್ರಜ್ಞೆ ಇರಲಿಲ್ಲ. ಕಣ್ಣು, ನಾಡಿ, ಎದೆಬಡಿತ, ರಕ್ತದೊತ್ತಡಗಳನ್ನೆಲ್ಲ ಪರೀಕ್ಷಿಸಿದಾಗ ಅವೆಲ್ಲವೂ ಸುಸ್ಥಿತಿಯಲ್ಲಿರುವುದನ್ನು ಕಂಡು ನಾನೇ ಇದೆಲ್ಲ ಹೇಗಾಯಿತು? ಬವಳಿ ಬರುವುದಕ್ಕಿಂತ ಮುಂಚೆ ಏನಾಯ್ತು? ಎಂದು ವಿವರಣೆ ಕೇಳಿದಾಗ ಆಕೆಯ ಪತಿಯೇ ಅನ್ಯರು ಬಾಯಿ ತೆರೆಯುವುದಕ್ಕೆ ಮೊದಲೇ, 'ಏನಿಲ್ಲ ಸರ್, ನಿದ್ದೆಯಿಂದ ಎದ್ದು ಬಾತ್‌ರೂಂಗೆ ಹೋಗಿ ಮರಳುತ್ತಿರುವಾಗ ಇಲ್ಲೇ ಬವಳಿಬಂದು ಕುಸಿದಳು. ನಾವೇ ಎತ್ತಿ ಪಲ್ಲಂಗದ ಮೇಲೆ ಮಲಗಿಸಿದೆವು' ಎಂದ. ನಾನು 'ಎಷ್ಟೊತ್ತಾಯ್ತು ಹೀಗಾಗಿ?' ಎಂದಾಗ 'ಅರ್ಧಗಂಟೆಯಾಗಿರಬಹುದು' ಎಂದು ಉತ್ತರಿಸಿದ. ನೀಳವೇಣಿಯಾಗಿದ್ದ ಅವಳ ತಲೆಗೂದಲೆಲ್ಲ ತೊಯ್ದು ತೊಪ್ಪೆಯಾಗಿದ್ದವು. ಉಟ್ಟಿದ್ದ ತೊಡುಗೆಯೂ ಹಸಿಯಾಗಿ ಮೈಗಂಟಿಕೊಂಡಿತ್ತು. ಇವಳ ಮೈಯಿಂದ ಹೊರಹೊಮ್ಮುತ್ತಿದ್ದ ಕೆರೊಸಿನ್‌ನ ಘಾಟುವಾಸನೆ ವಾಕರಿಕೆ ತರಿಸುವಷ್ಟು ರೂಮಿನಲ್ಲೆಲ್ಲ ತುಂಬಿಕೊಂಡಿತ್ತು. ಅವಳ ಗದ್ದದ ಮೇಲೆ ಒತ್ತಡ ಹೇರಿ ಬಾಯಿತೆರೆದು ನನ್ನ ಮೂಗು ಬಳಿಗೊಯ್ದು ಮೂಸಿನೋಡಿದೆ. ಕೆರೊಸೀನ್ ಕುಡಿದಂಥ ಲಕ್ಷಣವೇನೂ ಕಾಣದ್ದರಿಂದ ಸಮಾಧಾನಗೊಂಡು – 'ಏನಿದು ವಾಸನೆ?' ಎಂದು ಪ್ರಶ್ನಿಸಿದೆ. ಬದಿಗೆ ನಿಂತಿದ್ದ ಅವಳ ಮಗ ಬಾಯಿ ತೆರೆಯುವುದಕ್ಕಿಂತ ಮೊದಲೇ ಪತಿರಾಯ ಹೇಳಿದ – 'ಅವಳು ಬವಳಿ ಬಂದು ಬಿದ್ದಾಗ ಅಂಗೈ-ಅಂಗಾಲುಗಳಿಗೆ ಬೂದಿಹಚ್ಚಿ ತಿಕ್ಕಿ, ಮೂಗಿಗೆ ಉಳ್ಳಾಗಡ್ಡಿ ಹಿಡಿದಾಗಲೂ ಅಲುಗಾಡದಾಗ ಮೂಗಿಗೆ ಕೆರೊಸಿನ್ ಹಿಡಿಯಲು ಹೋಗಿ ಕ್ಯಾನಿನಿಂದ ಕೆರೊಸಿನ್ ತುಳುಕಿ ಹೀಗಾಯಿತು' ಎಂದು ತಡಬಡಿಸುತ್ತಲೇ ಸಮಾಧಾನ ನೀಡಿದ. ಈತ ಏನೋ ಗುಟ್ಟು ಮುಚ್ಚಿಡುತ್ತಿದ್ದಾನೆ ಎಂದೆನಿಸಿದರೂ ರೋಗಿಯ ದೇಹಸ್ಥಿತಿ ಸಮಾಧಾನಕರವಾಗಿದ್ದುದರಿಂದ – ಈ ಇಂಜೆಕ್ಷನ್ ಕೊಡ್ತೇನೆ. ಅರ್ಧಗಂಟೆಯಲ್ಲಿ ಪ್ರಜ್ಞೆ ಮರಳದಿದ್ದರೆ ಹಾಸ್ಪಿಟಲ್‌ಗೆ ತನ್ನಿ. ಸದ್ಯಕ್ಕಂತೂ ಗಾಬರಿಯಾಗುವಂಥದೇನಿಲ್ಲ. ಯಾವುದಕ್ಕೂ ನಾಳೆ ಬೆಳಿಗ್ಗೆ ಆಸ್ಪತ್ರೆಗೆ ಕರೆತಂದು ಜನರಲ್ ಚೆಕ್‌ಅಪ್ ಮಾಡಿಸಿಕೊಳ್ಳಿ ಎಂದು ವಿವರಿಸಿ ಮನೆಗೆ ಮರಳಿದೆ.

ಮರುದಿನ ಈ ಜೋಡಿ ಆಸ್ಪತ್ರೆಗೆ ಬಂದಿತು. ಅವರ ಸರದಿ ಬಂದಾಗ ಒಳಗೆ ಬಂದರು ಇವರೀರ್ವರು. ಪತ್ನಿ ಮ್ಲಾನವದನಳಾಗಿ ಇರುವುದನ್ನೂ ನಾನಾಗಿಯೇ ಮಾತನಾಡಿಸಿದರೂ ತಗ್ಗಿಸಿದ ತಲೆ ಮೇಲೆತ್ತದೆ 'ಹ್ಞಾ' 'ಹ್ಞೂಂ' ಎಂದಷ್ಟೇ ಚುಟುಕಾಗಿ ಉತ್ತರಿಸುತ್ತಿದ್ದುದನ್ನೂ ನಗೆಯಾಡಿದರೂ ಮುಖದ ಬಿಗಿವು ಸಡಿಲಾಗದುದನ್ನೂ ಗಮನಿಸುತ್ತಿದ್ದೆ.

ಅವಳ ದೇಹಸ್ಥಿತಿಯನ್ನೆಲ್ಲ ತಪಾಸಿಸಿ ಎಂಥದೇ ದೋಷ ಕಂಡುಬರದಾಗ ಎದುರಿಗೆ ಪತಿಪತ್ನಿಯರೀರ್ವರನ್ನು ಕುಳ್ಳಿರಿಸಿಕೊಂಡು ನಿನ್ನೆ ರಾತ್ರಿ ನಡೆದುದನ್ನೆಲ್ಲಾ ಇದ್ದುದಿದ್ದಂತೆ ಹೇಳುವಂತೆ ಆಗ್ರಹಿಸಿದೆ. ಆಗ ತಿಳಿದುಬಂದ ಒಟ್ಟಭಿಪ್ರಾಯವಿಷ್ಟು. – ಕಳೆದ ಎರಡು ತಿಂಗಳಿಂದ ಗಂಡ ಆಗಾಗ ರಾತ್ರಿ ತಡವಾಗಿ ಬರುತ್ತಿರುವುದನ್ನೂ, ಇದರ ಹಿಂದೆ ಏನೋ ಗೋಪ್ಯವಿದೆಯೆಂದು ಸಂದೇಹಿಸಿದ ಹೆಂಡತಿ – 'ಎಲ್ಲಿಗೆ ಹೋಗಿದ್ದಿರಿ? ಯಾಕೆ ಇಷ್ಟೊತ್ತು?' ಎಂದು ತನಿಖೆಗಿಳಿದಾಗ ಆಗಾಗ ಮಾತಿಗೆ ಮಾತು ಸೇರಿ ಸಣ್ಣಪುಟ್ಟ ಜಗಳಗಳಾದವೆಂದೂ ಹೆಂಡತಿ ಹೇಳಿದಳು. ಕೆಲಸಲ ತಾನು ಕಣ್ಣೀರಿಟ್ಟು ರಂಪ ಮಾಡಿದಾಗ ಇನ್ನು ಮುಂದೆ ತಡವಾಗಿ ಬರುವುದಿಲ್ಲವೆಂದು ಆಣೆ-ಪ್ರಮಾಣ ಮಾಡಿದರೂ ಮತ್ತೆ ನಾಲ್ಕು ದಿನಗಳಲ್ಲಿ ಇದೇ ಪುನರಾವರ್ತನೆಯಾಯಿತೆಂದೂ ಸೇರಿಸಿದಳು. ನಿನ್ನೆ ರಾತ್ರಿ ಸ್ವಲ್ಪ ತಡವಾಗಿ ಮನೆಗೆ ಮರಳಿದಾಗ ಮೊದಲೇ ಧಿಮಿಧಿಮಿ ಗುಟ್ಟುತ್ತಿದ್ದ ಈಕೆ 'ಇಷ್ಟೊತ್ತೇಕೆ? ನಿಮ್ಮದೇನೋ ಕಳ್ಳಾಟ ನಡೆದಿದೆ' ಎಂದು ಒಂದೇ ಸಮನೆ ತಲೆತಿನ್ನತೊಡಗಿದಾಗ ಈತನ ಸ್ವಾಭಿಮಾನ ಕೆರಳಿ – 'ಹೌದೇ, ನಾನು ಗಂಡು ಗಂಡಸು, ಒಂದೇಕೆ ನಾಲ್ಕು ಇಟ್ಕೊತೇನೆ, ನಿಂದೇನು?' ಎಂದು ಕೆರಳಿದಾಗ ಒಮ್ಮೆಲೇ ಶಾಕ್ ಹೊಡೆದಂತಾದ ಈಕೆ ಅಡಿಗೆ ಮನೆಯ ಮೂಲೆಯಲ್ಲಿಟ್ಟಿದ್ದ ಕೆರೊಸಿನ್ ಕ್ಯಾನನ್ನೂ ಬೆಂಕಿ ಪೊಟ್ಟಣವನ್ನೂ ಕೈಗೆತ್ತಿಕೊಂಡು ಬಚ್ಚಲುಮನೆ ಸೇರಿದವಳೇ ಬಾಗಿಲಿಗೆ ಒಳಚಿಲಕ ಭದ್ರವಾಗಿ ಜಡಿದು, ತಲೆಯ ಮೇಲೆ ಕ್ಯಾನು ಕೆರೊಸಿನ್ನೆಲ್ಲ

ಸುರಿದು ಬರಿದು ಮಾಡಿಟ್ಟು, ಇನ್ನೇನು ಕಡ್ಡಿ ಗೀರಬೇಕು ಎನ್ನುವಷ್ಟರಲ್ಲಿ ಇವಳ ದೃಷ್ಟಿ ಬಚ್ಚಲಿನ ಮೋರಿಗೆ ಸರಿದಿದೆ.

ಇಷ್ಟರಲ್ಲಿ ಇವಳ ಈ ಚಡಪಡಿಕೆಯ ಚಟುವಟಿಕೆ ನೋಡಿ ಗಾಬರಿಗೊಂಡ ಗಂಡನ ಮೈಯ ರವರವ ಕೊಂಚ ಇಳಿದಿದೆ. ಮೊದಲು ಹೆಂಡತಿಯನ್ನು ಅಡ್ಡಗಟ್ಟಿ ಮನವೊಲಿಸಲು ವಿಫಲವಾಗಿ, ಇವನನ್ನು ಪಕ್ಕಕ್ಕೆ ದೂಡಿ ಬಾತ್‌ರೂಂ ಸೇರಿ ಒಳಚಿಲಕ ಜಡಿದುಕೊಂಡಾಗ, ನಿಜಕ್ಕೂ ಗಾಬರಿಕೊಂಡ ಗಂಡ. ಮೊದಮೊದಲು ಮೆತ್ತಗೆ ಬಾಗಿಲು ತಟ್ಟಿ ಅನುನಯಿಸತೊಡಗಿದರೂ, ಒಳಗಿನ ಶಬ್ದ ನಿಮಿಷದಿಂದ ನಿಮಿಷಕ್ಕೆ ಹೆಚ್ಚಾಗುತ್ತಿರುವುದನ್ನು ಮನಗಂಡು ಬಾಗಿಲು ದಡಬಡನೆ ಬಡಿದು ಕೂಗಿಕೊಳ್ಳ ತೊಡಗಿದ. ಈ ಸದ್ದು ಗದ್ದಲಕ್ಕೆ ಅಟ್ಟದ ಮೇಲೆ ಮಲಗಿದ್ದ ಮಕ್ಕಳೂ ಓಡಿಬಂದು 'ಯವ್ವಾ ಬಾಗಿಲು ತಗಿ, ಬಾಗಿಲು ತಗಿ' ಎಂಬ ಕೋಲಾಹಲವೆದ್ದಿತು. ಆಗಲೂ ಬಾಗಿಲು ತೆಗೆಯದಾಗ ಫಿಲ್ಮೀ ಸ್ಟೈಲ್‌ನಲ್ಲಿ ಬಾಗಿಲನ್ನು ಕಾಲಿಂದ ಝಾಡಿಸಿ ಒದೆಯುವುದು, ಭುಜದಿಂದ ಗುದ್ದುವುದು ಪ್ರಾರಂಭವಾಯಿತಾದರೂ ಸಿಡಿದು ಬೀಳಲಿದು ಸಿನೇಮಾಗಳಲ್ಲಿ ಅಂಟಿಸಿದಂಥ ಪ್ಲೈವುಡ್ ಬಾಗಿಲೇ ಅಥವಾ ಇವರೇನು ಫಿಲ್ಮೀ ಹಿರೋಗಳೇ ? ಅಳು-ಆರ್ತನಾದಗಳ ಈ ಕಲಸುಮೇಲೋಗರದಲ್ಲಿ ಆ ಹಳೆ ಮನೆಯ ಗಟ್ಟಿಮುಟ್ಟಾದ ಬಚ್ಚಲು ಬಾಗಿಲನ್ನು ದಡಬಡ ಬಡಿಯುವುದೊಂದನ್ನು ಬಿಟ್ಟು ಯಾರೊಬ್ಬರಿಗೂ ಏನೊಂದೂ ತಿಳಿಯದಾದಾಗ ಒಮ್ಮೆಲೆ ಬಾಗಿಲು ತೆರೆದು 'ಹಾವು ಹಾವು' ಎಂದು ಕಿರುಚುತ್ತಾ ಒಳಮನೆಗೆ ಬಂದು ನೆಲಕ್ಕೆ ಧೊಪ್ಪನೆ ಬಿದ್ದುಬಿಟ್ಟಳು. ಅವಳನ್ನು ಎತ್ತಿ ಮಂಚದ ಮೇಲೆ ಹಾಕಿ, ತಲೆಗೆ ನೀರು ಬಡಿದು, ಮುಖಕ್ಕೆ ಸಿಂಪಡಿಸಿ ಅಂಗಾಲು-ಅಂಗೈಗಳಿಗೆ ಬೂದಿ ತಿಕ್ಕಿದಾಗ ಸ್ವಲ್ಪ ಮಿಸುಕಾಡಿದಳಾದರೂ ಪ್ರಜ್ಞೆ ಮರಳಲಿಲ್ಲ.

ಆಗ ಸ್ವಲ್ಪ ಸಮಾಧಾನದ ನಿಟ್ಟುಸಿರು ಬಿಟ್ಟ ಮಗ ಬಚ್ಚಲು ಮನೆಗೆ ಹೋಗಿ ನೋಡುತ್ತಾನೆ – ಒಂದು ಮೂಲೆಯಲ್ಲಿ ಖಾಲಿ ಕೆರೋಸಿನ್ ಕ್ಯಾನು ಬೋರಲು ಬಿದ್ದಿದೆ. ಬದಿಗೆ ಕಡ್ಡಿಪೆಟ್ಟಿಗೆ ನೆನೆದು ತೊಪ್ಪೆಯಾಗಿ ಬಾಯ್ದೆರೆದು ಪವಡಿಸಿದೆ. ಬಾತ್‌ರೂಂನ ಕಿಟಕಿಯಿಂದ ಮಾರುದ್ದದ ಹೊನ್ನಬಣ್ಣದ ಚಾಬೂಕಿನಂತಹ ಚಪಲ ಹಾವೊಂದು ಹೊರಗೆ ಸರಿದುಹೋಗುತ್ತಿದೆ. ಆಗ ಅವನಿಗೆ ನಡೆದುಹೋದ ಘಟನಾವಳಿಗಳೆಲ್ಲ ಕಣ್ಮುಂದೆ ಕನಸಿನಂತೆ ಸುಳಿದುಹೋದವು.

ತನ್ನ ತಾಯಿಗೆ ಜಿರಲೆ, ಹಲ್ಲಿಗಳೆಂದರೆ ವಿಪರೀತ ಅಲರ್ಜಿ; ಅಂಜಿಕೆ. ಕೋಣೆಯ ಕಾಣದ ಯಾವುದೋ ಒಂದು ಮೂಲೆಯಲ್ಲಿ ಹಲ್ಲಿ ಲೊಚಗುಟ್ಟಿದರೂ ಸಾಕು, ಅದನ್ನು ಹುಡುಕಿ ಹೊರದೂಡುವ ಹೊರತು ಆ ಕೋಣೆಗವಳು ಕಾಲಿಡಳು. ಅಂಥದರಲ್ಲಿ ಮೋರಿಯ ಮುಖಾಂತರ ಮಿರಿಮಿರಿನ ಮಿಂಚುವ ಹೊಂಬಣ್ಣದ ಹಾವೊಂದು ನುಸುಳಿ ಬರುತ್ತಿರುವುದನ್ನು ಕಂಡಾಗ ಆಕೆಯ ಪರಿಸ್ಥಿತಿ ಏನಾಗಬೇಡ.

ಮೇಲ್ನೋಟಕ್ಕೆ ಹೇಗೂ ಸಾಯಲು ಹೊರಟಿದ್ದಾಳೆ, ಕಡ್ಡಿ ಗೀರಿಕೊಂಡಿದ್ದರೆ ಒಂದೋ ಅಷ್ಟರೊಳಗೆ ಹಾವು ಬಂದು ಕಚ್ಚಿದ್ದರೆ ಹಾವಿನ ವಿಷದಿಂದಲೋ, ಅಥವಾ ಸುಟ್ಟು ಕರಕಲಾಗಿಯೋ ಸಾಯುತ್ತಿದ್ದಳು ಎಂದು ಯಾರಿಗಾದರೂ ಅನ್ನಿಸಿರಬಹುದು.

ಆದರೆ ಜಿರಲೆಗೆ ಬೆದರಿ ಥೈ ಥೈ ಕುಣಿಯುವ ಈಕೆಗೆ ಹಾವು ಕಂಡೊಡನೆ ಈಗ ನಾನು ಎಲ್ಲಿದ್ದೇನೆ, ಏನು ಮಾಡಬೇಕೆಂದಿದ್ದೇನೆ ಎಂಬುದೆಲ್ಲ ಮರೆತು ಇವಳ ಮಿದುಳಿಗೆ ಹಾವು ಸುರುಳಿಸುತ್ತಿ ಏನೊಂದೂ ತಿಳಿಯದೆ, ಕೈಯಲ್ಲಿದ್ದುದನ್ನೆಲ್ಲ ಅತ್ತಿತ್ತ ಚೆಲ್ಲಿ ಬಾಗಿಲ ಅಗಳಿ ತೆಗೆದು ಹೊರನುಗ್ಗಿದ್ದೊಂದೇ ಗೊತ್ತು – ಮುಂದಿನದೆಲ್ಲ ಅಯಾಚಿತವಾಗಿ ನಡೆದುಹೋಯಿತು.

ಸಿನೇಮಾ ಸೀನಿನಂತೆ ಇದನ್ನು ಆತ್ಮಹತ್ಯೆಯ ಲಘುಪ್ರಹಸನವೆನ್ನುವಂತೆಯೂ ಇಲ್ಲ. ಮನಸ್ಸಿನ ಮೇಲಿನ ಸ್ಥಿಮಿತವನ್ನು ಸಂಪೂರ್ಣ ಕಳೆದುಕೊಂಡಿದ್ದ ಲತಾ ಹಾವು ಮುಖ ತೋರಿಸಲು ಅರೆಕ್ಷಣ ತಡಮಾಡಿದ್ದರೂ ಬೆಂಕಿಕಡ್ಡಿ ಗೀರಿ ಅನಾಹುತಕ್ಕೆಡೆ ಮಾಡಿಕೊಡಬಹುದಿತ್ತು.

ಹಾವು ಕಂಡು ಹೆದರಿ ಪ್ರಾಣಬಿಟ್ಟವರೇ ಅದೆಷ್ಟೋ ಜನ.

ಕ್ಷಣದಲ್ಲಿ ಪ್ರಾಣಕ್ಕೆರವಾಗಬೇಕಿದ್ದ ಲತಾಳಿಗೆ ಸರ್ಪದರ್ಶನವೇ ಪ್ರಾಣವುಳಿಸಿತು.

ಸಲಹೆ ಸಮಾಲೋಚನೆಗಳಿಂದ ಒಬ್ಬರನ್ನೊಬ್ಬರು ಅರಿತ ಈ ದಂಪತಿಗಳ ಮನೆಯಿಂದು ನಂದಗೋಕುಲ.

ಕವಿಕಲ್ಪನೆ, ಕವಿಹೃದಯ, ಕವಿ ಸಮಯ ಇವೆಲ್ಲ ನಮ್ಮಲ್ಲಿಯ ಸುಂದರ ಪದಗಳು. 'ರವಿ ಕಾಣದ್ದನ್ನು ಕವಿ ಕಾಣುತ್ತಾನೆ' ಎಂಬುದೊಂದು ಅನುಭವೋಕ್ತಿ.

ಕವಿ ಕಲ್ಪಿಸಿಕೊಳ್ಳದ್ದನ್ನು ರವಿ ಕಣ್ಣಾರೆ ಕಂಡ ಸಾಕ್ಷಾತ್ ಸ್ತಬ್ಧಚಿತ್ರಗಳಿವು.

**ಡಾ|| ಅನಿಲ ಕಮತಿ**
ಯಕ್ಸಂಬಾ - ೫೯೧ ೨೪೪, ಬೆಳಗಾವಿ ಜಿಲ್ಲೆ

## 'ವ್ಯಕ್ತಿ ವಿಕಸನ ಮಾಲೆ'ಯ ಇಪ್ಪತ್ತೈದು ಕೃತಿಗಳ ಲೋಕಾರ್ಪಣೆ





ನವಕರ್ನಾಟಕ ಪ್ರಕಟಿಸಿರುವ 'ವ್ಯಕ್ತಿ ವಿಕಸನ ಮಾಲೆ'ಯ ಎರಡನೇ ಕಂತಿನ ಇಪ್ಪತ್ತೈದು ಪುಸ್ತಕಗಳ ಲೋಕಾರ್ಪಣೆ ತಾ ೧೫.೪.೨೦೦೭ ರಂದು ಬೆಂಗಳೂರಿನ ಯವನಿಕಾ ಸಭಾಂಗಣದಲ್ಲಿ ನಡೆಯಿತು. ಭಾರಿ ಸಂಖ್ಯೆಯ ಪುಸ್ತಕಪ್ರಿಯರು ಮತ್ತು ಕೃತಿಗಳ ಲೇಖಕರು ಭಾಗವಹಿಸಿದ್ದ ಸಮಾರಂಭದ ಅಧ್ಯಕ್ಷತೆಯನ್ನು ಡಾ|| ಗುರುರಾಜ ಕರಜಗಿಯವರು ವಹಿಸಿದ್ದರು ಮತ್ತು ಪುಸ್ತಕ ಅನಾವರಣ ಮಾಡಿದರು. ಮಾಲೆಯ ಸಂಪಾದಕರಾದ ಡಾ|| ಸಿ. ಆರ್. ಚಂದ್ರಶೇಖರ್ ಪ್ರಾಸ್ತಾವಿಕ ಭಾಷಣದ ಸಂದರ್ಭದಲ್ಲಿ ಲೇಖಕರುಗಳ ಪರಿಚಯ ಮಾಡಿಕೊಟ್ಟರು. ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಕಿರುತೆರೆ ನಿರ್ದೇಶಕ ಶ್ರೀ ಟಿ. ಎನ್. ಸೀತಾರಾಮ್ 'ಮಾಧ್ಯಮ ಮತ್ತು ವ್ಯಕ್ತಿತ್ವ ವಿಕಾಸ' ಕುರಿತು ಭಾಷಣ ಮಾಡಿದರು.

ತರುವಾಯ ಓದುಗರು, ಮುಖ್ಯ ಅತಿಥಿಗಳು ಹಾಗೂ ಲೇಖಕರುಗಳ ಮಧ್ಯೆ ವ್ಯಕ್ತಿ ವಿಕಸನಕ್ಕೆ ಸಂಬಂಧಿಸಿದಂತೆ ಸಂವಾದ ನಡೆಯಿತು. ಸಂವಾದದಲ್ಲಿ ಭಾಗವಹಿಸಿ ಅತ್ಯುತ್ತಮ ಪ್ರಶ್ನೆ ಕೇಳಿದ ಮೂರು ಮಂದಿಗೆ ಪುಸ್ತಕ ಬಹುಮಾನ ನೀಡಲಾಯಿತು. ಡಾ|| ನಾ. ಸೋಮೇಶ್ವರ ಕಾರ್ಯಕ್ರಮ ನಿರ್ವಹಣೆ ಮಾಡಿದರು.



# ಶುಕ್ರ-ಶನಿಗಳ ಓಟದ ಸ್ಪರ್ಧೆ

**ಸಂ**ಜೆಯ ಆಕಾಶದಲ್ಲಿ ಪ್ರಕಾಶಮಾನವಾಗಿ ಬೆಳಗುವ ಶುಕ್ರ ಎತ್ತ ಓಡುತ್ತಿದೆ ? ಇದನ್ನು ತಿಳಿಯಲು ಈಗೊಂದು ಸದವಕಾಶ. ರೋಹಿಣಿಯ ಸಮೀಪದಿಂದ ಹಾದುಬಂದ ಶುಕ್ರ ಈಗ ಓಡುತ್ತಿರುವುದು ಮೃಗಶಿರಾ ನಕ್ಷತ್ರದ ಕಡೆಗೆ. ತಿಂಗಳ ಕೊನೆಗೆ ಅದು ಪುನರ್ವಸು ನಕ್ಷತ್ರದತ್ತ ಧಾವಿಸಲಿದೆ. ನಕ್ಷತ್ರಗಳನ್ನು ಗುರುತಿಸಲು ಇದೊಂದು ಉಪಾಯ. ಹಾಗೆಯೇ ಶನಿ-ಶುಕ್ರಗಳ ನಡುವೆ ಓಟದ ಸ್ಪರ್ಧೆಯನ್ನು ನೋಡಲೂ ಕೂಡ ಒಳ್ಳೆಯ ಅವಕಾಶ. ಶನಿ ಸಾಕಷ್ಟು ಪ್ರಕಾಶಮಾನವಾಗಿರುವ ಕಾಯವೇ. ಆದುದರಿಂದ ಸುಲಭವಾಗಿ ಗುರುತಿಸಬಹುದು. ನಕ್ಷತ್ರಗಳ ಹಿನ್ನೆಲೆಯಲ್ಲಿ ಅದರ ಚಲನೆಯನ್ನು ಗುರುತಿಸಲು ಕಷ್ಟ. ಅದರ ಹೆಸರಿನ ಅರ್ಥವೇ ನಿಧಾನಿ ಎಂದು. ಮಂದ ಎಂಬುದೊಂದು ಹೆಸರೂ ಇದಕ್ಕಿದೆ. ಆದ್ದರಿಂದ ಸದ್ಯಕ್ಕೆ ಅದರ ಚಲನೆ ಹೆಚ್ಚೇನಿಲ್ಲ ಎಂದುಕೊಂಡು, ಅದನ್ನೂ ನಕ್ಷತ್ರವೆಂದೇ ಪರಿಗಣಿಸೋಣ. ಮೇ ೨೦ರಂದು ಚಂದ್ರ-ಶುಕ್ರ ಜೋಡಿ ಯಾಗುವುವು. ೨೨ರಂದು ಶನಿ-ಚಂದ್ರ ಜೋಡಿಯಾಗುವುವು. ಈ ಎರಡು ಘಟನೆಗಳಿಂದಲೇ ಅವು ಸಾಕಷ್ಟು ಅಂತರ ದಲ್ಲಿವೆ ಎಂದು ತಿಳಿಯಬಹುದು. ತಿಂಗಳ ಕೊನೆಗೆ ಶುಕ್ರ-ಶನಿ ಒಂದನ್ನೊಂದು ಭೇಟಿ ಯಾಗಲು ಸಿದ್ಧವಾಗುತ್ತಿವೆ ಎಂಬುದನ್ನು ಗಮನಿಸ ಬಹುದು. ಈ ಓಟದ ಸ್ಪರ್ಧೆಯಲ್ಲಿ ಯಾರು ವಿಜಯಿಯಾಗುತ್ತಾರೆ ಎಂದು ಕಾದುನೋಡೋಣ.

ಈ ತಿಂಗಳಲ್ಲಿ ಅನೇಕ ಆಚ್ಛಾದನೆಗಳೂ ಇವೆ. ಉದಾಹರಣೆಗೆ ೪ರಂದು ಜ್ಯೇಷ್ಠಾ ನಕ್ಷತ್ರವನ್ನು, ೨೩ರಂದು ಮಘ ನಕ್ಷತ್ರವನ್ನು ಚಂದ್ರ ಮರೆಮಾಡಲಿದೆ. ೨೩ರಂದು ರಾತ್ರಿ ೧೧.೪೬ಕ್ಕೆ ಮಘ ಚಂದ್ರನ ಹಿಂದಿನಿಂದ ಹೊರಬರುವ ನೋಟ ಯಕ್ಷಿಣಿಯಂತೆ ಕಾಣಲಿದೆ.

೨ರ ಹುಣ್ಣಿಮೆಯಂದು ಚಂದ್ರನ ಆಸುಪಾಸಿನಲ್ಲಿ ವಿಶಾಖಾನಕ್ಷತ್ರವನ್ನು ಗುರುತಿಸಲು ಪ್ರಯತ್ನಿಸಿ. ಸೋತರೆ ಚಿಂತೆಯಿಲ್ಲ, ಮರುದಿನ ಚಂದ್ರ ದೂರ ಸರಿದಾಗ ಗೆಲುವು ನಿಮ್ಮದೇ. ಜೂನ್ ೧ರ ಹುಣ್ಣಿಮೆಯಂದು ಚಂದ್ರ ಜ್ಯೇಷ್ಠಾ ನಕ್ಷತ್ರವನ್ನು ಮರೆಮಾಡುತ್ತದೆ. ಹಾಗಾಗಿ ಆ ತಿಂಗಳಿಗೆ ಜ್ಯೇಷ್ಠಾ ಎಂಬ ಹೆಸರೇಕೆ ಎಂಬುದರ ಪ್ರಾತ್ಯಕ್ಷಿಕೆ ಅಂದು ನಡೆಯಲಿದೆ.

ಉ
ಧ್ರುವ
ಸಪ್ತರ್ಷಿಮಂಡಲ
ವಿಜಯಸಾರಥಿ
ಬುಧ
ಶುಕ್ರ
ರೋಹಿಣಿ
ಮಿಥುನ
ಸ್ವಾತಿ
ಪೂ
ಶನಿ
ಪ
ಕನ್ಯಾ
ಮಹಾವ್ಯಾಧ
ತುಲಾ
ಚಿತ್ರಾ
ಲುಬ್ಧಕ
ಹಸ್ತಾ
ಕಿನ್ನರಿ
ಶಿಲುಬೆ
ಕರೀನಾ
ದ

ಮಂಗಳಗ್ರಹ ಬೆಳಗಿನ ಜಾವ ಕಾಣಲಿದೆ. ಗುರುಗ್ರಹ ರಾತ್ರಿ ಸುಮಾರು ಎಂಟು ಗಂಟೆಗೆ ಉದಯಿಸಲಿದೆ. ಮುಂಬರುವ ಯುತಿಯ ಸೂಚಕವಾಗಿ ಅದರ ಚಲನೆ ತಟಸ್ಥವಾಗುವುದು ಜೂನ್ ೫ರಂದು. ಬುಧಗ್ರಹ ಸಂಜೆಯ ಆಕಾಶಕ್ಕೆ ಹಿಂದಿರುಗಿದೆ. ೧೬ರಂದು ಸಂಜೆ ದಿಗಂತದ ಅಂಚಿನಲ್ಲಿ (ಪಶ್ಚಿಮದಲ್ಲಿ) ರೋಹಿಣಿಯೊಡನೆ ತಾನೂ ಕೆಂಪು ಚುಕ್ಕೆಯಾಗಿ ಕಾಣುವ ಇದು, ಕ್ರಮೇಣ ಮೇಲೇರುತ್ತದೆ. ೧೮ರಂದು ಬಾಲಚಂದ್ರನ ಪಕ್ಕವೇ ಕಾಣುತ್ತದೆ.

ಇನ್ನು ನಕ್ಷತ್ರಲೋಕದತ್ತ ಗಮನಹರಿಸೋಣ. ಆಕಾಶಗಂಗೆಯ ಒಂದು ಭಾಗ ಪಶ್ಚಿಮಕ್ಕೆ ಹಾದುಹೋಗಿದೆ. ಆ ಭಾಗದ ಮಹಾವ್ಯಾಧ, ಮಹಾಶ್ವಾನ ಈ ಪುಂಜಗಳ ಮೂಲಕ ಹಾದು ದಕ್ಷಿಣದ ಕರೀನಾ ಮೂಲಕ ಹಾಯುತ್ತದೆ. ಚಂದ್ರ ನಿಲ್ಲದ ಶುಭ್ರ ರಾತ್ರಿಗಳಲ್ಲಿ ಆಕಾಶಗಂಗೆಯ ಈ ಸೊಬಗನ್ನು ಆಹ್ಲಾದಿಸಬಹುದು. ನೆತ್ತಿಯ ಮೇಲೆ ಕಾಣುವ ಕಟಕರಾಶಿ ಕ್ಷೀಣವಾದುದು. ಅದರ ಆಚೀಚೆ ಇರುವ ಮಿಥುನ ಮತ್ತು ಸಿಂಹ ರಾಶಿಗಳಿಂದ ಮಾತ್ರ ಅದನ್ನು ಗುರುತಿಸ ಬಹುದು. ಶನಿ ಗ್ರಹದ ಸಹಾಯವನ್ನೂ ಪಡೆಯಬಹುದು.

ಉತ್ತರದಲ್ಲಿ ಸಪ್ತರ್ಷಿಮಂಡಲ ವನ್ನು ಗುರುತಿಸಿ. ಪೂರ್ವದಲ್ಲಿ ಕೆಂಪು ನಕ್ಷತ್ರ ಸ್ವಾತಿ, ನೀಲಿ ನಕ್ಷತ್ರ ಚಿತ್ರಾ, ಸ್ವಲ್ಪ ಪಕ್ಕಕ್ಕೆ ಅಂಗೈ ಆಕಾರದ ಹಸ್ತಾ ನಕ್ಷತ್ರ ಪುಂಜವಿದೆ. ದಕ್ಷಿಣದ ಶಿಲುಬೆ ಅತಿ ಆಕರ್ಷಕವಾದ ಪುಂಜ.

ಹ್ಯಾಲೀ ಧೂಮಕೇತುವಿನ ತುಣುಕುಗಳು ೫ರಂದು ಉಲ್ಕಾವೃಷ್ಟಿಯ ರೂಪದಲ್ಲಿ ಭೂಮಿಯ ಮೇಲೆ ಬೀಳುವುವು. ಬೆಳಗಿನ ಜಾವ ಗಂಟೆಗೆ ಹತ್ತಿಪ್ಪತ್ತು ಉಲ್ಕೆಗಳು ಕಾಣಬಹುದು.

### ಖಗೋಳ ದಿನಚರಿ

ಮೇ ೨ ಹುಣ್ಣಿಮೆ
೪ ಚಂದ್ರ-ಜ್ಯೇಷ್ಠಾ ಜೋಡಿ*
೫ ಚಂದ್ರ-ಗುರು ಜೋಡಿ* ಅಕ್ವಾರಿಡ್ ಉಲ್ಕಾವೃಷ್ಟಿ
೧೦ ಚಾಂದ್ರಮಾಸದ ಕಡೆಯ ಪಾದ. ಚಂದ್ರೋದಯ ನಡುರಾತ್ರಿಗೆ
೧೩ ಮಂಗಳ-ಚಂದ್ರ ಜೋಡಿ*
೧೫ ಚಂದ್ರ-ಭೂಮಿ ನಡುವಿನ ಅಂತರ ಕನಿಷ್ಠ
೧೬ ಅಮಾವಾಸ್ಯೆ; ಬುಧ-ರೋಹಿಣಿ ಜೋಡಿ
೧೮ ಬುಧ-ಚಂದ್ರ ಜೋಡಿ*
೨೦ ಶುಕ್ರ-ಚಂದ್ರ ಜೋಡಿ*
೨೨ ಶನಿ-ಚಂದ್ರ ಜೋಡಿ*
೨೩ ಮಘ-ಚಂದ್ರ ಜೋಡಿ* ಚಾಂದ್ರಮಾಸದ ಪ್ರಥಮ ಪಾದ
ಚಂದ್ರಾಸ್ತ ನಡುರಾತ್ರಿಗೆ. ಚಂದ್ರ-ಭೂಮಿ ನಡುವಿನ ಅಂತರ ಗರಿಷ್ಠ
೩೦ ಶುಕ್ರ-ಪುನರ್ವಸು ಜೋಡಿ*
ಜೂನ್ ೧ ಜ್ಯೇಷ್ಠಾ-ಚಂದ್ರ ಜೋಡಿ* ಹುಣ್ಣಿಮೆ
ಚಂದ್ರ-ಗುರು ಜೋಡಿ
೨ ಬುಧಗ್ರಹದ ಗರಿಷ್ಠ ಕೋನೋನ್ನತಿ*
೫ ಗುರು ತಟಸ್ಥ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ


೪ನೇ ತಾರೀಖು ರಾತ್ರಿ ೯ ಗಂಟೆಗೆ ಪೂರ್ವದಿಕ್ಕಿನ ನೋಟ : ಚಂದ್ರ, ಜ್ಯೇಷ್ಠಾ ಮತ್ತು ಗುರು

ಡಾ|| ಬಿ. ಎಸ್. ಶೈಲಜಾ, ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್, ಬೆಂಗಳೂರು -






## ಕನ್ನಡ ಭಾಷಾ ವ್ಯಾಸಂಗ

*ಡಾ॥ ಸಂಗಮೇಶ ಸವದತ್ತಿಮಠ*

**ಪುಟ : x+೨೨೪** **ಬೆಲೆ : ರೂ. ೧೧೦**

**ರೂಪರಶ್ಮಿ ಪ್ರಕಾಶನ,** ಧಾರವಾಡ - ೫೮೦ ೦೦೮

ವ್ಯಾಕರಣಾಂಶಗಳನ್ನು ಪಾರಂಪರಿಕ ಹಾಗೂ ಆಧುನಿಕ ಭಾಷಾ ವಿಜ್ಞಾನಗಳೆರಡರ ದೃಷ್ಟಿಯಿಂದ ಏಕಕಾಲದಲ್ಲಿ ಅಧ್ಯಯನ ಮಾಡಬಯಸುವ ವಿದ್ಯಾರ್ಥಿಗಳಿಗೆ, ಸ್ಪರ್ಧಾತ್ಮಕ ಪರೀಕ್ಷೆಗಳಿಗೆಂದು ತಯಾರಿ ನಡೆಸುವವರಿಗೆ ಹಾಗೂ ಶಿಕ್ಷಕರಿಗೆ ಉಪಯೋಗವಾಗುವ ಪುಸ್ತಕ. ಇದು ಈ ಪುಸ್ತಕದ ಪರಿಷ್ಕೃತ ಒಂಬತ್ತನೆಯ ಆವೃತ್ತಿ.

## ಲಿಂಗವ ಪೂಜಿಸಿ ಫಲವೇನಯ್ಯಾ ?



*ರಂಜಾನ್ ದರ್ಗಾ*

**ಪುಟ : ೮೪** **ಬೆಲೆ : ರೂ. ೨೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಮುಗ್ಧ ಹಳ್ಳಿಗರ, ಬಡವರ ಮೇಲೆ ದೇವರು, ಹರಕೆಯ ಹೆಸರಿನಲ್ಲಿ ನಡೆಯುವ ದೌರ್ಜನ್ಯ, ವಂಚನೆಗಳನ್ನು ಪ್ರಶ್ನಿಸುವ ಲೇಖನಗಳ ಸಂಗ್ರಹವಿದು. 'ಲಿಂಗವ ಪೂಜಿಸಿ ಫಲವೇನಯ್ಯಾ?', 'ಬಸವ ಬೆಳಕು' ಮುಂತಾದ ಐದು ಲೇಖನಗಳು ಇಲ್ಲಿವೆ.



## ನಡುವಯಸ್ಸಿನಲ್ಲಿ (ಕಾದಂಬರಿ)

*ಷೆನ್ ಝೋಂಗ್ ಅನು : ಡಾ॥ ವಿಜಯಾ ಸುಬ್ಬರಾಜ್*

**ಪುಟ : xii + ೯೨** **ಬೆಲೆ : ರೂ. ೮೦**

**ಸಿವಿಜಿ ಪಬ್ಲಿಕೇಷನ್ಸ್,** ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಚೀನಾ ದೇಶದ ಸಮಕಾಲೀನ ಲೇಖಕಿಯರಲ್ಲಿ ಪ್ರಮುಖಳಾದ ಷೆನ್ ೧೯೮೦ರಲ್ಲಿ ಚೀನೀ ಭಾಷೆಯಲ್ಲಿ ರಚಿಸಿದ ಕಾದಂಬರಿಯ ಅನುವಾದವಿದು. ಲೂ ವೆಂಟಿಂಗ್ ಎಂಬ ದೃಢನಿರ್ಧಾರದ ಪ್ರತಿಭಾವಂತ ನೇತ್ರತಜ್ಞೆ ಒಂದು ದಿನ ರೋಗಿಯ ಶಸ್ತ್ರಕ್ರಿಯೆ ಮುಗಿಸಿ ಆಪರೇಷನ್ ಕೋಣೆಯಲ್ಲಿಯೇ ಕುಸಿದುಬೀಳುತ್ತಾಳೆ. ಬದುಕಿನ ಜಂಜಾಟಗಳಿಂದ ಬಸವಳಿದು ಸಾವು ಬದುಕಿನ ನಡುವೆ ಹೋರಾಡುವ ಡಾ॥ ಲೂ, ಆಕೆಯ ಸಹೋದ್ಯೋಗಿ, ಆಪ್ತ ಸ್ನೇಹಿತೆ ಚಿಯಾಂಗ್ ಯಾಫೆನ್ – ಇವರಿಬ್ಬರ ಓದು, ಉದ್ಯೋಗ, ಸಂಸಾರಗಳ ಸುತ್ತ ಹೆಣೆದುಕೊಂಡ ಕಥೆಯಿದು. ಆ ಕಾಲದ ಚೀನಾ ದೇಶದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು, ಜನರ ಬೇಗುದಿ, ವೈದ್ಯರ ನಿಸ್ವಾರ್ಥ ಸೇವೆ, ಇದಲ್ಲದೆ ಸಂಸಾರದ ಕಷ್ಟ ಸುಖಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. ಆಯ್ದುಕೊಂಡ ವೃತ್ತಿಯ ಬಗೆಗಿನ ಪ್ರೀತಿ, ಹಣಕಾಸಿನ ಅನಿವಾರ್ಯತೆಯಿಂದ ತಮ್ಮ ಆರೋಗ್ಯ, ಸಂಸಾರದ ಬೇಡಿಕೆಗಳನ್ನು ಬದಿಗೊತ್ತಿ ಅವಿರತವಾಗಿ ದುಡಿಯುವ ಮಧ್ಯಮ ವರ್ಗ, ಅರ್ಧ ಆಯುಷ್ಯ ತೀರುವುದರೊಳಗಾಗಿ ಸೋತು ಸುಣ್ಣವಾಗುವ ನಡುವಯಸ್ಸಿನವರ ಬದುಕಿನ ಈ ಕಥೆ ಇಂದಿಗೂ ಪ್ರಸಕ್ತ. ಬಾಳಿನ ಸ್ಪರ್ಧೆಯಲ್ಲಿ ಓಡುತ್ತಿರುವ ನಮ್ಮನ್ನು ಒಂದು ಕ್ಷಣ ಹಿಡಿದು ನಿಲ್ಲಿಸಿ ಚಿಂತನೆಗೆ ಒಡ್ಡುವ ಶಕ್ತಿ ಈ ಕಾದಂಬರಿಗಿದೆ. ಹಲವು ಕಡೆ ಆವರಣ ಚಿಹ್ನೆಗಳು ಬಿಟ್ಟುಹೋಗಿವೆ. ಆತುರದಲ್ಲಿ ಅಚ್ಚು ಮಾಡಿಸಿದಂತಿದೆ. ಅನುವಾದಕರು ಇನ್ನೆರಡು ಬಾರಿ ಓದಿ ಪರಿಷ್ಕರಿಸಿದ್ದಿದ್ದರೆ ಪುಸ್ತಕ ಇನ್ನೂ ಚೆನ್ನಾಗಿ ಮೂಡಿಬರಬಹುದಿತ್ತು.

## ಸಮಾಲೋಚನ (ವಿಮರ್ಶಾ ಸಂಕಲನ)



*ಡಾ॥ ವಿಜಯಾ ಸುಬ್ಬರಾಜ್*

**ಪುಟ : ೧೯೬** ಬೆಲೆ : ರೂ. ೧೬೦

**ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,** ೨೭೭, ೫ನೇ ಕ್ರಾಸ್, ವಿಧಾನಸೌಧ ಎಕ್ಸ್‌ಟೆನ್ಷನ್, ಕವಿಧಾಮನಗರ, ಬೆಂ-೫೮

ನಾಟಕಗಳು, ವಚನಕಾರರು, ಮಹಿಳಾ ಸಾಹಿತಿಗಳು, ಕಾದಂಬರಿಕಾರರು. ಜನಪದ ಸಾಹಿತ್ಯ ಹೀಗೆ ಬಹುಮುಖಿ ಸಾಹಿತ್ಯ ಪ್ರಕಾರಗಳನ್ನು ಒಳಗೊಂಡ ಕೃತಿಗಳ ಇಪ್ಪತ್ತು ವಿಮರ್ಶಾ ಲೇಖನಗಳ ಸಂಗ್ರಹವಿದು.



## ಸಿಂಗಾರಿತ್ಲು (ನಾಟಕ)

*ಕರಿಸ್ವಾಮಿ ಕೆ.*

**ಪುಟ : ೮೪** **ಬೆಲೆ : ರೂ. ೪೦**

**ಸುಮುಖ ಪ್ರಕಾಶನ,** ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಬೆಂ-೨೩

'ಸಿಂಗಾರಿತ್ಲು' ಎಂಬುದು ಎಂದೋ ಹಿಂದಿತ್ತೆನ್ನಲಾದ ಅರಮನೆ ಪಾಳು ಬಿದ್ದು, ಗುರುತೂ ಇಲ್ಲದಂತೆ ಅಳಿದು ಮರೆಯಿರುವ ಜಾಗವಾಗಿ, ಸವರ್ಣೀಯ ಹೆಂಗಸರಿಗೆ ಶೌಚದ ಸ್ಥಳ. ಈ ಜಾಗಕ್ಕಾಗಿ ಊರ ರಾಜಕೀಯ ಹಾಗೂ ಮತೀಯ ವ್ಯಕ್ತಿಗಳ ನಡುವೆ ಪೈಪೋಟಿ ನಡೆದು ಊರಿಗೇ ಬಗೆಹರಿಯದ ಸಮಸ್ಯೆಯಾಗುತ್ತದೆ. ಈ ಸ್ಥಳವನ್ನು ದಲಿತರಿಗೆ ಮನೆ ಕಟ್ಟಿಕೊಳ್ಳಲು ನಿವೇಶನವಾಗಿ ಹಂಚಬೇಕೆನ್ನುವುದು ಊರ ಪಂಚಾಯ್ತಿ ಅಧ್ಯಕ್ಷನ ತೀರ್ಮಾನ. ಮತೀಯವಾದಿಗಳದೋ ಅಲ್ಲಿ ದೇವಸ್ಥಾನ ಕಟ್ಟಿಸಬೇಕೆಂಬ ಛಲ. ಆ ಭಾಗದ ಶಾಸಕನಿಗೆ ''ಈ ಜಾಗದಲ್ಲಿ ಕೈಗಾರಿಕೆ, ಆಸ್ಪತ್ರೆಯನ್ನು ನಿರ್ಮಿಸಿ ಜನತೆಗೆ ಉದ್ಯೋಗ ಕಲ್ಪಿಸುವೆ'' ಎಂದು ಭಾಷಣ ಬಿಗಿಯಲೊಂದು ವಸ್ತು. 'ಸಿಂಗಾರಿತ್ಲು' ಊರ ನೆಮ್ಮದಿಯನ್ನು ಹಾಳುಗೆಡವುವ, ಪರಿಹಾರವಿಲ್ಲದ ದುರಂತದ ರೂಪಕವಾಗಿ ಪ್ರತಿಧ್ವನಿಸುತ್ತದೆ. ಹಳ್ಳಿಗಾಡಿನ ದಟ್ಟ ಚಿತ್ರಗಳನ್ನಿಲ್ಲಿ ಕಾಣಬಹುದು. ತಿಪಟೂರು, ಚಿಕ್ಕನಾಯಕನಹಳ್ಳಿ, ಗುಬ್ಬಿ, ಸಿರಾ, ಪಾವಗಡ, ಮಧುಗಿರಿ ತಾಲ್ಲೂಕುಗಳಲ್ಲಿ 'ಹಿಂದುಳಿದ ವರ್ಗಗಳ' ಕನ್ನಡದ ಆಡುಮಾತು ಸಂಭಾಷಣೆಯಲ್ಲಿ ಸಮರ್ಥವಾಗಿ ಬಳಕೆಯಾಗಿದೆ.



## ಮೇಘನಾ ಪೇಠೆ ಕಥೆಗಳು

*ಮೇಘನಾ ಪೇಠೆ ಅನು : ಚಂದ್ರಕಾಂತ ಪೋಕಳೆ*

**ಪುಟ : ೧೬೮** **ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೧

ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ಆರು ಕಥೆಗಳು ಇಲ್ಲಿವೆ. ಮನಸ್ಸಿನ ಒಂಟಿತನಕ್ಕೆ ಸಂಬಂಧಿಸಿದ ಕಥೆಗಳು. ಎಲ್ಲ ಬಗೆಯ ಸ್ವಾತಂತ್ರ್ಯ, ಮುಕ್ತಿ, ಸುಖ ಸೌಲಭ್ಯ ಸಿಕ್ಕಿಯೂ ಆಧುನಿಕ ಮಹಿಳೆ ಸುಖಿಯಾಗಿದ್ದಾಳೆಯೆ? ಮಾನಸಿಕ ನೆಮ್ಮದಿಯನ್ನು ಪಡೆದಿದ್ದಾಳೆಯೆ? ಮೇಘನಾ ಈ ಕಥೆಗಳಲ್ಲಿ ಉತ್ತರ ಅರಸುತ್ತಾರೆ. ಅಂತರಾಳದ ಅದಮ್ಯ ಬಯಕೆಗಳು, ಸ್ತ್ರೀ-ಪುರುಷರ ಶಾರೀರಿಕ ಸಂಬಂಧಗಳ ವಾಸ್ತವತೆ, ಸಮಾಜದ ತಡೆಗೋಡೆಗಳು, ವ್ಯಕ್ತವಾಗದ, ಅದುಮಿಟ್ಟ ತುಡಿತಗಳು ಇಲ್ಲಿ ಬೆಳಕು ಕಂಡಿವೆ. ಮೂಲ ಲೇಖಕಿಯ ದಿಟ್ಟ ನಿಲುವು ಅನುವಾದದಲ್ಲಿಯೂ ಪ್ರಬುದ್ಧವಾಗಿ ಮೂಡಿದೆ.

## ಪಿಂಜರ್ (ಕಾದಂಬರಿ)



*ಅಮೃತಾ ಪ್ರೀತಮ್ ಕನ್ನಡಕ್ಕೆ : ಎಲ್. ಸಿ. ಸುಮಿತ್ರಾ*

**ಪುಟ : ೧೦೪** **ಬೆಲೆ : ರೂ. ೫೦**

**ಅಂಕಿತ ಪುಸ್ತಕ,** ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

ದೇಶ ವಿಭಜನೆಯಾದಾಗ ಸಂತ್ರಸ್ತರಾದ ಜನರ ಪರದೇಶಿ ಪರಿಸ್ಥಿತಿಯನ್ನು ಚಿತ್ರಿಸುವ ಕಾದಂಬರಿ. ಕಾದಂಬರಿ ಎನಿಸದು, ಒಂದು ನೀಳ್ಗತೆಯಂತಿದೆ. ಬಾಲ್ಯವಿವಾಹ, ಹಿಂದೂ ಮುಸ್ಲಿಮ್ ಜಾತಿವೈಷಮ್ಯಗಳು, ಸ್ವಂತ ನಿರ್ಧಾರಗಳಿಗೆ ಎಳ್ಳಷ್ಟೂ ಅವಕಾಶ ಇಲ್ಲದ ಹೆಣ್ಣುಮಕ್ಕಳ ಕರುಣಾಜನಕ ಸ್ಥಿತಿ, ನಿರ್ದಯಿ ಕೊಲೆಗಡುಕರಿಂದ ತತ್ತರಿಸುವ ಪಂಜಾಬ್, ಪಾಕಿಸ್ತಾನ ಗಡಿಪ್ರದೇಶಗಳ ಚಿತ್ರಣ ಮೈನಡುಗಿಸುತ್ತೆ. ಹಿಂದೂ ತಾಯಿ, ತಂದೆಯರಿಗೆ ಜನಿಸಿದ ಪೂರೋ ಮುಸ್ಲಿಮ್ ಯುವಕನಿಂದ ಅಪಹರಣಗೊಂಡು ಹಮೀದಾಳಾಗುತ್ತಾಳೆ. ತನ್ನೆಲ್ಲ ದುಃಖ ಆಘಾತಗಳನ್ನೂ ನುಂಗಿಕೊಂಡು ಅನ್ಯರ ಸಂಕಟಕ್ಕೆ ತುಡಿಯುವ ಹಮೀದ, ಅವಳಂತೆ ಹಲವು ಹೆಣ್ಣುಮಕ್ಕಳ ಹೋರಾಟದ ಕಥೆ ಪಿಂಜರ್. ಕ್ರೌರ್ಯ, ಜಾತಿವೈಷಮ್ಯ ದಿನದಿನವೂ ಹೆಚ್ಚುತ್ತಿರುವ ಸಂದರ್ಭದಲ್ಲಿ ಹಮೀದಾಳ ಬದುಕು ಧೀಮಂತವಾದುದು. ಅಮೃತಾರ ಬರಹದ ಆಳ, ವೈಶಾಲ್ಯವನ್ನು ಸಮರ್ಥವಾಗಿ ಬಿಂಬಿಸುವುದರಲ್ಲಿ ಅನುವಾದ ಸಫಲವಾಗಿದೆ.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

ಇತ್ತೀಚೆಗೆ ವಿಶೇಷವಾಗಿ ಸುದ್ದಿಯಲ್ಲಿರುವ ವಿಷಯವೆಂದರೆ ವಿಶೇಷ ಆರ್ಥಿಕ ವಲಯಗಳು ದೇಶದ ವಿವಿಧ ಭಾಗಗಳಲ್ಲಿ ಸ್ಥಾಪಿಸಲ್ಪಡುತ್ತಿರುವುದು ಮತ್ತು ಜನತೆ ಇದರ ಬಗ್ಗೆ ತಮ್ಮ ವಿರೋಧವನ್ನು ಪ್ರದರ್ಶಿಸುತ್ತಿರುವುದು. ದೇಶದ ಜನತೆ ಇದರ ಬಗ್ಗೆ ತಮ್ಮ ಆತಂಕ ಮತ್ತು ವಿರೋಧವನ್ನು ವ್ಯಕ್ತಪಡಿಸುತ್ತಿದ್ದಂತೆ ಇದು ಪಶ್ಚಿಮ ಬಂಗಾಳದ ನಂದೀಗ್ರಾಮದಲ್ಲಿ ಆಸ್ಫೋಟಗೊಂಡದ್ದು ಒಂದು ವಿಪರ್ಯಾಸ. ರೈತರ ಭೂ ಹಕ್ಕಿಗಾಗಿ, ಕೃಷಿ ಕಾರ್ಮಿಕರ ಕೂಲಿಗಾಗಿ ಅನೇಕ ಧೀರೋದಾತ್ತ ಹೋರಾಟಗಳನ್ನು ಮಾಡಿದಂತಹ ಎಡಪಕ್ಷಗಳು ಪಶ್ಚಿಮ ಬಂಗಾಳದಲ್ಲಿ ರೈತರ ಆಕ್ರೋಶಕ್ಕೆ ತುತ್ತಾದದ್ದು ಒಂದು ಗಂಭೀರ ಬೆಳವಣಿಗೆಯಾಗಿದೆ. ಇದಕ್ಕೆ ರಾಜಕೀಯ ಲೇಪನ ಹಚ್ಚಿ ವಿಷಯದಿಂದ ದೂರ ಸರಿಯುವುದು, ಸರಳೀಕರಿಸುವುದು ಅಥವಾ ಉತ್ಪ್ರೇಕ್ಷಿಸುವುದು ಅನಗತ್ಯ. ಪಶ್ಚಿಮ ಬಂಗಾಳದ ಸಿಂಗೂರು, ನಂದೀಗ್ರಾಮ ವಿಶೇಷ ಆರ್ಥಿಕ ವಲಯದ ಬಗ್ಗೆ ಒಂದು ವಸ್ತುನಿಷ್ಠ ಚರ್ಚೆಗೆ ಅವಕಾಶವಾಗಿ ಈ ಚರ್ಚೆಯ ಮಂಥನದಿಂದ ಹೊರಹೊಮ್ಮುವ ರಾಜಕೀಯ ಪರಿಕಲ್ಪನೆಗಳು ಮತ್ತು ಕಾರ್ಯಕ್ರಮಗಳು ಮುಂದಿನ ರೈತ ಹೋರಾಟಗಳಿಗೆ ಹೊಸ ದಾರಿದೀಪವಾದಲ್ಲಿ ಎಡಪಕ್ಷಗಳು ಹೆಚ್ಚು ಗಟ್ಟಿಯಾಗುವುದರಲ್ಲಿ ಸಂಶಯವಿಲ್ಲ. ಈ ದಿಕ್ಕಿನಲ್ಲಿ ಸಾಗುವ ಪ್ರಯತ್ನ ಈ ಲೇಖನದ್ದು.

# ವಿಶೇಷ ಆರ್ಥಿಕ ವಲಯ ವಿಶೇಷ ಸುಲಿಗೆಯ ವಲಯ

**ಹಿನ್ನೆಲೆ**

ಬಂಡವಾಳಶಾಹಿ ವ್ಯವಸ್ಥೆಯ ಪ್ರಮುಖ ವರ್ಗ ಗುಣವೆಂದರೆ ಶ್ರೀಮಂತರ ಅಭಿವೃದ್ಧಿಗಾಗಿ ಸಮಾಜದ ಉಳಿದ ಜನತೆಯ ಶೋಷಣೆ. ಹಾಗೆಯೇ ಶ್ರೀಮಂತ ರಾಷ್ಟ್ರಗಳ ಸಿರಿವಂತಿಕೆಯ ಹೆಚ್ಚಳಕ್ಕಾಗಿ ಅಭಿವೃದ್ಧಿಶೀಲ ಮತ್ತು ಬಡ ರಾಷ್ಟ್ರಗಳ ಸುಲಿಗೆ. ಶ್ರೀಮಂತ ರಾಷ್ಟ್ರಗಳಿಗೆ ಮತ್ತು ಶ್ರೀಮಂತ ವರ್ಗಕ್ಕೆ ಸುಲಿಗೆಯ ಅವಕಾಶ ದೊರೆತಾಗ ರಾಷ್ಟ್ರೀಯ ಗಡಿಗಳು ಮಾಯವಾಗುತ್ತವೆ. ತಮ್ಮ ಅವ್ಯಾಹತ ಸುಲಿಗೆಗೆ ಪೂರಕವಾದ ಕಾರ್ಯತಂತ್ರವೆಂದರೆ ಹೊಸ ಹೊಸ ಮಾರುಕಟ್ಟೆಗಳನ್ನು ಅನ್ವೇಷಿಸುವುದು, ಆ ಮಾರುಕಟ್ಟೆಗಳ ಮೇಲೆ ಅನಿರ್ಬಂಧಿತ ಸ್ವಾಮ್ಯ ಪಡೆಯುವುದು ಮತ್ತು ಹೊಸ ಹೊಸ ಸುಲಿಗೆಯ ವಿಧಾನಗಳನ್ನು ಹುಟ್ಟುಹಾಕುವುದು.

ಏಷ್ಯಾ ಖಂಡದಲ್ಲಿ ಒಂದು ರೀತಿಯ ವಿಶೇಷ ಆರ್ಥಿಕ ವಲಯಗಳನ್ನು ಹುಟ್ಟುಹಾಕಿದ ಪ್ರಥಮ ಸ್ಥಾನ ಭಾರತಕ್ಕೆ ದೊರೆಯುತ್ತದೆ. ೧೯೬೫ರಲ್ಲಿಯೇ ಮಹಾರಾಷ್ಟ್ರದ ಕಂಡ್ಲಾದಲ್ಲಿ ಮುಕ್ತ ವ್ಯಾಪಾರ ವಲಯವನ್ನು ಸ್ಥಾಪಿಸಲಾಗಿತ್ತು. ನಂತರ ಮುಂಬಯಿಯಲ್ಲಿ ಸೃಷ್ಟಿಸಲಾದ ವಿಶೇಷ ರಫ್ತುವಲಯ ಆಧುನಿಕ ಆಭರಣ ಉದ್ದಿಮೆಗೆ ಚಾಲನೆ ನೀಡಿತು. ೧೯೮೦ರ ದಶಕದಲ್ಲಿ ದೇಶದ ಅನೇಕ ಭಾಗಗಳಲ್ಲಿ ಸರ್ಕಾರದ ನೇತೃತ್ವದಲ್ಲಿ ವಿಶೇಷ ಆರ್ಥಿಕ ವಲಯಗಳು ಸ್ಥಾಪಿತಗೊಂಡವು. ವಿದೇಶಿ ವಿನಿಮಯವನ್ನು ಹೆಚ್ಚಿಸುವುದು, ರಫ್ತನ್ನು ಹೆಚ್ಚಿಸುವುದು, ವಿಶೇಷ ರಫ್ತು ವಲಯಗಳ ಗುರಿಯೆಂದು ಸರ್ಕಾರ ಘೋಷಿಸಿದ್ದರೂ, ಭಾರತದ ಒಟ್ಟು ರಫ್ತಿಗೆ ಈ ವಲಯಗಳ ಕೊಡುಗೆಯೆಂದರೆ ೨೦೦೪-೦೫ರ ಅವಧಿಯಲ್ಲಿ ಕೇವಲ ಶೇಕಡ ೪.೯ ಮಾತ್ರವಾಗಿತ್ತು. ಆದರೆ ಉದ್ಯೋಗಪತಿಗಳು ಈ ವಲಯದ ಎಲ್ಲ ರಿಯಾಯಿತಿಗಳನ್ನು ಮತ್ತು ಪ್ರಯೋಜನಗಳನ್ನು ತಮ್ಮ ಲಾಭದ ಅಭಿವೃದ್ಧಿಗೆ ಬಳಸಿಕೊಂಡರು.

**ಜಾಗತೀಕರಣ – ಜಾಗತಿಕ ಸುಲಿಗೆ**

ಚೀನಾದೇಶ ಸಮಾಜವಾದಿ ಕ್ರಾಂತಿಯನ್ನು ಕಂಡಂತಹ ರಾಷ್ಟ್ರ. ಇಲ್ಲಿಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆ ಭಾರತದಲ್ಲಿರುವ ವ್ಯವಸ್ಥೆಗಿಂತ ಭಿನ್ನ ಎಂಬುದನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯಿಲ್ಲ. ಹೀಗಾಗಿ ಚೀನಾದೊಂದಿಗೆ ಯಾವ ಹೋಲಿಕೆಯೂ ಸುಲಭವಲ್ಲ, ಅನುಕರಣೆ ಸಾಧುವಲ್ಲ. ಚೀನಾದೇಶ ತನ್ನ ಕಡಲತೀರದ ಪ್ರದೇಶಗಳ ಏಳಿಗೆಗಾಗಿ, ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಿ, ಈ ಪ್ರದೇಶಗಳನ್ನು ಅಭಿವೃದ್ಧಿಗೊಳಿಸಿದ್ದು ಶ್ಲಾಘನೀಯವಾದರೂ, ಆ ಪ್ರಯತ್ನದ ಹಿಂದೆ ಇದ್ದಂತಹ ರಾಜಕೀಯ ಹತೋಟಿಯನ್ನು ಗಮನದಲ್ಲಿ ಇಡದೆ, ಈ ಮಾದರಿಯ ಅಂಧಾನುಕರಣೆ ವಿಭಿನ್ನ ರಾಜಕೀಯ ವ್ಯವಸ್ಥೆ ಹೊಂದಿರುವ ಭಾರತದಂತಹ ದೇಶಗಳನ್ನು ದಾರಿ ತಪ್ಪಿಸುತ್ತದೆ. ೧೯೮೦ರಲ್ಲಿ ಚೀನಾ ಹದಿನಾಲ್ಕು ಕರಾವಳಿ ಪಟ್ಟಣಗಳಲ್ಲಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಿ, ಅಲ್ಲಿ ಬಂಡವಾಳ ಹೂಡಿದವರಿಗೆ ಅನೇಕ ರಿಯಾಯಿತಿಗಳನ್ನು ಕೊಟ್ಟಿತು. ಇದರಿಂದಾಗಿ ವಿದೇಶಿ ಬಂಡವಾಳವನ್ನು ಆಕರ್ಷಿಸಿತು. ಅನೇಕ ಉದ್ದಿಮೆಗಳು, ವಿಶೇಷವಾಗಿ ವಾಹನ ಮತ್ತು ವಾಹನ ಬಿಡಿಭಾಗಗಳ ಉದ್ದಿಮೆ, ಕಂಪ್ಯೂಟರ್ ಉದ್ದಿಮೆ, ಔಷಧಿ ಉದ್ದಿಮೆಗಳು ಸ್ಥಾಪಿತಗೊಂಡವು. ಕಡಲತೀರ ಪ್ರದೇಶಗಳು ತೀವ್ರ ಅಭಿವೃದ್ಧಿ ಹೊಂದಿದ ಪರಿಣಾಮವಾಗಿ ಚೀನಾ ಒಳನಾಡು ಪ್ರದೇಶಗಳು ಅಭಿವೃದ್ಧಿಯಲ್ಲಿ ಹಿಂದೆಬಿದ್ದವು. ಈ ಹಿನ್ನೆಲೆಯಲ್ಲಿ ಹೊಸ ಅಸಮಾನ ಅಭಿವೃದ್ಧಿಗೆ ಕಾರಣವಾಯಿತು. ಈ ಬಗ್ಗೆ ಚೀನಾ ಸರ್ಕಾರ ತೀವ್ರ ಆತಂಕಕ್ಕೊಳಗಾಗಿ ಈ ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸಲು ಯೋಚಿಸುತ್ತಿದೆ ಎಂಬುದು ತಿಳಿದು ಬಂದಿರುವ ವಿಷಯ.

**ಮುರಳೀಧರ್**

ಅಂದರೆ ಚೀನಾದೇಶದ ವಿಶೇಷ ಆರ್ಥಿಕ ವಲಯಗಳ ವಿಶ್ಲೇಷಣೆ ಅಲ್ಲಿಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಮಾಡಬೇಕೇ ಹೊರತು, ಅದನ್ನು ಹೊರತುಪಡಿಸಿ ಮಾಡುವುದು ಅಸಮಂಜಸ. ಜಾಗತೀಕರಣದ ಹಿನ್ನೆಲೆಯಲ್ಲಿ ನೋಡಿದಾಗ ೧೯೮೦ರಲ್ಲಿ ೪೭ ರಾಷ್ಟ್ರಗಳಲ್ಲಿ ೧೭೬ ವಿಶೇಷ ಆರ್ಥಿಕ ವಲಯಗಳಿದ್ದು, ೨೦೦೩ರ ಹೊತ್ತಿಗೆ ೧೧೬ ರಾಷ್ಟ್ರಗಳಲ್ಲಿ ಇವುಗಳ ಸಂಖ್ಯೆ ೩೦೦೦ಕ್ಕೇರಿರುವುದು ಜಾಗತಿಕ ಸುಲಿಗೆಯ ಸ್ವರೂಪಕ್ಕೆ ಹಿಡಿದ ಕನ್ನಡಿಯಾಗಿದೆ. ಆದರೆ ಮಾಧ್ಯಮಗಳು ಈ ವಿಶೇಷ ಆರ್ಥಿಕ ವಲಯಗಳನ್ನು ಪ್ರಗತಿಶೀಲ ಬೆಳವಣಿಗೆಯೆಂದು ಬಣ್ಣಿಸುತ್ತಿವೆ. ಬಂಡವಾಳಶಾಹಿ ವರ್ಗ ಆಯಾ ಘಟ್ಟದ ಪರಿಸ್ಥಿತಿಯನ್ನು ತನಗೆ ಅನುಕೂಲಕರವಾಗಿ ಚಿತ್ರಿಸುತ್ತದೆ. ಬಂಡವಾಳಶಾಹಿ ವರ್ಗದ್ದು ಮೊದಲು 'ಕೈಗಾರಿಕೀಕರಣ ಇಲ್ಲವೇ ವಿನಾಶ' ಎಂಬ ಘೋಷಣೆ ಇತ್ತು. ಅನಂತರ 'ಆಧುನಿಕೀಕರಣ ಇಲ್ಲವೇ ವಿನಾಶ' ಎಂದು ಸಾರಿತು. ಈಗ 'ಜಾಗತೀಕರಣ ಇಲ್ಲವೇ ವಿನಾಶ' ಎಂದು ಕೂಗುತ್ತಿದೆ. ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಅವರು ಇದಕ್ಕೆ ಪರ್ಯಾಯವಾಗಿ 'ಜಾಗತೀಕರಣ ಮತ್ತು ವಿನಾಶ' ಎಂಬ ದನಿ ಎತ್ತಿದ್ದಾರೆ.

**ವಿಶೇಷ ಸುಲಿಗೆಗಾಗಿ ವಿಶೇಷ ಕಾನೂನು**

ಎನ್.ಡಿ.ಎ. ಸರ್ಕಾರದಲ್ಲಿ ವಾಣಿಜ್ಯ ಮಂತ್ರಿಯಾಗಿದ್ದ ಮುರಸೋಲಿ ಮಾರನ್ (ಯಾವ ಸರ್ಕಾರ ಬಂದರೂ ಅವರು ಮಂತ್ರಿಯೇ!) ೧೯೯೯-೨೦೦೦ದಲ್ಲಿ ಚೀನಾ ದೇಶಕ್ಕೆ ಭೇಟಿನೀಡಿದ ಸಂದರ್ಭದಲ್ಲಿ ಅಲ್ಲಿನ ವಿಶೇಷ ಆರ್ಥಿಕ ವಲಯಗಳ ಯಶಸ್ಸಿನಿಂದ ಪ್ರಭಾವಿತರಾಗಿ

ಭಾರತದಲ್ಲೂ ಈ ರೀತಿಯ ವಲಯಗಳನ್ನು ಸ್ಥಾಪಿಸಬೇಕೆಂದು ಏಪ್ರಿಲ್ ೨೦೦೨ರಲ್ಲಿ ವಾಣಿಜ್ಯ ಮಂತ್ರಾಲಯದ ಮೂಲಕ ಪ್ರಸ್ತಾಪವೆತ್ತಿದ್ದರು. ಇದಕ್ಕೂ ಮುಂಚೆ ೧೯೯೭-೨೦೦೨ರ ಆಯಾತ-ನಿರ್ಯಾತ, ಅಂದರೆ ವಿದೇಶಿ ವ್ಯಾಪಾರ ನೀತಿಯಡಿಯಲ್ಲಿ ವಿಶೇಷ ಆರ್ಥಿಕ ವಲಯಗಳ ಬಗ್ಗೆ ಮಾರ್ಗಸೂಚಿಗಳನ್ನು ಅಳವಡಿಸಲಾಗಿತ್ತು. ಇದರ ಪ್ರಮುಖ ಗುರಿಯೆಂದರೆ ವಿದೇಶಿ ಹಾಗೂ ದೇಶೀಯ ಉದ್ದಿಮೆಗಳು ರಫ್ತಿಗಾಗಿ ಸರಕನ್ನು ಉತ್ಪಾದಿಸುವುದನ್ನು ಉತ್ತೇಜಿಸುವ ಸಲುವಾಗಿ ಈ ವಲಯಗಳಲ್ಲಿ ಬಂಡವಾಳ ತೊಡಗಿಸುವ ಉದ್ದಿಮೆದಾರರಿಗೆ ಆದಾಯ ತೆರಿಗೆ, ಮಾರಾಟ ತೆರಿಗೆ, ಅಬ್ಕಾರಿ ಹಾಗೂ ಕಸ್ಟಂ ಸುಂಕ ವಿನಾಯಿತಿ ಕೊಡುವುದು ಮತ್ತು ಎಲ್ಲ ಸವಲತ್ತುಗಳನ್ನು ಕಲ್ಪಿಸಿಕೊಡುವುದು. ಈ ವಲಯಗಳಲ್ಲಿ ಉತ್ಪಾದಿಸುವುದೆಲ್ಲವೂ ರಫ್ತಾಗಬೇಕು, ವಿದೇಶಿ ವ್ಯಾಪಾರ ಹೆಚ್ಚಾಗಬೇಕು, ವಿದೇಶಿ ವಿನಿಮಯ ಹೆಚ್ಚಬೇಕು ಎಂಬ ಉದ್ದೇಶದಿಂದ ಹಲವಾರು ಉತ್ತೇಜಕ ಯೋಜನೆಗಳನ್ನು ಸರ್ಕಾರ ಜಾರಿಗೊಳಿಸಿತು. ಜಾಗತೀಕರಣವು ಶ್ರೀಮಂತರಿಂದ, ಶ್ರೀಮಂತರ ಮತ್ತು ಶ್ರೀಮಂತರಿಗೋಸ್ಕರ ಸೃಷ್ಟಿಯಾದ ಆರ್ಥಿಕ ನೀತಿ ಎಂಬುದನ್ನು ವಿಶೇಷ ಆರ್ಥಿಕ ವಲಯಗಳು ಮತ್ತೊಮ್ಮೆ ಸಾಬೀತುಪಡಿಸಿವೆ.

ಮೇ ೨೦೦೪ರಲ್ಲಿ ನಡೆದ ರಾಷ್ಟ್ರೀಯ ಚುನಾವಣೆಯ ನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಸರ್ಕಾರ ವಿಶೇಷ ವಲಯಗಳ ಬಗ್ಗೆ ಆವರೆಗಿನ ನೀತಿಗಳನ್ನು ಪರಾಮರ್ಶಿಸಿ, ಅವುಗಳು ವಿದೇಶಿ ಬಂಡವಾಳವನ್ನು ಆಕರ್ಷಿಸಲು ವಿಫಲವಾಗಿವೆ ಎಂಬ ಅಭಿಪ್ರಾಯಕ್ಕೆ ಬಂದು, ವಿದೇಶಿ ಕಂಪನಿಗಳಿಗೆ ಈ ದೇಶದಲ್ಲಿ ಬಂಡವಾಳವನ್ನು ಹೂಡಲು ಮತ್ತು ವಿಶೇಷ ಆರ್ಥಿಕ ವಲಯಗಳಲ್ಲಿ ಹೆಚ್ಚಿನ ಭರವಸೆ ಹುಟ್ಟಿಸಲು ಪ್ರತ್ಯೇಕವಾದ ವಿಶೇಷ ಕಾನೂನಿನ ಅಗತ್ಯವಿದೆಯೆಂಬ ತೀರ್ಮಾನಕ್ಕೆ ಬಂದಿತು. ಇದರ ಪರಿಣಾಮವಾಗಿ ೧೦ ಮೇ ೨೦೦೫ರಂದು ಲೋಕಸಭೆಯ ಮುಂದೆ ವಿಶೇಷ ಆರ್ಥಿಕ ವಲಯದ ಮಸೂದೆಯನ್ನು ಚರ್ಚೆಗೆ ಮತ್ತು ಅನುಮೋದನೆಗಾಗಿ ಮುಂದಿಟ್ಟಿತು. ವ್ಯಾಪಕ ಚರ್ಚೆಗೆ ಒಳಗಾಗಬೇಕಾಗಿದ್ದ ಈ ಮಸೂದೆ ಹೆಚ್ಚಿನ ಚರ್ಚೆಗೆ ಈಡಾಗದೆ ೧೨ ಮೇ ೨೦೦೫ರಂದು ಪಾರ್ಲಿಮೆಂಟಿನ ಅನುಮೋದನೆ ಪಡೆದು ನಂತರ ರಾಷ್ಟ್ರಪತಿಯವರ ಸಮ್ಮತಿ ಪಡೆದು ಒಂದು ವಿಶೇಷ ಕಾಯ್ದೆಯಾಗಿ ಪರಿವರ್ತಿತವಾಯಿತು. ಫೆಬ್ರವರಿ ೨೦೦೬ರಲ್ಲಿ ಈ ಕಾಯ್ದೆಗೆ ಪೂರಕವಾದ ನಿಯಮಾವಳಿ ಜಾರಿಗೊಂಡು ಈಗ ಇದು ರಾಷ್ಟ್ರಾದ್ಯಂತ ಅನ್ವಯವಾಗುವ ಕಾಯ್ದೆಯಾಗಿ ರೂಪುಗೊಂಡಿದೆ. ಇಲ್ಲಿಯವರೆಗೆ ಸುಗಮವಾಗಿ ನಡೆದುಬಂದ ಈ ಕಾಯ್ದೆ ಜಾರಿಗೊಳ್ಳುವ ಹಂತದಲ್ಲಿ ರೈತರ ವಿರೋಧವನ್ನು ಮತ್ತು ಜನತೆಯ ಆಕ್ರೋಶವನ್ನು ಎದುರಿಸುತ್ತಿರುವುದು ಪಾರ್ಲಿಮೆಂಟಿನಲ್ಲಿ ಈ ಕಾಯ್ದೆಯ ಬಗ್ಗೆ ಸೂಕ್ತ ಚರ್ಚೆಯಾಗದಿದ್ದಕ್ಕೆ ಸಾಕ್ಷಿಯಾಗಿದೆ. ವಿಶೇಷ ಆರ್ಥಿಕ ವಲಯದ ಬಗ್ಗೆ ಪುನರ್‌ವಿಮರ್ಶೆ ಅಗತ್ಯವಿದೆ ಎಂದು ಕಾಂಗ್ರೆಸ್ ಪಕ್ಷವೂ ಸೇರಿದಂತೆ ಎಲ್ಲ ರಾಜಕೀಯ ಪಕ್ಷಗಳೂ ಅಭಿಪ್ರಾಯಪಟ್ಟಿವೆ. ಸಾಕಷ್ಟು ಅಭಿಪ್ರಾಯ ಭೇದಗಳೂ ವ್ಯಕ್ತವಾಗಿವೆ. ಇಷ್ಟೊಂದು ಕೋಲಾಹಲ ಉಂಟುಮಾಡಿರುವ ಈ ಕಾಯ್ದೆಯ ಪ್ರಮುಖ ಅಂಶಗಳನ್ನು ತಿಳಿದುಕೊಳ್ಳುವ ಅಗತ್ಯವಿದೆ.

**ವಿಶೇಷ ಆರ್ಥಿಕ ವಲಯ ಕಾಯ್ದೆ - ೨೦೦೫ ಪ್ರಮುಖ ಅಂಶಗಳು**

ಈ ಕಾಯ್ದೆಯ ಪ್ರಮುಖ ಉದ್ದೇಶವೆಂದರೆ ದೇಶದ ರಫ್ತನ್ನು ಉತ್ತೇಜಿಸುವ ಸಲುವಾಗಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸುವುದು, ಅಭಿವೃದ್ಧಿಪಡಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು ಎಂಬುದನ್ನು ಕಾಯ್ದೆಯಲ್ಲಿಯೇ ಘೋಷಿಸಲಾಗಿದೆ. ಯು.ಪಿ.ಎ. ಸರ್ಕಾರದ ಪರಿಕಲ್ಪನೆಯಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಅಗತ್ಯವಾದ ರಂಗಸಜ್ಜಿಕೆಯೇ ಈ ವಿಶೇಷ ಆರ್ಥಿಕ ವಲಯಗಳು.

ವಿಶೇಷ ಆರ್ಥಿಕ ವಲಯಗಳನ್ನು ಮೂರು ತೆರನಾಗಿ ವಿಂಗಡಿಸಲಾಗಿದೆ. ಮೊದಲನೆಯದು, ನಿಶ್ಚಿತ ವಿಶೇಷ ಆರ್ಥಿಕ ವಲಯ. ಎರಡನೆಯದು, ಬಹುಮುಖೀ ಉತ್ಪಾದನಾ ವಿಶೇಷ ಆರ್ಥಿಕ ವಲಯ ಮತ್ತು ಮೂರನೆಯದು, ಮಾಹಿತಿ ತಂತ್ರಜ್ಞಾನ ವಿಶೇಷ ಆರ್ಥಿಕ ವಲಯ. ಈ ವಿಶೇಷ ಆರ್ಥಿಕ ವಲಯಗಳನ್ನು ಸಾರ್ವಜನಿಕ ಕ್ಷೇತ್ರದಲ್ಲಾಗಲಿ, ಖಾಸಗಿ ಕ್ಷೇತ್ರದಲ್ಲಾಗಲಿ ಸ್ಥಾಪಿಸಬಹುದಾಗಿದೆ. ನಿಶ್ಚಿತ-ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಲು ಅರ್ಜಿ ಸಲ್ಲಿಸುವ ಅಭಿವೃದ್ಧಿದಾರ (developer) ಕನಿಷ್ಠ ಐವತ್ತು ಕೋಟಿಯಷ್ಟು ಮೌಲ್ಯದ ಸ್ಥಿರಾಸ್ತಿಯನ್ನು ಹೊಂದಿರಬೇಕು ಮತ್ತು ಇನ್ನೂರೈವತ್ತು ಕೋಟಿ ರೂಪಾಯಿ ಬಂಡವಾಳ ಹೂಡಲು ಶಕ್ತನಾಗಿ ಇರಬೇಕು. ಬಹುಮುಖೀ ವಿಶೇಷ ಆರ್ಥಿಕ ವಲಯದ ಅರ್ಜಿದಾರ ಕನಿಷ್ಠ ಇನ್ನೂರೈವತ್ತು ಕೋಟಿ ರೂಪಾಯಿಯ ಸ್ಥಿರಾಸ್ತಿಯನ್ನು ಹೊಂದಿರಬೇಕು ಮತ್ತು ಒಂದು ಸಾವಿರ ಕೋಟಿ ರೂಪಾಯಿಯ ಬಂಡವಾಳ ಹೂಡಿಕೆಗೆ ಶಕ್ತನಾಗಿರಬೇಕು. ಅದೇ ರೀತಿ ಮಾಹಿತಿ ತಂತ್ರಜ್ಞಾನದ ವಲಯಗಳ ಅರ್ಜಿದಾರ, ಒಂದು ನೂರು ಕೋಟಿ ರೂಪಾಯಿಯಷ್ಟು ಸ್ಥಿರಾಸ್ತಿಯನ್ನು ಹೊಂದಿರಬೇಕು.

**ಅಗತ್ಯಕ್ಕೂ ಮೀರಿದ ಭೂಸ್ವಾಧೀನ**

ಕೇಂದ್ರ ಸರ್ಕಾರ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಅನುಮತಿ ನೀಡಲು ಅನುಮೋದನಾ ಸಮಿತಿಯನ್ನು ಈ ಕಾಯ್ದೆಯನ್ವಯ ರಚಿಸಿದೆ. ಈ ಅನುಮೋದನಾ ಸಮಿತಿಗೆ ಸಲ್ಲಿಸುವ ಅರ್ಜಿಯಲ್ಲಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸುವ ಪ್ರದೇಶಗಳನ್ನು ಗೊತ್ತುಪಡಿಸಿರಬೇಕು. ಅರ್ಜಿಗಳನ್ನು ಪರಿಶೀಲಿಸಿ ಈ ಸಮಿತಿಯು ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ತಾತ್ವಿಕ ಒಪ್ಪಿಗೆ ಕೊಡುತ್ತದೆ. ಪ್ರತಿಯೊಂದು ವಲಯಕ್ಕೂ ಕನಿಷ್ಠ ಭೂಮಿಯ ಅಗತ್ಯವನ್ನು ಕಾಯ್ದೆಯಲ್ಲಿ ನಿಗದಿಪಡಿಸಲಾಗಿದೆ. ಆದರೆ ಗರಿಷ್ಠ ಭೂಮಿತಿಯನ್ನು ನಿಗದಿಪಡಿಸದಿರುವುದು ಗಮನಾರ್ಹ. ನಂತರ ಅನುಮೋದಿತ ವಿಶೇಷ ಆರ್ಥಿಕ ವಲಯಗಳಿಗೆ ಬೇಕಾದ ಭೂಮಿಯನ್ನು ರೈತರಿಂದ ಸ್ವಾಧೀನಪಡಿಸಿಕೊಂಡು ಅದನ್ನು ವಿಶೇಷ ವಲಯಗಳ ಅಭಿವೃದ್ಧಿದಾರನಿಗೆ ವರ್ಗಾಯಿಸುವುದು ಆಯಾ ರಾಜ್ಯಗಳ ಜವಾಬ್ದಾರಿಯಾಗಿದೆ. ಅಂತಿಮವಾಗಿ ಕೇಂದ್ರ ಸರ್ಕಾರ ಸೂಕ್ತ ಷರತ್ತುಗಳೊಂದಿಗೆ ಅಭಿವೃದ್ಧಿದಾರನಿಗೆ ವಿಶೇಷವಲಯ ಸ್ಥಾಪನೆಗೆ ಅನುಮೋದನೆ ನೀಡುತ್ತದೆ.

ಈ ಕಾಯ್ದೆ ಜಾರಿಗೊಳ್ಳುವ ಮುನ್ನ ವಿಶೇಷ ಆರ್ಥಿಕ ವಲಯಗಳ ಬಗ್ಗೆ ಇದ್ದ ಮಾರ್ಗಸೂಚಿಯ ಪ್ರಕಾರ ಫಲವತ್ತಾದ ಭೂಮಿಯನ್ನು (ಅಂದರೆ ವರ್ಷದಲ್ಲಿ ಎರಡು ಬಾರಿ ಬೆಳೆ ತೆಗೆಯುವಂತಹ ಜಮೀನು) ಈ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಕೂಡದೆಂದು, ಅಂತಹ ಪರಿಸ್ಥಿತಿ ಬಂದಲ್ಲಿ ಈ ರೀತಿಯ ಜಮೀನು ಒಟ್ಟು ಸ್ವಾಧೀನಪಡಿಸಿಕೊಳ್ಳುವ ಭೂಮಿಯಲ್ಲಿ ಶೇಕಡ ಹತ್ತರಷ್ಟಕ್ಕಿಂತ ಮೀರಬಾರದೆಂದು ಹೇಳಲಾಗಿತ್ತು. ನಂತರದ ವಿಶೇಷ ಕಾಯ್ದೆಯಲ್ಲಿ ಈ ರೀತಿಯ ಷರತ್ತನ್ನು ನಮೂದಿಸಿಲ್ಲ.

ಅಭಿವೃದ್ಧಿದಾರ ವಿಶೇಷ ಆರ್ಥಿಕ ವಲಯಕ್ಕೆ ಕೊಟ್ಟ ಭೂಮಿಯಲ್ಲಿ ಶೇಕಡ ಇಪ್ಪತ್ತೈದರಷ್ಟನ್ನು (೨೫%) ಉತ್ಪಾದನಾ ಚಟುವಟಿಕೆಗಳಿಗೆ ಮೀಸಲಿಟ್ಟು ಉಳಿದ ಶೇಕಡ ಎಪ್ಪತ್ತೈದರಷ್ಟನ್ನು (೭೫%) ಇತರೆ ಉದ್ದೇಶಗಳಿಗಾಗಿ ಬಳಸಿಕೊಳ್ಳಬಹುದು. ಉತ್ಪಾದನಾ ಉದ್ದೇಶಗಳಿಗೆ ಮೀಸಲಾದ ಜಮೀನನ್ನು ಈ ವಲಯದಲ್ಲಿ ಬಂಡವಾಳ ಹೂಡುವ ಉದ್ದಿಮೆದಾರನಿಗೆ ಲಾಭದಾಯಕ ಬೆಲೆಗೆ ಮಾರಿಕೊಳ್ಳಬಹುದು. ಅಂದರೆ ವಿಶೇಷ ಆರ್ಥಿಕ ವಲಯಗಳ ಅಭಿವೃದ್ಧಿದಾರರು ಸರ್ಕಾರದಿಂದ ಕಡಿಮೆ ಬೆಲೆಗೆ ತಮಗೆ ಬೇಕಾದ ಭೂಮಿ ಪಡೆದು ತಮಗೆ ಇಷ್ಟಬಂದ ಬೆಲೆಗೆ ಮಾರಿಕೊಳ್ಳಬಹುದು. ಮುಂದೆ ಈ ವಲಯಗಳಲ್ಲಿ ಉತ್ಪಾದನಾ ಕ್ರಿಯೆ ನಿಂತುಹೋದಲ್ಲಿ ಅಭಿವೃದ್ಧಿದಾರರಿಗೆ ಕೊಟ್ಟ ಜಮೀನು ಸರ್ಕಾರದ ಕೈ ಸೇರುವುದಿಲ್ಲ. ತನ್ನ ಭೂಮಿಯನ್ನು ತನಗೆ ಬೇಕಾದ ಬೆಲೆಗೆ ಮಾರಲು ರೈತನಿಗೆ ಸಾಧ್ಯವಾಗುವುದಿಲ್ಲ.

**ಸುಂಕ ಮತ್ತು ತೆರಿಗೆಗಳಿಂದ ವಿನಾಯ್ತಿ**

ವಿಶೇಷ ಆರ್ಥಿಕ ವಲಯದ ಅಭಿವೃದ್ಧಿದಾರರಿಗೆ ಭೂಮಿ ಕಡಿಮೆ ಬೆಲೆಗೆ ಅಗತ್ಯವಿರುವ ಹಾಗೂ ಅದಕ್ಕಿಂತ ಬಹಳ ಹೆಚ್ಚಾಗಿ ಸಿಗುವುದು ಮಾತ್ರವಲ್ಲ ಅವರಿಗೆ ಮತ್ತು ಇಲ್ಲಿ ಬಂಡವಾಳ ಹೂಡುವ ಉದ್ದಿಮೆದಾರರಿಗೆ ಕೇಂದ್ರ ಅಬ್ಕಾರಿ ಸುಂಕ, ಕಸ್ಟಂ ಸುಂಕ, ಕೇಂದ್ರ ಮಾರಾಟ ತೆರಿಗೆ, ಇತ್ಯಾದಿ ತೆರಿಗೆಗಳಿಂದ, ಸುಂಕಗಳಿಂದ ಸಂಪೂರ್ಣ ವಿನಾಯ್ತಿ ಕೊಡಲಾಗಿದೆ. ಅದೇ ರೀತಿ ಮೊದಲ ಐದು ವರ್ಷಕ್ಕೆ ಆದಾಯ ತೆರಿಗೆಯಿಂದ ಸಂಪೂರ್ಣ ವಿನಾಯ್ತಿ



ಕೊಟ್ಟರೆ, ನಂತರ ಹತ್ತು ವರ್ಷಗಳಿಗೆ ಅರ್ಧ ತೆರಿಗೆ ವಿನಾಯ್ತಿ ಕೊಡಲಾಗಿದೆ.

ಪ್ರತಿಯೊಂದು ವಿಶೇಷ ಆರ್ಥಿಕ ವಲಯದಲ್ಲಿ ಉತ್ಪಾದನೆಗೆ ಪೂರಕವಾಗಿ ಖರೀದಿಸುವ ಕಚ್ಚಾ ಪದಾರ್ಥಗಳು, ಬಿಡಿಭಾಗಗಳು, ಯಂತ್ರೋಪಕರಣಗಳು ಮತ್ತು ಈ ವಲಯಗಳಿಂದ ರಫ್ತಾಗುವ ಎಲ್ಲ ಉತ್ಪಾದಿತ ವಸ್ತುಗಳು ಎಲ್ಲ ಸುಂಕ ಮತ್ತು ತೆರಿಗೆಗಳಿಂದ ವಿನಾಯ್ತಿ ಹೊಂದುತ್ತವೆ. ವಿದೇಶಿ ಬ್ಯಾಂಕ್‌ಗಳಿಗೆ ಮೊದಲ ಮೂರು ವರ್ಷಕ್ಕೆ ಸಂಪೂರ್ಣ ಆದಾಯ ತೆರಿಗೆ ವಿನಾಯ್ತಿ ಮತ್ತು ನಂತರದ ಎರಡು ವರ್ಷಕ್ಕೆ ಶೇಕಡ ಐವತ್ತರಷ್ಟು ತೆರಿಗೆ ವಿನಾಯ್ತಿ ಕೊಡಲಾಗಿದೆ. ಈ ವಲಯಗಳಲ್ಲಿ ಸ್ಥಾಪಿಸುವ ಸಣ್ಣ ಪ್ರಮಾಣದ ಉದ್ದಿಮೆಗಳಲ್ಲಿ ತೊಡಗಿಸಲು ವಿದೇಶಿ ಬಂಡವಾಳಕ್ಕೆ ಯಾವ ಮಿತಿಯೂ ಇಲ್ಲ. ವಿಶೇಷ ಆರ್ಥಿಕ ವಲಯಗಳಲ್ಲಿ ಉದ್ಭವಿಸುವ ವಿವಾದಗಳನ್ನು ಬಗೆಹರಿಸಲು ವಿಶೇಷ ನ್ಯಾಯಾಲಯಗಳ ಸ್ಥಾಪನೆಗೆ ಕಾಯ್ದೆ ಅವಕಾಶವಿತ್ತಿದೆ. ಎಲ್ಲ ಆರ್ಥಿಕ ವಲಯಗಳು ಭಾರತದೇಶದ ಅಬ್ಕಾರಿ ಸುಂಕ ಪ್ರದೇಶಕ್ಕೆ ಹೊರತಾದುವೆಂದು ಪರಿಗಣಿಸಲಾಗಿದೆ. ಅಂದರೆ, ಆರ್ಥಿಕ ವಲಯಗಳು ನಮ್ಮ ದೇಶದಲ್ಲಿರುವ ವಿದೇಶಿ ಪ್ರದೇಶಗಳು !

**ನೆಲೆ**

ಎಷ್ಟೊಂದು ಮಳೆ<br>
ಈಜುತಿವೆ ಕಪ್ಪೆಗಳು<br>
ಮನೆಬಾಗಿಲೆದುರಲ್ಲೆ!

ರತ್ನಾಕರ ಶೆಟ್ಟಿ<br>
ಮುಂಬಯಿ - ೪೦೦ ೧೦೩

ವಿಶೇಷ ಆರ್ಥಿಕ ವಲಯಗಳ ಆಡಳಿತ ಮತ್ತು ನಿರ್ವಹಣೆಗಾಗಿ ವಲಯಗಳ ಗಾತ್ರಕ್ಕನುಗುಣವಾಗಿ ಯೋಜನಾ ಆಯುಕ್ತರನ್ನು ನೇಮಿಸಲಾಗಿದೆ. ಈ ಪ್ರದೇಶಗಳಲ್ಲಿ ಅನಿರ್ಬಂಧಿತವಾಗಿ ಗುತ್ತಿಗೆ ಕಾರ್ಮಿಕರನ್ನು ನೇಮಿಸಿಕೊಳ್ಳಬಹುದು. ಈ ವಲಯಗಳಿಗೆ ಕಾರ್ಮಿಕರಿಗೆ ಸಂಬಂಧಪಟ್ಟ ಕಾನೂನುಗಳ ಅನ್ವಯದಲ್ಲಿ ವಿನಾಯಿತಿ ಕೊಡಬಹುದು. ಅಂದರೆ ಇಲ್ಲಿಗೆ ಕಾರ್ಮಿಕ ಕಾನೂನುಗಳ ಅನ್ವಯಕ್ಕೆ ಸಂಬಂಧಪಟ್ಟಂತೆ ಕಾರ್ಮಿಕ ಇಲಾಖೆಯ ಅಧಿಕಾರಿಗಳು ಈ ವಲಯದಲ್ಲಿನ ಕಾರ್ಖಾನೆಗಳಿಗೆ ಕಾಲಿಡುವಹಾಗಿಲ್ಲ. ಈ ವಲಯಗಳಲ್ಲಿನ ಕಾರ್ಮಿಕರು ಮುಷ್ಕರದ ಹಕ್ಕು, ಸಂಘಟನೆಯ ಹಕ್ಕು ಇತ್ಯಾದಿಗಳಿಂದ ವಂಚಿತರಾಗುತ್ತಾರೆ. ವಿಶೇಷ ಆರ್ಥಿಕ ವಲಯಗಳಲ್ಲಿನ ಎಲ್ಲ ಉದ್ದಿಮೆಗಳನ್ನು ಸಾರ್ವಜನಿಕ ಉಪಯುಕ್ತತೆಯ ಸೇವೆಯೆಂದು ಪರಿಗಣಿಸಲಾಗುವುದು.

**ಆಡಳಿತ ವರ್ಗದಲ್ಲಿ ಅಭಿಪ್ರಾಯ ಭೇದ**

ವಿಶೇಷ ಆರ್ಥಿಕ ವಲಯಗಳ ಬಗ್ಗೆ ಮೇಲ್ಕಾಣಿಸಿದ ಸರ್ಕಾರದ ನೀತಿ ಮತ್ತು ಕಾನೂನುಗಳು ಅನೇಕ ವಿವಾದಗಳಿಗೆ ಎಡೆಮಾಡಿಕೊಟ್ಟಿವೆ. ಮೊದಲನೆಯದು ಬಂಡವಾಳ ಹೂಡಿಕೆ, ಅದರಲ್ಲೂ ವಿದೇಶಿ ಬಂಡವಾಳವನ್ನು ಆಕರ್ಷಿಸಲು ಸುಂಕಗಳ ರಿಯಾಯಿತಿ, ತೆರಿಗೆಗಳ ವಿನಾಯಿತಿಯನ್ನು ಅಷ್ಟೊಂದು ಪ್ರಮಾಣದಲ್ಲಿ ಕೊಡಬೇಕೇ ಎಂಬುದು. ಈ ವಿಚಾರದಲ್ಲಿ ಕೇಂದ್ರ ಹಣಕಾಸು ಸಚಿವಾಲಯ ಮತ್ತು ವಾಣಿಜ್ಯ ಸಚಿವಾಲಯಗಳ ನಡುವೆ ಸಾಕಷ್ಟು ಅಭಿಪ್ರಾಯ ಭೇದವಿದೆ. ಹಣಕಾಸು ಸಚಿವಾಲಯದ ಅಂದಾಜಿನ ಪ್ರಕಾರ ಸುಂಕ ಮತ್ತು ತೆರಿಗೆ ವಿನಾಯ್ತಿಗಳಿಂದಾಗಿ ೨೦೦೫-೦೬ರಿಂದ ೨೦೦೯-೧೦ರ ಅವಧಿಯಲ್ಲಿ ಸರ್ಕಾರಕ್ಕೆ ಸುಮಾರು ಒಂದು ಲಕ್ಷ ಕೋಟಿ ರೂಪಾಯಿಯಷ್ಟು ಆದಾಯ ನಷ್ಟವಾಗುತ್ತದೆ. ಆದರೆ ವಾಣಿಜ್ಯ ಸಚಿವಾಲಯ ಈ ವಾದವನ್ನು ಒಪ್ಪುತ್ತಿಲ್ಲ. ವಿದೇಶಿ ನೇರ ಬಂಡವಾಳ ಹೂಡಿಕೆಯಿಂದಾಗಿ ಔದ್ಯಮಿಕ ಚಟುವಟಿಕೆಗಳು ಹೆಚ್ಚಾಗಿ ಆದಾಯದ ಕೊರತೆಯನ್ನು ಪರಿಹರಿಸುತ್ತದೆ ಮತ್ತು ಒಂದು ಲಕ್ಷ ಮೂವತ್ತೇಳು ಕೋಟಿ ರೂಪಾಯಿಗಳಷ್ಟು ತೆರಿಗೆ ವಸೂಲಿ ಹೆಚ್ಚುತ್ತದೆ. ಇಷ್ಟಲ್ಲದೆ ಐದು ಲಕ್ಷ ಉದ್ಯೋಗಗಳು ಸೃಷ್ಟಿಯಾಗುತ್ತವೆ ಎಂಬುದು ಇವರ ಪ್ರತಿವಾದ.

**ಅಣಬೆಯಂತೆ ಹುಟ್ಟುತ್ತಿರುವ ವಿಶೇಷ ಆರ್ಥಿಕ ವಲಯಗಳು**

ವಿಶೇಷ ಆರ್ಥಿಕ ವಲಯಗಳು ಅವುಗಳ ಅಭಿವೃದ್ಧಿದಾರರು ಮತ್ತು ಅಲ್ಲಿ ಕೈಗಾರಿಕೆ ಸ್ಥಾಪಿಸುವ ಉದ್ದಿಮೆದಾರರಿಗೆ ನಾನಾ ರೀತಿಯ ರಿಯಾಯಿತಿಗಳನ್ನು ಕಾನೂನಿನಡಿಯಲ್ಲಿ ದೊರಕಿಸಿಕೊಡುವುದರಿಂದ, ಹೊಸರೀತಿಯ ಅಸಮಾನ ಬೆಳವಣಿಗೆಗೂ ಹೊಸ ಚಳುವಳಿಗೂ ದಾರಿ ಮಾಡಿಕೊಟ್ಟಿವೆ ಮತ್ತು ಮೊದಲನೆಯದಾಗಿ, ವಿಶೇಷ ಆರ್ಥಿಕ ವಲಯಗಳಿಗೆ ಬೇಕಾದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ಈಗಾಗಲೆ, ದೇಶದ ಅನೇಕ ಭಾಗಗಳಲ್ಲಿ ತೀವ್ರ ಸ್ವರೂಪದ ಪ್ರತಿರೋಧವನ್ನೆದುರಿಸುತ್ತಿದೆ. ೨೦೦೫ರ ಕಾಯ್ದೆ ಜಾರಿಗೆ ಬಂದನಂತರ ಅಕ್ಟೋಬರ್ ೨೦೦೬ರ ಹೊತ್ತಿಗೆ ೨೧ ರಾಜ್ಯಗಳಲ್ಲಿ ಒಟ್ಟು ೨೦೨ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಅಂತಿಮ ಒಪ್ಪಿಗೆ ದೊರೆತಿದೆ. ಹಾಗೆಯೇ ೧೫೨ ವಲಯಗಳಿಗೆ ತಾತ್ವಿಕ ಅನುಮೋದನೆ ಸಿಕ್ಕಿದೆ. ಪಶ್ಚಿಮ ಬಂಗಾಳದ ನಂದೀಗ್ರಾಮ, ಮಹಾರಾಷ್ಟ್ರದ ರಾಯಘಡ್, ಹೊಸ ಮುಂಬಯಿನ ಕಾರ್ಲ, ಒರಿಸ್ಸಾದ ಪರಾದೀಪ್, ಕಳಿಂಗನಗರ, ಹರ್ಯಾಣದ ದದ್ರಿ, ಕರ್ನಾಟಕದ ಬೆಂಗಳೂರು, ಮಂಗಳೂರು, ಉಡುಪಿ, ಹಾಸನ, ಉತ್ತರ ಕನ್ನಡ ಮುಂತಾದೆಡೆ ವಿಶೇಷ ಆರ್ಥಿಕ ವಲಯಗಳಿಗಾಗಿ ಭೂಸ್ವಾಧೀನ ಪ್ರಕ್ರಿಯೆ ಜಾರಿಯಲ್ಲಿದೆ. ಈಗಾಗಲೆ ಅನುಮೋದಿತ (೨೦೨) ಮತ್ತು ತಾತ್ವಿಕ ಅನುಮೋದಿತ (೧೫೨) ವಿಶೇಷ ಆರ್ಥಿಕ ವಲಯಗಳಿಗೆ ಬೇಕಾದ ಭೂಮಿ ಎರಡು ಲಕ್ಷ ಐವತ್ತು ಸಾವಿರ ಎಕರೆಗಳೆಂದು ಅಂದಾಜಿಸಲಾಗಿದೆ. ಮಹಾರಾಷ್ಟ್ರ ಸರ್ಕಾರ ರಿಲೈಯನ್ಸ್ ಕಂಪನಿಗೆ ನವ ಮುಂಬಯಿಯಲ್ಲಿ ಮೂವತ್ತೈದು ಸಾವಿರ ಎಕರೆ ಭೂಮಿಯನ್ನು ಕೊಡಲು ಒಪ್ಪಿದೆ. ಒರಿಸ್ಸಾ ಸರ್ಕಾರ ದಕ್ಷಿಣ ಕೊರಿಯಾದ ಉಕ್ಕು ಕಂಪನಿ ಪಾಸ್ಕೊಗೆ ಒಂದು ಸಾವಿರದ ಒಂದು ನೂರು ಎಕರೆ ಭೂಮಿಯನ್ನು ಕೊಟ್ಟಿದೆ. ಹರ್ಯಾಣ ಸರ್ಕಾರ ರಿಲೈಯನ್ಸ್ ಕಂಪನಿಗೆ ಇಪ್ಪತ್ತೈದು ಸಾವಿರ ಎಕರೆ ಭೂಮಿಯನ್ನು ಕೊಡಲಿದೆ. ಪಶ್ಚಿಮ ಬಂಗಾಳ ಸರ್ಕಾರ ಈಗಾಗಲೆ ಒಂದು ಸಾವಿರ ಎಕರೆ ಜಮೀನನ್ನು ಟಾಟಾ ಕಂಪನಿಗೆ ಸಿಂಗೂರಿನಲ್ಲಿ ಒದಗಿಸಿಕೊಟ್ಟಿದೆ; ಹಾಗೆಯೇ ವೀಡಿಯೋಕಾನ್ ಕಂಪನಿಗೆ ಉತ್ತರ ಬಂಗಾಳದ ಸಿಲಿಗುರಿಯಲ್ಲಿ ಸಾಕಷ್ಟು ಭೂಮಿ ಕೊಡಲಿದೆ. ಇಂಡೋನೇಷ್ಯಾದ ಸಲೀಂ ಕಂಪನಿಗೆ ರಾಸಾಯನಿಕ ಸಮೂಹ ವಲಯಕ್ಕಾಗಿ ನಂದೀಗ್ರಾಮದಲ್ಲಿ ಭೂಮಿ ಕೊಡಲು ಒಪ್ಪಿಕೊಂಡಿದೆ. ಕರ್ನಾಟಕ ಸರ್ಕಾರ ಕೂಡ ಈ ದಿಕ್ಕಿನಲ್ಲಿ ಹಿಂದೆ ಬಿದ್ದಿಲ್ಲ. ಈಗಾಗಲೆ ಇನ್‌ಫೋಸಿಸ್‌ನ ನಾರಾಯಣಮೂರ್ತಿಯವರು ಕೇಳಿದಷ್ಟು ಭೂಮಿಯನ್ನು ಬೆಂಗಳೂರು , ಮೈಸೂರು, ಮಂಗಳೂರು ಮುಂತಾದ ಕಡೆ ಕಡಿಮೆ ಬೆಲೆಗೆ ಅವರಿಗೆ ಕೊಡಲಾಗಿದೆ.

**ಸಣ್ಣ ರೈತರ ಆಕ್ರೋಶ**

ಕೃಷಿ ಯೋಗ್ಯ ಭೂಮಿಯನ್ನು ಕೈಗಾರಿಕೆ ಭೂಮಿಯಾಗಿ ಪರಿವರ್ತಿಸುತ್ತಿರುವುದು ತೀವ್ರ ಆತಂಕಕ್ಕೆ ಎಡೆಮಾಡಿಕೊಟ್ಟಿದೆ. ಇದರಿಂದಾಗಿ ಕೃಷಿ ಉತ್ಪನ್ನ ಕುಂಠಿತಗೊಳ್ಳುವ ಆತಂಕ ಒಂದೆಡೆಯಾದರೆ, ಸಣ್ಣ ಹಿಡುವಳಿದಾರ ರೈತನನ್ನು ಭೂಹೀನನನ್ನಾಗಿಸುವುದು ಮತ್ತು ಅವನ ಪರಿವಾರವನ್ನು ಕೃಷಿ ಕಸುಬಿನಿಂದ ಹೊರಗಟ್ಟುವುದು ಭಯಾನಕ ಬೆಳವಣಿಗೆಯಾಗಿದೆ. ಸರ್ದಾರ್ ಸರೋವರ ಅಣೆಕಟ್ಟಿನಿಂದಾಗಿ ಸ್ಥಳಾಂತರಗೊಂಡ ರೈತರ, ಬುಡಕಟ್ಟಿನ ಜನರ ಮತ್ತು ಕೃಷಿ ಕಾರ್ಮಿಕರ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಹೀಗಾಗಿ ವಿಶೇಷ ಆರ್ಥಿಕ ವಲಯಕ್ಕಾಗಿಯೇ ಸುಮಾರು ೨,೫೦,೦೦೦ ಎಕರೆ ಜಮೀನು ಕಳೆದುಕೊಳ್ಳುವ ರೈತರ ಪಾಡೇನು ಎಂಬುದು ಮಹತ್ತರ ಪ್ರಶ್ನೆಯಾಗಿ ಉಳಿಯುತ್ತದೆ.

ಕಡಿಮೆ ಭೂಮಿ ಹೊಂದಿದ ರೈತನಿಗೆ ಭೂಮಿ ಕೇವಲ ಆರ್ಥಿಕ ಒಡೆತನ ಮಾತ್ರವಲ್ಲ, ಅದು ಅವನ ಸಾಮಾಜಿಕ ಬದುಕಿನ ಬಹುಮುಖ್ಯ ಆಧಾರ. ಹಾಗಾಗಿಯೇ ಅದು ಅವನ ಮಾನಸಿಕ ಸಂತುಷ್ಟತೆಗೆ ಬುನಾದಿ. ಭೂಮಿ ಕಳೆದುಕೊಳ್ಳುವ ಈ ರೈತ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಮಾನಸಿಕವಾಗಿ ತೊಳಲುವುದು ಈ ಕಾರಣಗಳಿಗಾಗಿಯೇ. ಜಮೀನ್ದಾರರು ಈ ಕಾರಣಗಳಿಂದ ಬಳಲುವುದೇ ಇಲ್ಲ. ಹೀಗಾಗಿ ಭೂಮಿಯನ್ನು ಕಳೆದುಕೊಳ್ಳುವ ಸಣ್ಣ ರೈತ ಹೆಚ್ಚು ಉದ್ವಿಗ್ನನಾಗುವುದು ಸಹಜ. ಸರ್ಕಾರದ ನೀತಿ ಫಲವತ್ತಾದ ಭೂಮಿಯನ್ನು ರೈತನಿಂದ ದೋಚಿ, ವಿಶೇಷ ವಲಯದ ಅಭಿವೃದ್ಧಿದಾರನಿಗೆ ಕೊಟ್ಟು ಅವನನ್ನು ಹೊಸ ಭೂಮಾಲಿಕನನ್ನಾಗಿ ಮಾಡುವುದಾಗಿದೆ. ಇದು ಹೊಸ ಸುಲಿಗೆಯ ವಿಧಾನವಾಗಿದೆ. ಶ್ರೀಮಂತ ವರ್ಗದ ಭೂಮಿಯ ದಾಹ ಮತ್ತು ಭೂಮಿ ಕಳೆದುಕೊಳ್ಳುತ್ತಿರುವ ಬಡರೈತರ ಕೋಪ ಹೊಸ ವರ್ಗ ಸಂಘರ್ಷಕ್ಕೆ ನಾಂದಿಯಾಗಿದೆ.

**ಇಡೀ ನೀತಿಯ ಪುನರ್ವಿಮರ್ಶೆಯ ಅಗತ್ಯವಿದೆ**

ಇತ್ತೀಚೆಗೆ ಕೇಂದ್ರ ಸರ್ಕಾರದ ಸಂಪುಟ ರಚಿಸಿದ ಮಂತ್ರಿಗಳ ಸಮಿತಿ ಭೂ-ಸ್ವಾಧೀನದ ಗರಿಷ್ಠ ಮಿತಿ ಸುಮಾರು ಹನ್ನೆರಡು ಸಾವಿರ ಎಕರೆಗೆ ಮೀರಬಾರದೆಂದು ಮತ್ತು ಖಾಸಗಿ ಅಭಿವೃದ್ಧಿದಾರನಿಗೆ ಸರ್ಕಾರ ಭೂಸ್ವಾಧೀನಪಡಿಸಿಕೊಂಡು ವರ್ಗಾಯಿಸಬಾರದೆಂದು ಮತ್ತು ಫಲವತ್ತಾದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬಾರದೆಂದು ಹೇಳಿದೆ. ಆದರೆ ಇದನ್ನು ಕಾನೂನಾಗಿ ಮಾಡಿಲ್ಲ. ದೊಡ್ಡ ದೊಡ್ಡ ಕಂಪನಿಗಳ ದಳ್ಳಾಳಿಗಳಾಗಿರುವ ರಾಜಕಾರಣಿಗಳಿಗೆ ಎಲ್ಲ ಇತಿ-ಮಿತಿಗಳನ್ನು ಉಲ್ಲಂಘಿಸುವ ಶಕ್ತಿಯಿದೆ. ಬೆಂಗಳೂರು, ಮುಂಬಯಿ, ಕೋಲ್ಕತ್ತಾ, ದೆಹಲಿ ಇತ್ಯಾದಿ ಮಹಾನಗರಗಳ ಆಸುಪಾಸಿನಲ್ಲೇ ವಿಶೇಷ ವಲಯಗಳ ಸ್ಥಾಪನೆಗೆ ಹೆಚ್ಚು ಅರ್ಜಿಗಳು ಬಂದಿವೆ. ಅಂದರೆ ಸರ್ಕಾರದಿಂದ ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳು ಸ್ಥಾಪನೆಯಾಗಬೇಕು, ಆ ಪ್ರದೇಶಗಳು ಅಭಿವೃದ್ಧಿಯಾಗಬೇಕು. ಅಲ್ಲಿಯ ಜನತೆಗೆ ಉದ್ಯೋಗಾವಕಾಶ ದೊರೆಯ ಬೇಕೆಂದು ಬಯಸುವಂತಿಲ್ಲ ಆದಕಾರಣ ವಿಶೇಷ ಆರ್ಥಿಕ ವಲಯಗಳು ಪ್ರಾದೇಶಿಕ ಅಸಮಾನತೆಯನ್ನು ಹೆಚ್ಚಿಸುವುದೆಂಬುದರ

ಬಗ್ಗೆ ಸಂದೇಹವಿಲ್ಲ. ದೇಶದ ಎಲ್ಲ ಪ್ರದೇಶಗಳೂ ಸಮಾನವಾಗಿ ಅಭಿವೃದ್ಧಿ ಹೊಂದುವಂತೆ ಯೋಜಿಸಬೇಕಾದಾಗ ಸರ್ಕಾರವೇ ಅದನ್ನು ಉಪೇಕ್ಷಿಸಿದಾಗ, ಲಾಭದ ಏಕೈಕ ಗುರಿಹೊಂದಿದ ಬಂಡವಾಳಿಗರು ಸಮಾನ ಬೆಳವಣಿಗೆಯ ಬಗ್ಗೆ ಯೋಚಿಸಿಯಾರೆ ?

ಜಾಗತೀಕರಣದ ಪ್ರಕ್ರಿಯೆಯಲ್ಲಿ ವಿಶೇಷ ಆರ್ಥಿಕ ವಲಯಗಳು ನವ ವಸಾಹತೀಕರಣದ ಒಂದು ರೂಪವಷ್ಟೆ. ಬೇಕಾದಷ್ಟು ಭೂಮಿ, ಸುಂಕ ಮತ್ತು ತೆರಿಗೆಗಳ ವಿನಾಯ್ತಿ, ಕಾರ್ಮಿಕ ಕಾನೂನುಗಳ ಅನ್ವಯದಿಂದ ವಿನಾಯ್ತಿ, ಹೀಗೆ ಎಲ್ಲೆಡೆಯಿಂದ ಶ್ರೀಮಂತರಿಗೆ ಸವಲತ್ತುಗಳನ್ನೊದಗಿಸಿ ಕೊಡುವುದು ದೇಶದ ಸಂವಿಧಾನಕ್ಕೆಸಗಿದ ಅಪಚಾರವಾಗುತ್ತದೆ. ಎಲ್ಲ ರೀತಿಯ ಅಸಮಾನತೆ ಹೆಚ್ಚಿಸುವ ವಿಶೇಷ ಆರ್ಥಿಕ ವಲಯದ ಕಾಯ್ದೆಯನ್ನು ಕೂಲಂಕಷವಾಗಿ ಪುನರ್ವಿಮರ್ಶಿಸಬೇಕಾಗಿದೆ. ಇಷ್ಟೆಲ್ಲ ವಿನಾಯ್ತಿಗಳನ್ನು ಪಡೆದರೂ, ೨೦೦೪-೦೫ರಲ್ಲಿ ವಿಶೇಷ ಆರ್ಥಿಕ ವಲಯಗಳ ಒಟ್ಟು ರಫ್ತಿಗೆ ಕೊಡುಗೆಯಾದರೂ ಏನು ? ಈ ದೇಶದ ಒಟ್ಟು ರಫ್ತು ೨೦೦೪-೦೫ರಲ್ಲಿ ೩,೬೧,೮೭೯ ಕೋಟಿ ರೂಪಾಯಿಯಾದರೆ, ಇದರಲ್ಲಿ ವಿಶೇಷ ವಲಯಗಳಿಂದಾದ ರಫ್ತು ಕೇವಲ ೧೭,೭೨೯ ಕೋಟಿ ರೂಪಾಯಿಗಳು ಮಾತ್ರ. ಅಂದರೆ ಒಟ್ಟು ರಫ್ತಿನಲ್ಲಿ ಶೇಕಡ ೪.೯ ಮಾತ್ರ. ಇದಕ್ಕೆ ಹೋಲಿಸಿದರೆ ಸಣ್ಣ ಪ್ರಮಾಣದ ಉದ್ದಿಮೆಗಳಿಂದಾದ ರಫ್ತು ಇದೇ ಅವಧಿಯಲ್ಲಿ ೧,೨೪,೪೧೬ ಕೋಟಿ ರೂಪಾಯಿಗಳು. ವಿಶೇಷ ಆರ್ಥಿಕ ವಲಯದಲ್ಲಿ ಕಾಯಂ ಉದ್ಯೋಗಗಳು ಹುಟ್ಟುವುದಿಲ್ಲ... ಗುತ್ತಿಗೆ ಕಾರ್ಮಿಕರ ಸಂಖ್ಯೆ ಮತ್ತು ಶೋಷಣೆಯ ಪ್ರಮಾಣ ಹೆಚ್ಚುತ್ತದೆ. ಇದನ್ನು ಸ್ವಾಗತಿಸಬೇಕೆ ?




**ಕೆಲವು ಸಲಹೆಗಳು**

ದೇಶದ ಅಭಿವೃದ್ಧಿಗೆ ಕೈಗಾರಿಕೀಕರಣ ಅತ್ಯವಶ್ಯಕ. ಇದಕ್ಕಾಗಿ ಭೂಮಿ ಬೇಕು. ಆದರೆ ಕೈಗಾರಿಕೀಕರಣದ ಹೆಸರಿನಲ್ಲಿ ಯಥೇಚ್ಛ ಭೂಮಿಯನ್ನು ಪಡೆದುಕೊಳ್ಳುವುದನ್ನು, ಕಾರ್ಮಿಕರನ್ನು ಹಾಗೂ ರೈತರನ್ನು ಶೋಷಿಸುವುದನ್ನು ವಿರೋಧಿಸಬೇಕು. ಕೆಳಕಂಡ ಕೆಲವು ಮುಖ್ಯ ವಿಷಯಗಳು ಚರ್ಚೆಗೆ ಬರುವ ಅಗತ್ಯವಿದೆ –

(ಅ) ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಯನ್ನು ರಾಜ್ಯ ಸರ್ಕಾರಗಳ ತೀರ್ಮಾನಕ್ಕೆ ಬಿಡಬೇಕು. ಅವುಗಳನ್ನು ಯಾವ-ಯಾವ ಪ್ರದೇಶಗಳಲ್ಲಿ ಸ್ಥಾಪಿಸಬೇಕೆಂದು ರಾಜ್ಯ ಸರ್ಕಾರಗಳು ಗೊತ್ತುಪಡಿಸಬೇಕು.

(ಆ) ವಿಶೇಷ ಆರ್ಥಿಕ ವಲಯಗಳನ್ನು ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸುವ ಸಲುವಾಗಿ ಸ್ಥಾಪಿಸಬೇಕೇ ಹೊರತು ಅಸಮಾನತೆಯನ್ನು ಹೆಚ್ಚಿಸುವುದಕ್ಕಲ್ಲ.

(ಇ) ಯಾವ ಅಭಿವೃದ್ಧಿದಾರರು ಮತ್ತು ಉದ್ದಿಮೆದಾರರು ಹಿಂದುಳಿದ ಪ್ರದೇಶಗಳಲ್ಲಿನ ವಿಶೇಷ ಆರ್ಥಿಕ ವಲಯದಲ್ಲಿ ಬಂಡವಾಳ ತೊಡಗಿಸುತ್ತಾರೋ, ಅವರಿಗೆ ಮಾತ್ರ ಸುಂಕ ಮತ್ತು ತೆರಿಗೆ ವಿನಾಯ್ತಿಯನ್ನು ನೀಡಬೇಕು. ಮಿಕ್ಕ ಪ್ರದೇಶಗಳಲ್ಲಿ ವಿನಾಯ್ತಿಯ ಪ್ರಮಾಣ ಕಡಿಮೆ ಮಾಡಬೇಕು.

(ಈ) ಈ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಅವಶ್ಯಕವಾದಷ್ಟು ಭೂಮಿಯನ್ನು ಮಾತ್ರ ಸ್ವಾಧೀನಪಡಿಸಿಕೊಳ್ಳಬೇಕು. ಇದರಲ್ಲಿ ಮೋಸವಾಗದಂತೆ ಈ ಪ್ರಕ್ರಿಯೆ ಪಾರದರ್ಶಕವಾಗಿರಬೇಕು. ವಿಶೇಷ ವಲಯದ ಒಟ್ಟು ಜಮೀನಿನಲ್ಲಿ ಮುಕ್ಕಾಲು ಭಾಗ ಉತ್ಪಾದನಾ ಕ್ರಿಯೆಗಳಿಗೆ ಮೀಸಲಾಗಿಡಬೇಕು. ಉಳಿದ ಕಾಲು ಭಾಗವನ್ನು ವಸತಿ ಸೌಕರ್ಯ, ಶಾಲೆಗಳು, ಆಸ್ಪತ್ರೆ ಇತ್ಯಾದಿಗಳಿಗೆ ಉಪಯೋಗಿಸಬೇಕು.

(ಉ) ವಲಯಗಳಿಗಾಗಿ ಭೂ ಸ್ವಾಧೀನಕ್ಕೆ ಮುಂಚಿತವಾಗಿ ಆ ಪ್ರದೇಶದ ಗ್ರಾಮ ಪಂಚಾಯಿತಿ ಮತ್ತು ಸಂಬಂಧಪಟ್ಟ ರೈತರ ಜೊತೆ ಸರ್ಕಾರ ಬೇಕಾಗಿರುವ ಜಮೀನುಗಳ ಬಗ್ಗೆ ಚರ್ಚಿಸಬೇಕು ಮತ್ತು ಅದರ ಆಧಾರದ ಮೇಲೆ ನಿರ್ಣಯವಾಗಬೇಕು.

(ಊ) ಭೂಮಿಯನ್ನು ಕಳೆದುಕೊಳ್ಳುವ ರೈತನಿಗೆ ಪರಿಹಾರವನ್ನು ಮಾರುಕಟ್ಟೆಯ ಬೆಲೆ ಅಥವಾ ಅವನ ಪುನರ್ವಸತಿಗೆ ಪೂರಕವಾಗುವಷ್ಟು ಪರಿಹಾರ ಕೊಡಬೇಕು ಮತ್ತು ಆ ನಿರ್ಧಾರವನ್ನು ರೈತನ ಆಯ್ಕೆಗೆ ಬಿಡಬೇಕು.

(ಋ) ಫಲವತ್ತಾದ ಭೂಮಿಯನ್ನು ವಿಶೇಷ ವಲಯಕ್ಕೆ ಆಯ್ಕೆ ಮಾಡಕೂಡದು.

(ೠ) ಈ ವಲಯಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಯಾವುದೇ ಕಾರ್ಮಿಕ ಕಾನೂನುಗಳಿಂದ ವಂಚಿತರಾಗಲು ಅವಕಾಶ ನೀಡಬಾರದು.

(ಎ) ಈ ವಲಯಗಳಲ್ಲಿ ಸೃಷ್ಟಿಯಾಗುವ ಉದ್ಯೋಗದ ಬಹುಪಾಲನ್ನು ಆಯಾ ಪ್ರದೇಶದ ಜನರಿಗೆ ಕೊಡಬೇಕು.

(ಏ) ವಲಯಕ್ಕಾಗಿ ಭೂಮಿಯನ್ನು ಮಾರಕೂಡದು, ಹಂಗಾಮಿಯಾಗಿ ಉಪಯೋಗಕ್ಕೆ ನೀಡಬೇಕು.

ವಿಶೇಷ ಆರ್ಥಿಕ ವಲಯಗಳು ಹೊಸ ವಿವಾದದ ಅಲೆಯನ್ನು, ಹೊಸ ಚಳುವಳಿಯನ್ನು, ಹುಟ್ಟುಹಾಕಿರುವುದು ಜಾಗತೀಕರಣದ ವಿರುದ್ಧ ಬೆಳೆಯುತ್ತಿರುವ ಪ್ರತಿಭಟನೆಯ ಒಂದು ಸ್ವರೂಪವಷ್ಟೆ ಎಂಬುದು ನಿರ್ವಿವಾದ.

ಮುರಳೀಧರ್
ವಕೀಲರು, ನಂ. ೮೩, ೫ನೇ ಕ್ರಾಸ್, ಮಲ್ಲೇಶ್ವರಂ ವೃತ್ತ, ಬೆಂಗಳೂರು- ೩

---

ಒಂದು ತರಹ ಅನಪೇಕ್ಷಿತ ಮತ್ತು ಬೀಭತ್ಸವಾದ 'ತ್ರಿಲ್' ನೀಡುತ್ತಿರುವುದರಲ್ಲಿ ಭಾರತ ಮತ್ತು ಅಮೆರಿಕಾ ಸದಾ ಪೈಪೋಟಿಯಲ್ಲಿ ಇರುತ್ತವೆ ಮತ್ತು ಸಾಮಾನ್ಯವಾಗಿ ನಿರಾಶೆಗೊಳಿಸುವುದಿಲ್ಲ. ಏಪ್ರಿಲ್ ಕಡೆಯಲ್ಲಿ ಬಂದ ಎರಡು ಸಮಾಚಾರಗಳನ್ನು ನೋಡಿ; ಒಂದು, ವರ್ಜೀನಿಯಾ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಚೋ ಶೋಂಗ್ – ಹುಯಿ ಮೂವತ್ತೆರಡು ಮಂದಿಯನ್ನು ಕೊಂದಿದ್ದು; ಇನ್ನೊಂದು, ಬಾಬೂಭಾಯಿ ಕಟಾರಾ ಒಂದು 'ಕಚಡ' ಕೆಲಸವನ್ನು ಮಾಡಹೋಗಿ ಕೊನೆಗೂ ಸಿಕ್ಕಿಹಾಕಿಕೊಂಡಿದ್ದು. ಹೇಸಿಗೆ ಬರಿಸುವಷ್ಟು ಶ್ರೀಮಂತಿಕೆಯ ನಡುವೆ, ದೋಚಿಹೋಗುವಷ್ಟು ಅಸಮಾನತೆ, ಅವಹೇಳನ ಮತ್ತು ಸಾಮಾಜಿಕ ದೌರ್ಜನ್ಯ ಅಮೆರಿಕಾದಲ್ಲಿ ದಟ್ಟವಾಗಿ ಹಬ್ಬಿರುವುದು ಚೋ ಮಾಡಿದ ಕೆಲಸಕ್ಕೆ ಕಾರಣ. ಅವನು ಕೇವಲ ಮಾನಸಿಕ ಅಸ್ವಸ್ಥನಲ್ಲ. ಅಮೆರಿಕಾದ ಮಾಧ್ಯಮಗಳವರು ಇದನ್ನೊಪ್ಪದಿರಲು ಯಥಾಪ್ರಕಾರ ಏನೇನೋ ಕತೆಗಳನ್ನು, ವಿವರಣೆಗಳನ್ನು, ಹೊಸೆಯುತ್ತಿದ್ದಾರೆ. ಇನ್ನು, ನಮ್ಮ ದೇಶಪ್ರೇಮಿ - ಸುಸಂಸ್ಕೃತ - ಹಿಂದೂ ಸಮಾಜೋದ್ಧಾರಕ ಪಕ್ಷದ ಕಟಾರಾ ಎಷ್ಟು ಹಣ ಪಡೆದು ಎಷ್ಟು ಮಹಿಳೆಯರನ್ನು ಕದ್ದು ಹೊರದೇಶಗಳಿಗೆ ಕರೆದುಕೊಂಡು ಹೋಗಿದ್ದಾರೆಂಬುದನ್ನು ಊಹಿಸಬಹುದು. ರಾಜನಾಥ ಸಿಂಗ್, ಅಶೋಕ ಸಿಂಘಲ್ ಮತ್ತು ಸುದರ್ಶನ ತಮ್ಮ 'ಸಂಸ್ಕೃತಿ' ಪ್ರಣಾಲಿಕೆಯನ್ನು ದೇಶದ ಮುಂದೆ ಬಹಿರಂಗಗೊಳಿಸಿರುವುದಕ್ಕೆ ಅಭಿನಂದನಾರ್ಹರಲ್ಲವೆ !

– ಜಿ. ಆರ್.





ಡಾ|| ಸಂಗಮೇಶ ಸವದತ್ತಿಮಠ

# ವಿದೇಶಿ ವಿಶ್ವವಿದ್ಯಾಲಯಗಳ ಆಗಮನ: ಬೌದ್ಧಿಕ ವಸಾಹತುಶಾಹಿಗೆ ಆಹ್ವಾನ

**ಈ**ಚೆಗೆ ಅಂದರೆ ನವೆಂಬರ್ ೧೩ರಿಂದ ೧೬ರವರೆಗೆ ಜಗತ್ತಿನಲ್ಲೆಲ್ಲ 'ಶಿಕ್ಷಣ ಸಪ್ತಾಹ'ವನ್ನು ಆಚರಿಸಲಾಯಿತು. ಹೊಸ ತಾಂತ್ರಿಕ ಶಿಕ್ಷಣದಿಂದಾಗಿ ಸಾಂಪ್ರದಾಯಿಕ ಪದ್ಧತಿಗಳು ಬದಲಾಗಿ ಸಾರಿಗೆ ಸಂಪರ್ಕಗಳ ಅತಿ ಅನುಕೂಲಕರ ವ್ಯವಸ್ಥೆಯಿಂದಾಗಿ ರಾಜ್ಯ, ರಾಷ್ಟ್ರ ಕಲ್ಪನೆಗಿಂತ ಜಾಗತಿಕ ಕಲ್ಪನೆ ಹೆಚ್ಚು ಹೆಚ್ಚು ಹತ್ತಿರವಾಗುತ್ತಲಿದೆ. ಜಾಗತೀಕರಣ, ಖಾಸಗೀಕರಣಗಳಿಂದಾಗಿ ಶಿಕ್ಷಣದ ಗುಣಮಟ್ಟ ಸ್ಪರ್ಧಾತ್ಮಕತೆ ಹೆಚ್ಚತೊಡಗಿದೆ. ಭವಿಷ್ಯದಲ್ಲಿ ತರುಣ ಪೀಳಿಗೆಯವರು ಯಾವ ಜಾತಿಯವರೇ ಆಗಿರಲಿ ಯಾವ ರಾಷ್ಟ್ರದವರೇ ಇರಲಿ ಯಾವ ಭಾಷೆಯವರೇ ಇರಲಿ ಜಾಗತೀಕರಣ ಮತ್ತು ಖಾಸಗೀಕರಣಗಳ ಸವಾಲುಗಳನ್ನು ಎದುರಿಸಲೇಬೇಕಾದ ಅನಿವಾರ್ಯತೆ ಇದೆ.

ಇಂಥ ಸಂದರ್ಭದಲ್ಲಿ ಭಾರತವನ್ನು ವಿದೇಶಿ ವಿಶ್ವವಿದ್ಯಾಲಯಗಳು ಪ್ರವೇಶಿಸಲಿವೆ. ಈ ನಿಟ್ಟಿನಲ್ಲಿ ಜನವರಿ ೨೦೦೫ರಲ್ಲಿ ಪ್ರೊ|| ಸಿ.ಎನ್.ಆರ್.ರಾವ್ ಅವರ ಅಧ್ಯಕ್ಷತೆಯಲ್ಲಿ ಭಾರತ ಸರಕಾರವು ನೇಮಿಸಿದ್ದ ಉನ್ನತಮಟ್ಟದ ಸಮಿತಿ ತನ್ನ ವರದಿಯನ್ನು ಸಲ್ಲಿಸಿದೆ. ಅದರ ಆಧಾರದಿಂದ ಕರಡು ಮಸೂದೆಯೊಂದು ಇಷ್ಟರಲ್ಲೇ ಲೋಕಸಭೆಯಲ್ಲಿ ಮಂಡಿತವಾಗಲಿದೆ. ೧೯೫೬ರಿಂದ ಡೀಮ್ಡ್ ವಿಶ್ವವಿದ್ಯಾನಿಲಯಗಳೆಂದು ಉನ್ನತ ಖಾಸಗಿ ಸಂಶೋಧನ ಸಂಸ್ಥೆಗಳನ್ನು ಯು.ಜಿ.ಸಿ. ಮಾನ್ಯಮಾಡುತ್ತ ಬಂದಿದೆ. ಈಗಾಗಲೆ ಇಂಥ ೧೦೫ಕ್ಕೂ ಹೆಚ್ಚು ಡೀಮ್ಡ್ ವಿಶ್ವವಿದ್ಯಾಲಯಗಳಿವೆ. ವಿದೇಶಿ ವಿಶ್ವವಿದ್ಯಾಲಯಗಳು ಕೂಡ ಭಾರತದಲ್ಲಿ ತಮ್ಮ ಶೈಕ್ಷಣಿಕ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳಲು ಹಾತೊರೆಯುತ್ತಿವೆ. ಭಾರತದಲ್ಲಿ ಅತ್ಯುತ್ತಮ ಮಾನವ ಮತ್ತು ಇತರ ಸಂಪನ್ಮೂಲಗಳು ಅತಿ ಕಡಿಮೆ ವೆಚ್ಚದಲ್ಲಿ ದೊರೆಯುತ್ತಿರುವುದು ಅವುಗಳಿಗೆ ಮುಖ್ಯ ಆಕರ್ಷಣೆಯಾಗಿದೆ. ಜಗತ್ತಿನ ಅತಿ ಶ್ರೇಷ್ಠ ವಿದೇಶಿ ವಿಶ್ವವಿದ್ಯಾಲಯಗಳಾದ ಹಾರ್ವರ್ಡ್, ಯೇಲ್, ಸ್ಟ್ಯಾನ್ ಫರ್ಡ್, ಮೆಲೊನ್ ಮುಂತಾದವು ಈ ಸಾಲಿನಲ್ಲಿ ನಿಂತಿವೆ. ಅಷ್ಟೇ ಅಲ್ಲ, ಅಮೆರಿಕಾ ದೇಶದ ೨೦ಕ್ಕೂ ಹೆಚ್ಚು ಸಂಖ್ಯೆಯ ವಿಶ್ವವಿದ್ಯಾಲಯಗಳು 'ಅಮೃತಾ ವಿಶ್ವವಿದ್ಯಾಪೀಠಂ' ಸಂಸ್ಥೆಯ ಪಾಲುದಾರಿಕೆಯಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲು ತುದಿಗಾಲ ಮೇಲೆ ನಿಂತಿವೆ. ಪೂರ್ವಭಾವಿ ಕಾರ್ಯಗಳೂ ಬಹುತೇಕ ಅಂತಿಮ ಹಂತದಲ್ಲಿವೆ.

ವಿದೇಶಿ ವಿಶ್ವವಿದ್ಯಾಲಯಗಳ ಭಾರತ ಪ್ರವೇಶವನ್ನು ತಡೆಯುವುದು ಸಾಧ್ಯವಿಲ್ಲ. ಭಾರತದ ಪ್ರತಿಭೆಗಳು ವಿದೇಶಿ ವಿಶ್ವವಿದ್ಯಾಲಯಗಳ ಪ್ರವೇಶದ ದಾರಿಯನ್ನು ಕಾತುರದಿಂದ ನಿರೀಕ್ಷಿಸುತ್ತಿವೆ. ಅದಕ್ಕೆ ಮುಖ್ಯವಾದ ಕಾರಣವೆಂದರೆ ಸದ್ಯದ ಭಾರತೀಯ ವಿಶ್ವವಿದ್ಯಾಲಯಗಳು ರಾಜಕಾರಣಿಗಳ ಹೊಲಸು ಕೈಗಳ ಹಿಡಿತದಲ್ಲಿ ಇರುವವರೆಗೂ ಭಾರತದ ವಿಶ್ವವಿದ್ಯಾಲಯಗಳು ವಿದೇಶಿ ವಿಶ್ವವಿದ್ಯಾಲಯಗಳ ಉನ್ನತ ಗುಣಮಟ್ಟವನ್ನು ಹೊಂದಲು ಸಾಧ್ಯವಿಲ್ಲ ಎಂಬುದು ಅವರಿಗೆ ಮನವರಿಕೆಯಾಗಿದೆ. ಇದಕ್ಕಾಗಿಯೇ ಭಾರತದ ಪ್ರತಿಭಾನ್ವಿತರು ಯಾವಾಗಲೂ ವಿದೇಶಿ ವಿಶ್ವವಿದ್ಯಾಲಯಗಳಿಗೆ ಶಿಕ್ಷಣಕ್ಕಾಗಿ ವಲಸೆ ಹೋಗುತ್ತಿದ್ದಾರೆ; ಅಷ್ಟೇ ಅಲ್ಲ, ಶಿಕ್ಷಣ ಪಡೆದು ಅಲ್ಲಿಯೇ ಉದ್ಯೋಗವನ್ನೂ ಪಡೆಯುತ್ತಿದ್ದಾರೆ. ಉದಾಹರಣೆಗೆ, ಅಮೆರಿಕಾ ದೇಶವೊಂದಕ್ಕೇ ಪ್ರತಿವರ್ಷ ೮೦ ಸಾವಿರಕ್ಕೂ ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳು ಕಲಿಯಲು (೨೦೦೪-೦೫ರಲ್ಲಿ ೮೦,೪೬೬ ವಿದ್ಯಾರ್ಥಿಗಳು ಹೋಗಿದ್ದಾರೆ) ಹೋಗುತ್ತಿದ್ದಾರೆ. ಇನ್ನು ಇಂಗ್ಲೆಂಡ್, ಫ್ರಾನ್ಸ್, ಚೀನಾ, ಜಪಾನ್, ಜರ್ಮನಿ ಮುಂತಾದ ದೇಶಗಳಿಗೆ ಹೋಗುವವರ ಸಂಖ್ಯೆಯೂ ಸಾಕಷ್ಟು ಇದೆ. ಹೀಗೆ ವರ್ಷಂಪ್ರತಿ ಲಕ್ಷಾಂತರ ಪ್ರತಿಭೆಗಳು ವಿದೇಶಗಳಿಗೆ ಹೋದುದರಿಂದಲೇ ಭಾರತದ ಅಭಿವೃದ್ಧಿಯ ಗತಿ ಕುಂಠಿತವಾಗುತ್ತಿದೆ. ಜೊತೆಗೆ ಭಾರತದಲ್ಲಿನ ಭ್ರಷ್ಟಾಚಾರ ಪ್ರತಿಭಾವಂತರಿಗೆ ಮುಂದೆ ಹೋಗಲು ಅಡ್ಡಿಯಾಗಿದೆ. ಅವರು ಬ್ಯಾಂಕುಗಳಲ್ಲಿ ಸಾಲವನ್ನು ಮಾಡಿಯಾದರೂ ವಿದೇಶಗಳಲ್ಲಿ ದೊರೆಯುವ ಉನ್ನತ ಗುಣಮಟ್ಟದ ಶಿಕ್ಷಣವನ್ನು ಪಡೆಯಲು ಬಯಸುತ್ತಾರೆ. ಅವರು ವಿದೇಶದಲ್ಲಿ ಪದವಿ ಗಳಿಸಿದರೆ ಜಗತ್ತಿನ ಯಾವ ಪ್ರದೇಶದಲ್ಲೂ

---

ವಿದೇಶಿ ವಿಶ್ವವಿದ್ಯಾಲಯಗಳು ಭಾರತವನ್ನು ಪ್ರವೇಶಿಸಿದಲ್ಲಿ ಭಾರತದ ವಿಶ್ವವಿದ್ಯಾಲಯಗಳಿಗೆ ಗುಣಮಟ್ಟದ ಶಿಕ್ಷಣಕ್ಕೆ ಸಂಬಂಧಿಸಿದ ಸವಾಲುಗಳು ಭಾರತೀಯ ವಿಶ್ವವಿದ್ಯಾಲಯಗಳ ಬಾಗಿಲಿಗೇ ಬಂದು ನಿಲ್ಲುತ್ತವೆ. ಮೀಸಲಾತಿ, ಪ್ರಾದೇಶಿಕತೆ, ರಾಜಕಾರಣಿಗಳ ಹಸ್ತಕ್ಷೇಪ, ಶಿಕ್ಷಣಕ್ಷೇತ್ರದಲ್ಲಿ ಭ್ರಷ್ಟಾಚಾರ ಇವು ಭಾರತೀಯ ವಿಶ್ವವಿದ್ಯಾಲಯಗಳಿಗೆ ಅಂಟಿಕೊಂಡಿರುವ ರೋಗಗಳಾಗಿವೆ. ಆದ್ದರಿಂದ ಭಾರತೀಯ ವಿಶ್ವವಿದ್ಯಾಲಯಗಳು ವಿದೇಶಿ ವಿಶ್ವವಿದ್ಯಾಲಯಗಳೊಂದಿಗೆ ಗುಣಮಟ್ಟದ ವಿಷಯದಲ್ಲಿ ಸ್ಪರ್ಧಿಸಲಾರವು. ಭಾರತದಲ್ಲಿ ಶಿಕ್ಷಣ ಪಡೆದ ಪ್ರತಿಭೆಗಳು ಇಂಗ್ಲಿಷ್ ಭಾಷಾ ಕೊರತೆ, ಗುಂಪಾಗಿ ಕೆಲಸ ಮಾಡುವ ಪ್ರವೃತ್ತಿಯ ಕೊರತೆ, ತಾಂತ್ರಿಕ ಜ್ಞಾನದ ಕೊರತೆ, ಆರ್ಥಿಕ ಕೊರತೆ ಮುಂತಾದ ಕೊರತೆಗಳಿಂದಾಗಿ ನಮ್ಮ ನಾಡಿನಲ್ಲಿಯೇ ಅವು ಬೀಡುಬಿಟ್ಟಿದ್ದರೂ ಭಾರತೀಯ ಪ್ರತಿಭೆಗಳಿಗೆ ವಿದೇಶಿ ವಿಶ್ವವಿದ್ಯಾಲಯಗಳ ಶಿಕ್ಷಣ ಪಡೆಯುವುದು ಸುಲಭವೆನಿಸುವುದಿಲ್ಲ. ಆದ್ದರಿಂದ ಭಾರತದಲ್ಲಿ ವಿದೇಶಿ ವಿಶ್ವವಿದ್ಯಾಲಯಗಳು ಪ್ರವೇಶವಾಗುತ್ತಿರುವ ಈ ಕಾಲದಲ್ಲಿ ಭಾರತೀಯ ವಿಶ್ವವಿದ್ಯಾಲಯಗಳು ಸಂಪೂರ್ಣ ಪುನಾರಚನೆಗೊಳ್ಳಬೇಕಾದ ಅವಶ್ಯಕತೆ ಇದೆ.

ತಮ್ಮ ಪ್ರತಿಭೆಗೆ ತಕ್ಕುದಾದ ಕೆಲಸ ಸಿಕ್ಕೇ ಸಿಗುವುದೆಂಬ ಭರವಸೆಯನ್ನುಳ್ಳವರಾಗಿದ್ದಾರೆ. ಭಾರತದಲ್ಲಿ ಎಷ್ಟೇ ಪ್ರತಿಭಾವಂತರಿದ್ದರೂ ಒಳ್ಳೆಯ ಕೆಲಸ ಸಿಗಬೇಕಾದರೆ ರಾಜಕಾರಣಿಯ ಕೃಪೆ, ಹಣ, ವಶೀಲಿಗಳನ್ನು ಅವಲಂಬಿಸಬೇಕಾಗುತ್ತದೆ. ಮೇಲಾಗಿ ನೇಮಕಾತಿ ವರ್ಷಗಟ್ಟಲೆ ನಡೆದು ಪ್ರತಿಭಾವಂತನು ಆ ದೀರ್ಘ ಅವಧಿಯಲ್ಲಿ ಕೆಲಸಕ್ಕಾಗಿ ಹಾತೊರೆಯ ತೊಡಗುತ್ತಾನೆ. ಆ ಮಧ್ಯಾವಧಿಯಲ್ಲಿ ವಿದೇಶಗಳಿಂದ ಅವನಿಗೆ ಅನೇಕ ಅವಕಾಶಗಳು ಬಾಗಿಲಿಗೆ ಬರುತ್ತವೆ. ಖಾಸಗಿ ಕಂಪನಿಗಳೂ ಕೂಡ ತಾ ಮೇಲು ನೀ ಮೇಲು ಎಂಬಂತೆ ಪ್ರತಿಭೆಗಳನ್ನು ಸಾಕಷ್ಟು ಮುಂಚಿತವಾಗಿಯೇ ಅಂದರೆ ಅವನು ಕಾಲೇಜಿನಲ್ಲಿ ಕಲಿಯುವಾಗಲೇ ಗುರುತಿಸಿ ಮೊದಲೇ ಅವನನ್ನು ಆಯ್ಕೆ ಮಾಡಿ ಕಾಲೇಜು ಮುಗಿಸಿದ ಮರುದಿನವೇ ಪರೀಕ್ಷಾ ಪರಿಣಾಮಕ್ಕಾಗಿಯೂ ಕಾಯದೆ ಕೆಲಸಕ್ಕೆ ಹಾಜರಾಗಲು ತಿಳಿಸುತ್ತವೆ. ತಮ್ಮಲ್ಲಿ ತಕ್ಷಣಕ್ಕೆ ಕೆಲಸವಿಲ್ಲದಿದ್ದರೂ ಪ್ರತಿಭಾವಂತರನ್ನು ಆಕರ್ಷಕ ಸಂಬಳ ಭತ್ಯೆ ನೀಡಿ ಅವರು ತಮ್ಮಲ್ಲಿಯೇ ಉಳಿಯುವಂತೆ ನೋಡಿಕೊಳ್ಳುತ್ತಾರೆ. ಖಾಸಗಿ ಕಂಪನಿಗಳು ಈ ಪರಿಯಾಗಿ ಪ್ರತಿಭೆಗಳನ್ನು ಸೆಳೆಯುತ್ತಿರುವುದರಿಂದ ಸರಕಾರಿ, ಅರೆಸರಕಾರಿ, ವಿಶ್ವವಿದ್ಯಾಲಯಗಳು ಮತ್ತು ಇತರೆ ಕ್ಷೇತ್ರಗಳಲ್ಲಿ ಕೆಲಸ ಮಾಡಲು ದೊರೆಯುವವರು ಪ್ರತಿಭಾವಂತರಲ್ಲದ ಅಲಸಿಗಳು. ಅಂಥವರು ಸಂಸ್ಥೆಗಳಿಗೆ ಹೊರೆಯಾಗುತ್ತಾರೆ. ಅನುತ್ಪಾದಕ ಕ್ಷೇತ್ರದಲ್ಲಂತೂ ಇವರು ಏತಕ್ಕೂ ಪ್ರಯೋಜನವಿಲ್ಲ ಎನ್ನುವಂತಾಗುತ್ತಾರೆ. ಈಗಲೂ ಕೂಡ ಭಾರತದ ಅನೇಕ ವಿಶ್ವವಿದ್ಯಾಲಯಗಳಲ್ಲಿ ಹೊಸ ಮತ್ತು ಜಾಗತಿಕ ಗುಣಮಟ್ಟದ ಶಿಕ್ಷಣ ಇಲ್ಲದಿರುವುದರಿಂದ ಪ್ರತಿಭಾವಂತರು ರಾತ್ರಿ ಕಂಡ ಬಾವಿಯಲ್ಲಿ ಹಗಲು ಹೋಗಿ ಬೀಳಲು ಇಚ್ಛಿಸುವುದಿಲ್ಲ. ಇದನ್ನು ತಪ್ಪಿಸಲೆಂದೇ ಭಾರತ ಸರಕಾರ ವಿದೇಶಿ ವಿಶ್ವವಿದ್ಯಾಲಯಗಳಿಗೆ ಶಿಕ್ಷಣಕ್ಕಾಗಿ ತಮ್ಮ ಸಂಸ್ಥೆಗಳನ್ನು ಆರಂಭಿಸಲು ಅನುಮತಿ ನೀಡುವ ಯೋಜನೆಯನ್ನು ಅನಿವಾರ್ಯವಾಗಿ ಹಾಕಿಕೊಂಡಿದೆ. ಭಾರತದ ಪ್ರತಿಭೆಗಳು ವಿದೇಶಕ್ಕೆ ಹೋಗುವುದನ್ನು ತಡೆಯಲು ವಿದೇಶಿ ವಿಶ್ವವಿದ್ಯಾಲಯಗಳನ್ನೇ ಇಲ್ಲಿಗೆ ತರಿಸುವ ಒಂದು ವಿಶಿಷ್ಟ ಯೋಜನೆ ಇದಾಗಿದೆ.

ವಿದೇಶಿ ವಿಶ್ವವಿದ್ಯಾಲಯಗಳು ಭಾರತವನ್ನು ಪ್ರವೇಶಿಸಿದಲ್ಲಿ ಭಾರತದ ವಿಶ್ವವಿದ್ಯಾಲಯಗಳಿಗೆ ಗುಣಮಟ್ಟದ ಶಿಕ್ಷಣಕ್ಕೆ ಸಂಬಂಧಿಸಿದ ಸವಾಲುಗಳು ಭಾರತೀಯ ವಿಶ್ವವಿದ್ಯಾಲಯಗಳ ಬಾಗಿಲಿಗೇ ಬಂದು ನಿಲ್ಲುತ್ತವೆ. ಮೀಸಲಾತಿ, ಪ್ರಾದೇಶಿಕತೆ, ರಾಜಕಾರಣಿಗಳ ಹಸ್ತಕ್ಷೇಪ, ಶಿಕ್ಷಣಕ್ಷೇತ್ರದಲ್ಲಿ ಭ್ರಷ್ಟಾಚಾರ ಇವು ಭಾರತೀಯ ವಿಶ್ವವಿದ್ಯಾಲಯಗಳಿಗೆ ಅಂಟಿಕೊಂಡಿರುವ ರೋಗಗಳಾಗಿವೆ. ಆದ್ದರಿಂದ ಭಾರತೀಯ ವಿಶ್ವವಿದ್ಯಾಲಯಗಳು ವಿದೇಶಿ ವಿಶ್ವವಿದ್ಯಾಲಯಗಳೊಂದಿಗೆ ಗುಣಮಟ್ಟದ ವಿಷಯದಲ್ಲಿ ಸ್ಪರ್ಧಿಸಲಾರವು. ಭಾರತದಲ್ಲಿ ಶಿಕ್ಷಣ ಪಡೆದ ಪ್ರತಿಭೆಗಳು ಇಂಗ್ಲಿಷ್ ಭಾಷಾ ಕೊರತೆ, ಗುಂಪಾಗಿ ಕೆಲಸ ಮಾಡುವ ಪ್ರವೃತ್ತಿಯ ಕೊರತೆ, ತಾಂತ್ರಿಕ ಜ್ಞಾನದ ಕೊರತೆ, ಆರ್ಥಿಕ ಕೊರತೆ ಮುಂತಾದ ಕೊರತೆಗಳಿಂದಾಗಿ ನಮ್ಮ ನಾಡಿನಲ್ಲಿಯೇ ಅವು ಬೀಡುಬಿಟ್ಟಿದ್ದರೂ ಭಾರತೀಯ ಪ್ರತಿಭೆಗಳಿಗೆ ವಿದೇಶಿ ವಿಶ್ವವಿದ್ಯಾಲಯಗಳ ಶಿಕ್ಷಣ ಪಡೆಯುವುದು ಸುಲಭವೆನಿಸುವುದಿಲ್ಲ. ಆದ್ದರಿಂದ ಭಾರತದಲ್ಲಿ ವಿದೇಶಿ ವಿಶ್ವವಿದ್ಯಾಲಯಗಳು ಪ್ರವೇಶವಾಗುತ್ತಿರುವ ಈ ಕಾಲದಲ್ಲಿ ಭಾರತೀಯ ವಿಶ್ವವಿದ್ಯಾಲಯಗಳು ಸಂಪೂರ್ಣ ಪುನಾರಚನೆಗೊಳ್ಳಬೇಕಾದ ಅವಶ್ಯಕತೆ ಇದೆ. ಭಾರತೀಯ ವಿಶ್ವವಿದ್ಯಾಲಯಗಳು ಮೊದಲು ರಾಜಕಾರಣಿಗಳ ಹಸ್ತಕ್ಷೇಪವನ್ನು ಸಂಪೂರ್ಣವಾಗಿ ತೊಡೆದುಹಾಕಬೇಕು. ಇಂದು ಉನ್ನತ ಶಿಕ್ಷಣ ಹದಗೆಡುತ್ತಾ ಸಾಗಿರುವುದಕ್ಕೆ ರಾಜಕಾರಣಿಗಳ ಹಸ್ತಕ್ಷೇಪ ಬಹುಮುಖ್ಯ ಕಾರಣವಾಗಿದೆ. ರಾಜಕಾರಣಿಗಳು ಪೋಷಿಸುತ್ತಿರುವ ಜಾತೀಯತೆ, ಸ್ವಜನಪಕ್ಷಪಾತ, ಗುಂಪುಗಾರಿಕೆ, ಭ್ರಷ್ಟಾಚಾರ ಎಲ್ಲವೂ ಉನ್ನತ ಶಿಕ್ಷಣಕ್ಷೇತ್ರವನ್ನು ಪ್ರವೇಶಿಸಿವೆ. ಬೆಂಗಳೂರು ವಿಶ್ವವಿದ್ಯಾಲಯದ ಘಟನೆಗಳು ಇದಕ್ಕೆ ದಿಕ್ಸೂಚಿಯಾಗಿವೆ. ಉನ್ನತಮಟ್ಟದ ಶೈಕ್ಷಣಿಕ ಮಂಡಲಿಗಳಲ್ಲಿ ನೇರವಾಗಿ ರಾಜಕಾರಣಿಗಳು ಇಲ್ಲವೆ ಅವರ ಚೇಲಾಗಳು ಇರುವಂತೆ ನೋಡಿಕೊಳ್ಳಲು ಶಾಸನಗಳನ್ನೇ ಬದಲಿಸಲೂ ಸರಕಾರ ಮುಂದಾಗಿದ್ದುದು ರಾಜಕಾರಣಿಗಳ ಅತಿ ಹೇಯ ಕಾರ್ಯವಾಗಿತ್ತು. ಹೊಸದಾಗಿ ರೂಪಿತಗೊಂಡು ಜಾರಿಗೆ ಬಂದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯ ಶಾಸನಗಳು ವಿಶ್ವವಿದ್ಯಾಲಯಗಳ ಶೈಕ್ಷಣಿಕ ಪರಮಾಧಿಕಾರವನ್ನು ಸಂಪೂರ್ಣವಾಗಿ ಕಸಿದುಕೊಂಡಿವೆ. ವಿಶ್ವವಿದ್ಯಾಲಯಗಳಲ್ಲಿ ಪ್ರಜಾಪ್ರಭುತ್ವವು ಸರ್ವನಾಶವಾಗಿದೆ. ಕುಲಪತಿಗಳು ಸರಕಾರದ ರಾಯಭಾರಿಗಳಾಗಿ ಕೆಲಸ ಮಾಡಬೇಕಾದ ಸ್ಥಿತಿ ಇದೆ. ರಾಜಕಾರಣಿಗಳ ಕೈವಾಡ ಉನ್ನತ ಶಿಕ್ಷಣದಲ್ಲಿ ಎಷ್ಟು ದೂರ ಹೋಗಬಹುದು ಎಂಬುದಕ್ಕೆ ಒಬ್ಬ ಕುಲಪತಿಯನ್ನು ನೇಮಿಸಲು ನಡೆಯುವ ಕಸರತ್ತು ನೋಡಬೇಕು. ರಾಜಕಾರಣಿಗಳ ಕೃಪಾಕಟಾಕ್ಷದಿಂದ ಬರುವ ಕುಲಪತಿಯಾಗಲಿ, ಸಿಂಡಿಕೇಟ್, ಅಕಾಡೆಮಿಕ್ ಕೌನ್ಸಿಲ್ ಸದಸ್ಯರಾಗಲಿ ನೇಮಿಸಿದವರ ಋಣವನ್ನು ತೀರಿಸದೆ ಇರಲು ಸಾಧ್ಯವೇ ?

ವಿದೇಶಗಳಲ್ಲಿ ಒಬ್ಬೊಬ್ಬ ಖಾಸಗಿ ಸಿರಿವಂತ ವ್ಯಕ್ತಿಯೇ ಒಂದೊಂದು ವಿಶ್ವವಿದ್ಯಾಲಯ ನಡೆಸುವವರಿದ್ದಾರೆ. ಒಂದೊಂದು ಕಂಪನಿಗಳೂ ನಡೆಸುತ್ತವೆ. ಅಲ್ಲಿ ಸರಕಾರಿ ಅನುದಾನಿತ ವಿಶ್ವವಿದ್ಯಾಲಯಗಳಿಗೂ ಖಾಸಗಿ ವಿಶ್ವವಿದ್ಯಾಲಯಗಳಿಗೂ ಗುಣಮಟ್ಟದ ವಿಷಯದಲ್ಲಿ ಸಾಕಷ್ಟು ಪೈಪೋಟಿ ಇದೆ. ಅಲ್ಲಿ ರಾಜಕಾರಣಿಗಳ ಹಸ್ತಕ್ಷೇಪ ಇಲ್ಲವೆನ್ನುವಷ್ಟು ಕಡಮೆ. ನಮ್ಮ ದೇಶವನ್ನು ಆಳುತ್ತಿರುವ ನೆಹರು ಕುಟುಂಬದ ಪ್ರತಿಯೊಬ್ಬರೂ ವಿದೇಶಗಳಲ್ಲಿ ಶಿಕ್ಷಣ ಪಡೆದು ಬಂದಿರುವುದನ್ನಿಲ್ಲಿ ಸ್ಮರಿಸಬೇಕು.

ಗುಣಮಟ್ಟ ಬೇಕು ಎಂದರೆ ಭಾರತೀಯ ವಿಶ್ವವಿದ್ಯಾಲಯಗಳು ಸ್ವಾಯತ್ತ ಸಂಶೋಧನ ಸಂಸ್ಥೆಗಳಾಗಿ ಕೆಲಸ ಮಾಡಬೇಕು. ಶಿಕ್ಷಕರ ಆಯ್ಕೆ ಕೇವಲ ಕೆಲ ನಿಮಿಷಗಳ ಸಂದರ್ಶನದಿಂದ ಆಗಕೂಡದು. ಹಲವು ಹಂತದ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನಡೆಯಬೇಕು. ನಿರೀಕ್ಷೆಗೆ ತಕ್ಕಂತೆ ಕೆಲಸ ಮಾಡದ ಶಿಕ್ಷಕರನ್ನು ನಿರ್ದಾಕ್ಷಿಣ್ಯವಾಗಿ ಮನೆಗೆ ಕಳಿಸುವ ನಿಯಮ ಜಾರಿಗೆ ಬರಬೇಕು. ಉನ್ನತಮಟ್ಟದ ಸಂಶೋಧನೆಯಲ್ಲಿ ತೊಡಗುವವರಿಗೆ ಅಗ್ರ ಪ್ರಾಶಸ್ತ್ಯವಿರಬೇಕು. ಅಲ್ಲಿ ಮೀಸಲಾತಿ ಗೊಂದಲ, ಹಣಕಾಸಿನ ಕೊರತೆ ಎಳ್ಳಷ್ಟೂ ಇರಬಾರದು. ಶಿಕ್ಷಕರ ಕಾರ್ಯಗಳ ಮೌಲ್ಯಮಾಪನಕ್ಕೆ ಪರಿಣತರ ಪಡೆಯೇ ಇರಬೇಕು. ವಿಧಾನ, ನಿರ್ವಹಣೆಗಿಂತ ಫಲಿತಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಅವರಿಗೆ ನೀಡುವ ಸಂಭಾವನೆ ಅಂತಾರಾಷ್ಟ್ರೀಯ ಮಟ್ಟದ್ದಿರಬೇಕು. ಅವರಿಗೆ ಮುಕ್ತ ಸಂಶೋಧನ ವಾತಾವರಣವನ್ನು ನಿರ್ಮಿಸಿಕೊಳ್ಳುವಂತಿರಬೇಕು. ವಿಶ್ವವಿದ್ಯಾಲಯಗಳಿಗೆ ಹಣದ ಕೊರತೆ ಯಾವಾಗಲೂ ಉಂಟಾಗದಂತೆ ಸರಕಾರ ನಿಗಾವಹಿಸಬೇಕು. ಸರಕಾರವೂ ವಿಶ್ವವಿದ್ಯಾಲಯಗಳಿಗೆ ನೀಡುವ ಹಣ ಸರ್ಕಾರದ್ದಲ್ಲ. ಅದು ಪ್ರಜೆಗಳ ಹಣವಾಗಿರುತ್ತದೆ. ಅದು ಭಿಕ್ಷೆ ಅಲ್ಲ. ವಿಶ್ವವಿದ್ಯಾಲಯಗಳಿಗೆ ಸರಕಾರ ಕೋಟಿಗಟ್ಟಲೆ ಹಣ ನೀಡುತ್ತದೆ. ಆದ್ದರಿಂದ ಸರಕಾರ ವಿಶ್ವವಿದ್ಯಾಲಯಗಳ ಆಡಳಿತದಲ್ಲಿ ಏಕೆ ಇರಬಾರದು ಎಂಬ ತರ್ಕವನ್ನು ಮಾಡುವವರೂ ಇದ್ದಾರೆ. ಸರಕಾರವೇ ನಡೆಸುವ ಕಾಲೇಜುಗಳಿಗೂ ಖಾಸಗಿಯವರು ನಡೆಸುವ ಕಾಲೇಜುಗಳಿಗೂ ಗುಣಮಟ್ಟದಲ್ಲಿ ಎಷ್ಟೊಂದು ಅಂತರ ಇದೆ ಎಂಬುದನ್ನು ಜನತೆ ಚೆನ್ನಾಗಿ ಅರಿತಿದ್ದಾರೆ. ಉನ್ನತ ಶಿಕ್ಷಣಕ್ಕೆ ಖರ್ಚಾಗುವ ಹಣ ದೇಶದ ಪ್ರತಿಭೆಗಳನ್ನು ಬೆಳೆಸುತ್ತದೆ. ದೇಶಕ್ಕೆ ಅವರಿಂದ ಬೆಲೆ ಕಟ್ಟಲಾಗದ ಕಾಣಿಕೆ ಸಲ್ಲುತ್ತದೆ. ಸರಕಾರವನ್ನು ನಡೆಸುವವರ ಮರ್ಜಿಯ ಮೇಲೆ ಉನ್ನತ ಶಿಕ್ಷಣ ಅವಲಂಬಿತವಾದರೆ ಎಷ್ಟು ಹಾನಿ ತಟ್ಟಬಹುದೆಂಬುದಕ್ಕೆ ಇಂದಿನ ಭಾರತೀಯ ವಿಶ್ವವಿದ್ಯಾಲಯಗಳೇ ತೋರಿಸಿಕೊಡುತ್ತಿವೆ. ಪ್ರತಿಭಾ ಪಲಾಯನಕ್ಕಾಗಿ ಸರಕಾರ ಈಗ ಕಣ್ಣೀರು ಸುರಿಸಿದರೆ ಏನು ಪ್ರಯೋಜನ ? ಭಾರತದ ಪ್ರತಿಭೆಗಳು ಈಗಾಗಲೆ ವಿದೇಶಗಳಲ್ಲಿ ಅಮೂಲ್ಯ ಸೇವೆ ಸಲ್ಲಿಸುತ್ತಿವೆ. ಅವು ಹೋಗುವಂತೆ ಮಾಡಿದವರು ಯಾರು ? ನಮ್ಮನ್ನಾಳುವವರೇ ಅಲ್ಲವೆ ?

ಸದ್ಯ ಶಿಕ್ಷಣವು ರಾಜ್ಯವ್ಯಾಪ್ತಿಗೆ ಒಳಪಡುವುದರಿಂದ ರಾಜ್ಯಗಳಿಗೆ ಹೆಚ್ಚಿನ ಜವಾಬ್ದಾರಿ ಇದೆ. ಇಂಗ್ಲಿಷ್ ಭಾಷೆಯನ್ನು ಯಾವ ತರಗತಿಯಿಂದ ಕಲಿಸಬೇಕೆಂಬ ಬಗೆಗಿನ ಒಂದು ಸಾಮಾನ್ಯ ಸಂಗತಿಗೇ ನಮ್ಮಲ್ಲಿ ಕೋಲಾಹಲ ಉಂಟಾಗುವಂತಹ ಪರಿಸ್ಥಿತಿ ಇರುವಾಗ ಪ್ರತಿಭಾ ಪಲಾಯನ ತಡೆಯುವಂಥ ಉನ್ನತ ಶಿಕ್ಷಣದ ಆಮೂಲಾಗ್ರ ಪುನಾರಚನೆ ಆಗುವುದು ಸಾಧ್ಯವೇ ಎನಿಸುತ್ತದೆ. ರಾಜಕಾರಣಿಗಳ ಹಸ್ತಕ್ಷೇಪ ಇಲ್ಲದ, ಹಣದ ಕೊರತೆ ಎಳ್ಳಷ್ಟೂ ಇರದ, ಜಾತಿ, ಪ್ರದೇಶ, ಸ್ವಜನ ಪಕ್ಷಪಾತ ಇವಾವುವೂ ಇಲ್ಲದ, ಗುಣಮಟ್ಟದ ಶಿಕ್ಷಣಕ್ಕೇ ಪ್ರಾಶಸ್ತ್ಯವಿರುವ ವಿದೇಶಿ ವಿಶ್ವವಿದ್ಯಾಲಯಗಳು ಜಾಗತೀಕರಣ, ಖಾಸಗೀಕರಣಗಳ ಪ್ರಾಬಲ್ಯ ಹೆಚ್ಚುತ್ತಿರುವ ಇಂದಿನ ದಿನಮಾನದಲ್ಲಿ ಭಾರತವನ್ನು ನಿರಾಯಾಸವಾಗಿ ಪ್ರವೇಶಿಸಲಿವೆ. ಐ. ಟಿ. ದೊರೆಗಳ ಮೇಲೆ ಹೇಗೆ ಯಾರೂ ನಿರ್ಬಂಧ ಹೇರಲು ಸಾಧ್ಯವಿಲ್ಲವೋ ಹಾಗೆ ಯಾವ ಸರಕಾರಗಳೂ ನಿರ್ಬಂಧ ಹೇರಲು ಸಾಧ್ಯವಿಲ್ಲ. ನಮ್ಮ ವಿಶ್ವವಿದ್ಯಾಲಯಗಳು ವಿದೇಶಿ ವಿಶ್ವವಿದ್ಯಾಲಯಗಳನ್ನು ಗುಣಮಟ್ಟದಲ್ಲಿ ಮೀರಿಸುವಂತೆ ಬೆಳೆಯುವುದಕ್ಕೆ ಏನು ಮಾಡಬೇಕು ಎಂಬುದನ್ನು ಈಗ ನಾವು ಗಂಭೀರವಾಗಿ ಚಿಂತಿಸಬೇಕಾಗಿದೆ. ಕೇವಲ ವಿದೇಶಿ ವಿಶ್ವವಿದ್ಯಾಲಯಗಳನ್ನು ಬರಮಾಡಿಕೊಂಡರೆ ಮುಂದೊಂದು ದಿನ ನಾವು ಪರಿತಪಿಸಬೇಕಾಗುತ್ತದೆ. ಹರಿಶ್ಚಂದ್ರನನ್ನು ಸ್ಮಶಾನಕ್ಕೆ ತಳ್ಳಿ ನಂತರ ಅವನ ಹೆಂಡತಿ ಮಕ್ಕಳನ್ನು ಅವನ ನಾಡಿನಲ್ಲಿಯೇ ಹರಾಜು ಹಾಕಿದಂತೆ ನಮ್ಮ ಪ್ರತಿಭಾನ್ವಿತ ಪೀಳಿಗೆಯನ್ನು ವಿದೇಶಿ ವಿಶ್ವವಿದ್ಯಾಲಯಗಳು ನಮ್ಮ ನೆಲದಲ್ಲಿಯೇ ಹರಾಜು ಹಾಕಬಹುದೇನೋ! ಬ್ರಿಟಿಷರು ವ್ಯಾಪಾರದ ನೆವದಲ್ಲಿ ನಮ್ಮ ನೆಲಕ್ಕೆ ಬಂದು ನಮ್ಮನ್ನೇ ಆಳಿದ್ದು ಇತಿಹಾಸ. ವಿದೇಶಿ ವಿಶ್ವವಿದ್ಯಾಲಯಗಳು ನಮ್ಮ ಪ್ರತಿಭೆಗಳನ್ನು ಪ್ರತಿಭಾ ಸಾಮ್ರಾಜ್ಯದ ದೊರೆಗಳಾಗಿ ಆಳುವುದು ದೂರವಿಲ್ಲ. ಬೌದ್ಧಿಕ ವಸಾಹತುಶಾಹಿಗೆ ನಾವು ಅವಕಾಶ ನೀಡಬಾರದು.

ಈಗಾಗಲೆ ವಿದೇಶಿ ವಸ್ತುಗಳು ಭಾರತದಲ್ಲಿ ವಾಲ್‌ಮಾರ್ಟ್ ರೂಪದಲ್ಲಿ ಚಿಲ್ಲರೆ ಅಂಗಡಿಗಳಿಗೆ ದಾಳಿ ಇಡುತ್ತಿವೆ. ನಮ್ಮ ಬುದ್ಧಿವಂತ ಮಕ್ಕಳು ಅನಾಥರಾಗುವ ಮುನ್ನವೇ ಪ್ರಜೆಗಳು ಎಚ್ಚರಾಗದಿದ್ದಲ್ಲಿ ವಸಾಹತುಶಾಹಿ ಮತ್ತೊಮ್ಮೆ ಭಾರತವನ್ನು ಕಂಗೆಡಿಸುವುದರಲ್ಲಿ ಸಂದೇಹವಿಲ್ಲ.

**ಡಾ॥ ಸಂಗಮೇಶ ಸವದತ್ತಿಮಠ**
ಎಮರಿಟಸ್ ಪ್ರಾಧ್ಯಾಪಕ, ಕುಮಾರೇಶ್ವರ ನಗರ, ಬೆಳಗಾವಿ ರಸ್ತೆ, ಧಾರವಾಡ - ೮

# ಹಿಂಸೆ ಮತ್ತು ಆಕ್ರಮಣಶೀಲತೆಗಳಿಗೆ ಪರ್ಯಾಯವಿದೆ

ಬದುಕಿನ ಯಾಂತ್ರಿಕತೆ, ಜಡತ್ವ, ಅಪರಿಪೂರ್ಣತೆ ಮತ್ತು ಕ್ಲೇಶಗಳಿಂದ ಬಿಡುಗಡೆ ಹೊಂದಲು ಫೇರಿ ಮತ್ತು ಫ್ಯಾಂಟಸಿ ಕತೆಗಳು ಒಂದು ಸಾಧನವಾಗಿವೆ. ಫೇರಿ ಕತೆಗಳಲ್ಲಿ ನೈತಿಕತೆಯ ಪ್ರತಿಪಾದನೆ ಮತ್ತು ಆದರ್ಶವಾದಗಳಿಗೆ ಹೆಚ್ಚು ಒತ್ತು ನೀಡಿದರೂ ಎರಡೂ ಪ್ರಕಾರಗಳ ಸಾಹಿತ್ಯವು ಮನುಷ್ಯನ ಕೆಲವು ಮೂಲಭೂತ ಮತ್ತು ಆದರ್ಶಯುತ ಆಶೋತ್ತರಗಳನ್ನು ಪ್ರತಿಬಿಂಬಿಸುತ್ತವೆ. ಜೊತೆಯಲ್ಲಿಯೇ ಅವನ ಆಯಾ ಕಾಲದ ಶೋಚನೀಯ ಅವಸ್ಥೆಗೆ ಕಾರಣಗಳೇನು ಎಂಬುದನ್ನು ವಿಶ್ಲೇಷಿಸಲು ಯತ್ನಿಸುತ್ತವೆ.

ಫ್ಯಾಂಟಸಿ ಕತೆಯ ಲಕ್ಷಣಗಳನ್ನು ಗುರುತಿಸುವಾಗ ಅದು ವಾಸ್ತವವಾದಿ ಕತೆಗಿಂತ ಹೇಗೆ ಭಿನ್ನವಾಗಿರುತ್ತದೆ ಎಂಬುದನ್ನು ನೋಡಬಹುದು. ಈ ಭಿನ್ನತೆ ಕೃತಿಯ ಎಲ್ಲ ಆಯಾಮಗಳಲ್ಲೂ ವ್ಯಕ್ತವಾಗುತ್ತದೆ. ಲೇಖಕನು ಸೃಷ್ಟಿಸುವ ಕಥಾನಕ ಪ್ರಪಂಚದ ನಿಯಮಗಳು, ಸನ್ನಿವೇಶ, ಪ್ರಮಾಣ ಮತ್ತು ಸಂಬಂಧಗಳು ಚಮತ್ಕಾರಪೂರ್ಣವಾಗಿರುತ್ತವೆ. ಓದುಗನು ಇವೆಲ್ಲವುಗಳನ್ನು ಒಪ್ಪಿಕೊಂಡು ತನ್ನ ವಾಸ್ತವಿಕ ಪ್ರಜ್ಞೆಯಿಂದ ಉದ್ಭವಿಸುವ ಸಂಶಯಗಳನ್ನು ಬದಿಗಿಟ್ಟು ಕಥಾನಕದ ಆಗುಹೋಗುಗಳಲ್ಲಿ ತೊಡಗಿಕೊಳ್ಳುವುದರಲ್ಲಿ ಫ್ಯಾಂಟಸಿ ಸಾರ್ಥಕತೆ ಪಡೆಯುತ್ತದೆ. ವ್ಯಾವಹಾರಿಕ ಕಠೋರಸತ್ಯಗಳ ನೆಲೆಯಲ್ಲಿಯೇ ಹೊಸ ಅನುಭವಗಳಿಗೂ ಎಡೆಮಾಡಿಕೊಡುತ್ತದೆ. ಎಲ್ಲರಿಗೂ ಚಿರಪರಿಚಿತವಾಗಿರುವ ಸಿಂಡರೆಲಾ, ಸ್ಲೀಪಿಂಗ್ ಬ್ಯೂಟಿ, ಆಲಿಸಸ್, ಅಡ್ವೆಂಚರ್ಸ್ ಇನ್ ದಿ ವಂಡರ್‌ಲ್ಯಾಂಡ್‌ಗಳಂತಹ ಪ್ರಖ್ಯಾತ ಕೃತಿಗಳು ಫೇರಿ-ಫ್ಯಾಂಟಸಿ ನೆಲೆಯಲ್ಲಿ ರಚಿತವಾಗಿರುವ ಕೃತಿಗಳೇ ಆಗಿವೆ.

**ಎಸ್. ಸುರೇಂದ್ರ**

'ಸ್ಟೇಟ್ಸ್‌ಮನ್' ಪತ್ರಿಕೆಯ ಜಂಟಿ ಸಂಪಾದಕರಾಗಿದ್ದ ಎಂ. ಬಿ. ಲಾಲ್ ತಮ್ಮ ಕೃತಿ 'ತ್ರೂ ದಿ ಈಗಲ್ಸ್ ಐ'ಅನ್ನು ಒಂದು ಫೇರಿ ಕತೆ ಎಂದು ಕರೆದಿದ್ದರೂ, ಅದರಲ್ಲಿ ಫ್ಯಾಂಟಸಿ ಶೈಲಿಯನ್ನೇ ಹೆಚ್ಚಾಗಿ ಅಳವಡಿಸಿಕೊಂಡಿದ್ದಾರೆ ಎನ್ನಬಹುದು. ತಾವು ಸೃಷ್ಟಿಸಿರುವ ಪಾತ್ರಗಳು ಮತ್ತು ಸನ್ನಿವೇಶಗಳ ಮೂಲಕ ಲಾಲ್ ಓದುಗರನ್ನು ರಂಜಿಸುವುದೇ ಅಲ್ಲದೆ ತೀವ್ರ ಚಿಂತನೆಗೂ ತೊಡಗಿಸುತ್ತಾರೆ. ಮೃದುಹಾಸ್ಯ, ವಿಡಂಬನೆ, ಸುಂದರ ಉಪಮೆಗಳು ಹಾಗೂ ದೃಷ್ಟಾಂತ ರೂಪಕಗಳು ಕಥಾವಸ್ತುವಿನ ಸೊಬಗನ್ನು ಹೆಚ್ಚಿಸಿವೆ.

ಬ್ರಿಟಿಷರ ಆಳ್ವಿಕೆಯ ಅಂತ್ಯಭಾಗದ, ಎಂದರೆ ೧೯೪೦ರ ದಶಕದ, ಆಗುಹೋಗುಗಳ ಹಿನ್ನೆಲೆಯಲ್ಲಿ ಹೆಣೆದಿರುವ 'ತ್ರೂ ದಿ ಈಗಲ್ಸ್ ಐ'ನ ಮುಖ್ಯ ಪಾತ್ರಗಳಾದ ನಕುಲ್ ಮತ್ತು ಮೇರಿ ಯುವ ಪ್ರೇಮಿಗಳು. ನಕುಲ್ ತನ್ನ ಪ್ರೇಯಸಿ ಮೇರಿಯೊಂದಿಗೆ ಕಾಲೇಜು ರಜೆಯ ನಿಮಿತ್ತ ವಿಹಾರಾರ್ಥವಾಗಿ ಕಾಶ್ಮೀರದ ಕಣಿವೆಯೊಂದರಲ್ಲಿ ಅಡ್ಡಾಡುತ್ತಿರುವಂತೆ ಕನಸು ಕಾಣುತ್ತಾನೆ. 'ನನ್ನನ್ನು ಹಿಂಬಾಲಿಸಿ' ಎಂಬ ಸಂದೇಶವುಳ್ಳ ಚೀಟಿಯೊಂದು ಎಲ್ಲಿಂದಲೋ ಗಾಳಿಯಲ್ಲಿ ತೇಲಿಬಂದು ಇವರ ಕೈಸೇರುತ್ತದೆ. ಆ ಕ್ಷಣದಿಂದ ಪ್ರಾರಂಭವಾಗುವ ಇವರಿಬ್ಬರ ಸಾಹಸಗಾಥೆ ರೋಚಕವಾಗಿದೆ. ಆ ಸಂದೇಶವನ್ನನುಸರಿಸಿ ನಕುಲ್ ಮತ್ತು ಮೇರಿ ತೀರ ಅಪರಿಚಿತವಾದ ನಿರ್ಜನ ಪ್ರದೇಶಗಳನ್ನು ತಲುಪುತ್ತಾರೆ. ಇಲ್ಲಿ ಯಾವುದೋ ನಿಗೂಢಶಕ್ತಿಯೊಂದು ಇವರ ಚಲನವಲನಗಳನ್ನು ನಿಯಂತ್ರಿಸುವಂತಿರುವ ಚಿತ್ರಣ ಕುತೂಹಲಕಾರಿಯಾಗಿದೆ. ಇದ್ದಕ್ಕಿದ್ದಂತೆ ಹದ್ದಿನಂತಿರುವ ದೈತ್ಯಪಕ್ಷಿಯೊಂದು ನಕುಲ್ ಮತ್ತು ಮೇರಿ ಇಬ್ಬರನ್ನೂ ತನ್ನ ಕಾಲುಗಳಿಂದ ಹಿಡಿದು ಮಂಜುಗಟ್ಟಿದ ಪರ್ವತಶ್ರೇಣಿಗಳು ಕಣಿವೆ ಕೊತ್ತಲಗಳನ್ನು ಹಾಯ್ದು ಯಾವುದೋ ಕಂಡುಕೇಳರಿಯದ ಪ್ರದೇಶವೊಂದರಲ್ಲಿ ತಂದಿಳಿಸುತ್ತದೆ. ಇವರು ಇಲ್ಲಿ ಭೇಟಿಯಾಗುವ ಲೈಲಾ, ಮುನಿಮ್ ಮತ್ತಿತರ ಪಾತ್ರಗಳು, ಮುನಿಮ್‌ನ ಅಮಾನುಷ ಶಕ್ತಿಯ ವರ್ಣನೆ, ಅವರ ನಡುವಿನ ಸಂಭಾಷಣೆ, ಪತ್ತೆದಾರಿ ಶೈಲಿಯ ಘಟನೆಗಳು ಎಲ್ಲವೂ ಉಲ್ಲಾಸಮಯವಾಗಿವೆ. ನಕುಲ್ ಮತ್ತು ಮೇರಿ ಭೇಟಿಯಾಗುವ ಅತಿಮಾನುಷ ಶಕ್ತಿಯುಳ್ಳ ಮಾರು (ಮೈಂಡ್ ವಾಕರ್) ಕಾಲನೌಕೆಯಲ್ಲಿ ಭೂತ ವರ್ತಮಾನಗಳ ನಡುವೆ ಕ್ಷಣಮಾತ್ರದಲ್ಲಿ ಸಂಚರಿಸುವುದನ್ನು ನಿರೂಪಿಸುವ ವಿವರಗಳು ಎಚ್. ಜಿ. ವೆಲ್ಸ್‌ನ 'ಟೈಂ ಮಷೀನ್'ನ ಪ್ರಸಂಗಗಳನ್ನು ನೆನಪಿಸುವಂತಿವೆ. ಆನಂತರ ನಕುಲ್ ಮತ್ತು ಮೇರಿ ಬೊಂಬುಗಳಿಂದ ನಿರ್ಮಿಸಲಾದ ತೊಟ್ಟಿಲಿನಾಕಾರದ, ಪುಷ್ಪಕ ವಿಮಾನದಂತಿರುವ, ವಿಚಿತ್ರವೆನಿಸುವ ಆಕಾಶನೌಕೆಯಲ್ಲಿ ಭಾರತದ ಪಶ್ಚಿಮ ಭೂಭಾಗಗಳ ಮೇಲೆ ಹಾರುತ್ತ ಕಾಡುಮೇಡುಗಳು, ವಿಶಾಲ ಹುಲ್ಲುಗಾವಲುಗಳು ಮತ್ತು ಬೆಟ್ಟದ ಸಾಲುಗಳನ್ನು ದಾಟಿ ದೆಹಲಿ ತಲುಪುತ್ತಾರೆ. ವಿಚಿತ್ರವೆಂದರೆ ಈ ಆಕಾಶನೌಕೆಗೆ ಒಂದು ಪುಟ್ಟ ವಾನರನೇ ಪೈಲಟ್ ! ಸಾಕಷ್ಟು ದೂರ ಸಾಗಿದ ನಂತರ ರೈಸಿನ್ ಹಿಲ್, ಎಂದರೆ ಬ್ರಿಟಿಷರ ಪ್ರತಿನಿಧಿಯಾಗಿದ್ದ ವೈಸ್‌ರಾಯ್‌ನ ವಾಸಸ್ಥಳ ವೈಸ್‌ರೀಗಲ್ ಮೇಲೆ ಬಂದಿಳಿಯುತ್ತಾರೆ. ಅಲ್ಲಿ ಜರುಗುವ ಘಟನೆಗಳು, ವಸಾಹತುಶಾಹಿ ಅಧಿಕಾರಿಗಳ ಅಟ್ಟಹಾಸ, ನಕುಲ್ ಮತ್ತು ಮೇರಿ ಹುಟ್ಟುಹಾಕುವ ಅಲ್ಲೋಲಕಲ್ಲೋಲ, ಪೈಲಟ್ ವಾನರನ ಸಾಹಸಗಳು ಎಲ್ಲವೂ ಬ್ರಿಟಿಷರ ಆಡಳಿತದ ಕೊನೆಯ ದಿನಗಳ ಸೂಚಕಗಳಾಗಿವೆ.




ಬಹುಶಃ 'ತ್ರೂ ದಿ ಈಗಲ್ಸ್ ಐ'ನ ಬಹಳ ಮುಖ್ಯ ಹಾಗೂ ಸ್ವಾರಸ್ಯಕರವಾದ ೧೦ ಮತ್ತು ೧೧ನೇ ಅಧ್ಯಾಯಗಳಲ್ಲಿ, ನಕುಲ್ ಮತ್ತು ಮೇರಿ ಜ಼ರೀನಾ ಎಂಬುವವಳನ್ನು ಅನಿರೀಕ್ಷಿತವಾಗಿ ಭೇಟಿಯಾಗಿ ಅವಳೊಡನೆ ನಡೆಸುವ ಸಂಭಾಷಣೆಯಲ್ಲಿ 'ತ್ರೂ ದಿ ಈಗಲ್ಸ್ ಐ' ಸಾರಾಂಶವನ್ನು ಕಾಣಬಹುದು. ಜ಼ರೀನಾ ಸ್ವೀಡನ್‌ನಲ್ಲಿ ಹುಟ್ಟಿ ಇಂಗ್ಲೆಂಡಿನಲ್ಲಿ ನೆಲೆಸಿದವಳು. ಜ಼ರೀನಾ ಆಡುವ ಮಾತುಗಳ ಮೂಲಕ ಲಾಲ್ ಮನುಕುಲದ ಇತಿಹಾಸದುದ್ದಕ್ಕೂ ಹಲವಾರು ಸಮಾಜಗಳಲ್ಲಿ ತಾಂಡವವಾಡುತ್ತಿರುವ ಮಾನವನ ಹಿಂಸಾಪ್ರವೃತ್ತಿ, ನಾಗರಿಕತೆಯ ಹೆಸರಿನಲ್ಲಿ ಜರುಗುತ್ತಿರುವ ವಿಧ್ವಂಸಕ ಕೃತ್ಯಗಳು, ಆಡಳಿತ ವರ್ಗಗಳ ಅಧಿಕಾರಲಾಲಸೆ, ಚಕ್ರಾಧಿಪತ್ಯಗಳ ನಿರಂಕುಶ ಪ್ರಭುತ್ವ ಎಲ್ಲವನ್ನು ಮಾರ್ಮಿಕವಾಗಿ ಚರ್ಚಿಸುವ ಪರಿ ಲಾಲ್ ಅವರ ಪ್ರಗತಿಪರ ನಿಲುವುಗಳನ್ನು ಪ್ರತಿಬಿಂಬಿಸುತ್ತದೆ. ಇಂದಿಗೂ ನಾವು ಜಗತ್ತಿನ ಕೌತುಕಗಳೆಂದೇ ಕರೆಯುವ ಪಿರಮಿಡ್ಡುಗಳು, ಕೋಟೆ ಕೊತ್ತಲಗಳು, ಬೃಹತ್ ಚರ್ಚು-ಮಸೀದಿ-ದೇವಾಲಯಗಳು, ಅರಮನೆಗಳು ಇವೇ ಮೊದಲಾದವುಗಳ ನಿರ್ಮಾಣದ ಹಿಂದೆ ಸಹಸ್ರ ಸಹಸ್ರ ಗುಲಾಮರ ಬಲವಂತದ ದುಡಿಮೆ ಇದೆ, ಕಲಹಗಳೇ ದುಷ್ಟ ಮಾನವರ ಆಸರೆಯಾಗಿವೆ ಎಂಬ ಜ಼ರೀನಾಳ ಮಾತುಗಳು ಇಡೀ ಕೃತಿ ರಚನೆಯ ಉದ್ದೇಶವನ್ನು ಸೂಚಿಸುತ್ತವೆ. ಜ಼ರೀನಾ-ನಕುಲ್ ಅವರ ಸಂಭಾಷಣೆಯಲ್ಲಿ ಫ್ಯಾಸಿಸಂ, ಹಿಂದೂಸ್ತಾನಕ್ಕೆ ಆರ್ಯರ ಆಗಮನ, ಹಿಟ್ಲರನ ಸಿದ್ಧಾಂತವನ್ನು ಅಳವಡಿಸಿಕೊಂಡು ಇಂದಿಗೂ ದಾಂಧಲೆ ಎಬ್ಬಿಸುತ್ತಿರುವ ಹಿಂದೂ ಮತಾಂಧ ಶಕ್ತಿಗಳ ಹಳೆಯ ತಲೆಮಾರಿನವರ ಅಟ್ಟಹಾಸ, ಮನುಷ್ಯನ ಮಾನಸಿಕ ತಲ್ಲಣಗಳು ಇವೇ ಮೊದಲಾದ ವಿಷಯಗಳ ಕುರಿತ ಗಂಭೀರ ಚರ್ಚೆ ಇದೆ. ಇಲ್ಲಿ ಭಾರತದ ಮೂಲ ನಿವಾಸಿಗಳು ಆರ್ಯರ ವಿರುದ್ಧ ತಿರುಗಿಬೀಳದಿರಲು ಕಾರಣವಾದರೂ ಏನು, ಎಂಬ ಜ಼ರೀನಾಳ ಪ್ರಶ್ನೆ ಇಂದಿಗೂ ಪ್ರಸ್ತುತವೇ.

ಜರೀನಾ ಧರ್ಮಯುದ್ಧ, ದೇವರು ಎಂಬಂತಹ ಕಲ್ಪನೆಗಳನ್ನೇ ಗಾಳಿಗೆ ತೂರಿಬಿಡುತ್ತಾಳೆ. ತಥಾಕಥಿತ ಖ್ಯಾತ ವ್ಯಕ್ತಿಗಳ ಸ್ವಾರ್ಥ ಮತ್ತು ಸೋಗಲಾಡಿತನವನ್ನು ಬಯಲಿಗೆಳೆಯುತ್ತಾಳೆ. ಈ ಕಥಾಭಾಗದಲ್ಲಿ ಮಾನವನ ಅಹಂಕಾರ, ಅನುಮಾನ ಹಾಗೂ ನಿರಂತರ ಸಂಘರ್ಷಗಳಿಂದಾಗಿ ಇಡೀ ಮನುಕುಲ ಸರ್ವನಾಶದತ್ತ ಜಾರಿಹೋಗುತ್ತಿದೆ ಎಂದು ಜರೀನಾ ಎಚ್ಚರಿಸುತ್ತಾಳೆ. ಅವಳ ಮಾತುಗಳಲ್ಲಿ ಪರಿಸರ ರಕ್ಷಣೆಗೆ ಕಾತರಿಸುವ ತುರ್ತು ಇದೆ. ಅದೇ ಹೊತ್ತಿನಲ್ಲಿ, ಅಸಂಖ್ಯಾತ ಬದಲಾವಣೆಗಳು, ಆಗುಹೋಗುಗಳು ಸಂಭವಿಸುತ್ತಿದ್ದರೂ ಮನುಕುಲ ತನ್ನ ಸಮರಸತೆಯನ್ನು ಕಾಪಾಡಿಕೊಂಡು ಮುಂದುವರೆಯುತ್ತಿದೆ ಎಂಬ ಸಮಾಧಾನವನ್ನೂ ವ್ಯಕ್ತಪಡಿಸುತ್ತಾಳೆ. ಇಲ್ಲಿ ಜಗತ್ತು ಹಿಂಸೆ ಆಕ್ರಮಣಶೀಲತೆಗಳನ್ನು ತ್ಯಜಿಸಿ ಶಾಂತಿಯುತ ಮತ್ತು ಪ್ರಗತಿಶೀಲ ಭವಿಷ್ಯದೆಡೆಗೆ ಹೆಜ್ಜೆಯಿಡುವುದೆಂಬ ಆಶಯವಿದೆ. ಇಷ್ಟಾದರೂ ಜರೀನಾಳ ಮಾತುಗಳು, ನಕುಲ್-ಜರೀನಾರ ಸಂಭಾಷಣೆ ಮತ್ತು ಚರ್ಚಿಸುವ ವಿಷಯಗಳ ವ್ಯಾಪ್ತಿ ಎಲ್ಲದರಲ್ಲೂ ಒಂದು ಬಗೆಯ ಅಸಹಜತೆ ಇದೆ ಎಂಬ ಭಾವನೆ ಓದುಗರಲ್ಲಿ ಮೂಡಿಬಂದರೆ ಆಶ್ಚರ್ಯವೇನಿಲ್ಲ.

ನಕುಲ್ ನಿರೂಪಿಸುವ ಇಡೀ ಕಥಾನಕ ಒಂದು ತಾತ್ವಿಕ ನೆಲೆಯಲ್ಲಿ ಮುಂದುವರೆಯುತ್ತದೆ. ಅಲ್ಲಲ್ಲಿ ತತ್ವಶಾಸ್ತ್ರದ ಲೇಪನವೂ ಇಲ್ಲದಿಲ್ಲ.

ಎಂ. ಬಿ. ಲಾಲ್ ಅವರ ಮಾತುಗಳಲ್ಲೇ ಹೇಳುವುದಾದರೆ, 'ತ್ರೂ ದಿ ಈಗಲ್ಸ್ ಐ'ನ ರಚನೆಗೆ ವಾಲ್ಮೀಕಿ ರಾಮಾಯಣವು ಪ್ರೇರಣೆಯಾದರೂ ಕೃತಿಯ ಮೂಲಸೆಲೆ ಮಾನವನ ಕುರಿತ ಅಧ್ಯಯನವೇ ಆಗಿದೆ. ಎಲ್ಲ ಫ್ಯಾಂಟಸಿ ಕಥೆಗಳಲ್ಲಿರುವಂತೆ ಇಲ್ಲಿಯೂ ಅಮಾನುಷ ಶಕ್ತಿಯ ವಿಲಾಸ, ಅಸಾಧಾರಣ ಘಟನೆಗಳು, ಮೈನವಿರೇಳಿಸುವ ಪ್ರಸಂಗಗಳು ಓದುಗರನ್ನು ತಣಿಸುತ್ತವೆ. ಅಲ್ಲಲ್ಲಿ ಮಾರು ಮತ್ತು ಜರೀನಾರ ಸಂಭಾಷಣೆ ಬಹು ದೀರ್ಘವಾಗಿದ್ದು, ಅವು ಎಳೆಯರಿಗಿಂತಲೂ ಹದಿಹರೆಯದವರು ಮತ್ತು ವಯಸ್ಕರಿಗೆ ಹೆಚ್ಚು ಆಪ್ತವಾಗಬಹುದೇನೋ. ಚಿತ್ರಗಳನ್ನು ಇನ್ನೂ ರಚಿಸಿ ಸಂದರ್ಭಕ್ಕೆ ಅನುಗುಣವಾಗಿ ಆಯಾ ಪುಟಗಳಲ್ಲೇ ಮುದ್ರಿಸಿದ್ದರೆ ಅರ್ಥಪೂರ್ಣವಾಗಿರುತ್ತಿತ್ತು.

ಫ್ಯಾಂಟಸಿ-ಫೇರಿ ಪ್ರಕಾರಗಳಲ್ಲಿ ರಚಿಸಿದ ಕೃತಿಗಳು ಭಾರತೀಯ ಭಾಷೆಗಳಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬರುವ ಅವಶ್ಯಕತೆಯಿದೆ. ಎಂ. ಬಿ. ಲಾಲ್ ಅವರ ಇನ್ನೊಂದು ಕೃತಿ 'ಮಾಣಿಕ್‌ಪುರ್ ಜಂಕ್ಷನ್' ಕೂಡ ಇದೇ ಧಾಟಿಯಲ್ಲಿದೆ.

ಎಸ್. ಸುರೇಂದ್ರ
ನಂ. ೨೪, ಕೆನರಾ ಬ್ಯಾಂಕ್ ಕಾಲೋನಿ, ೧ನೇ ಕ್ರಾಸ್, ೩ನೇ ಬ್ಲಾಕ್ (ಪೂರ್ವ), ಜಯನಗರ, ಬೆಂ. - ೧೧

## "ಗೋಡೆ"

ಉಪ್ಪು ನೀರ ಸಾಗರ
ಮೌನ ಮರಳ ತೀರ
ಒಂದರ ಮೇಲೆ ಒಂದು
ಒಂದರ ಪಕ್ಕ ಮತ್ತೊಂದು
ಇಟ್ಟಿಗೆ ಜೋಡಣೆ ನಾಜೂಕು
ಜಡೆ ಹೆಣೆದು ನಕ್ಷತ್ರದ್ದೊಂದು
ಮಿನುಗು ಕ್ಷಣದಲ್ಲಿ
ಖಾಲಿ ಸೈಟಿನಲ್ಲೊಂದು ಬೇನಾಮಿ ಕಟ್ಟಡ

ತಳಪಾಯದಲ್ಲಿ ಉಸಿರು ಸಿಕ್ಕಿ
ಬಿಕ್ಕುತ್ತದೆ ನರಳಾಟ
ನೆನಪುಗಳ ಹೆಬ್ಬಾವು ಭೂತ
ಕಾಲನೇಟಿಗೆ ಹೊರಳಿ ಹೊರಳಿ
ನುಂಗಿದ ನೋವು ದೇಹದ ಮೂಳೆ
ಮುರಿದು ಕಟ ಕಟ ಸದ್ದು
ಜೀರ್ಣಗೊಂಡಿತೆ ?
ಅಸಹನೆಯ ಅಜೀರ್ಣ ನೋಟ.

ಗೋಡೆ
ಏಳುತ್ತಾ ಏಳುತ್ತಾ ಮೊಳೆ ಹೊಡೆತ
ಕರುಳು, ಕನಸು, ಕನವರಿಕೆಗಳ
ನೇತು ಹಾಕಲು ಸನ್ನದ್ಧ
ಯುದ್ಧವಿಲ್ಲದ ಸೋಲುಗಳು
ನಾಲಿಗೆಯ ನಂಜು ಚೂರಿ

ಹೃದಯಗಳಲ್ಲಿ ಎರೆಹುಳುವಿನ ಒದ್ದಾಟ
ಬಾಂಬುಗಳು ಮೌನಗೊಂಡ ಬಳಿ
ನಿಶ್ಶಬ್ದದ ಸ್ಫೋಟ ಕಾಲಬುಡದಲ್ಲಿ
ಹಿಡಿಬೂದಿಯ ಮಹಾಕೂಟ

ಗೋಡೆ ಎತ್ತರ ಎತ್ತರ
ಆಕಾಶಕ್ಕೂ ಲಗ್ಗೆ ಇಟ್ಟು
ಬಿದ್ದ ಲಗೋರಿ ಕಲ್ಲುಗಳ ಜೋಡಿಸಿ
ಆಟ ಗೆಲ್ಲಿಸುವವರು ಯಾರು ?
ಸುತ್ತಲೂ ನಿಂತಿದ್ದಾರೆ ಹಿಡಿದು ಚೆಂಡು
ಕಲ್ಲುಗಳ – ಉರಿವ ದೊಂದಿಗಳಿಗೆ ಕಟ್ಟಿ

ಗೋಡೆ ಏಳುವ ಮುನ್ನ
ಗೊತ್ತಿರಲಿಲ್ಲ ಎರಡೂ ಬದಿಯವರಿಗೆ
ಇಷ್ಟೆಲ್ಲಾ...
ಹೀಗೆಲ್ಲಾ... ಆಗುತ್ತದೆಂದು
ರಕ್ತದ ಬದಿ ಉರಿತದ ಮೈಯ್ಯ
ಮೆತ್ತಿಕೊಳ್ಳುತ್ತದೆಂದು



ಎಂ. ಎಸ್. ವೇದಾ
ಸಂಖ್ಯೆ ೧೭೫೭, ಪಡುವಣ ರಸ್ತೆ
೪ನೇ ತಿರುವು, ೪ನೇ ಹಂತ, ಟಿ.ಕೆ. ಬಡಾವಣೆ
ಕುವೆಂಪು ನಗರ, ಮೈಸೂರು - ೫೭೦ ೦೨೩

# ಆಧುನಿಕತೆಯೊಂದಿಗೆ ಮುಖಾಮುಖಿ: ಒಂದು ಪ್ರತಿಕ್ರಿಯೆ

ಶಿವರಾಮ ಕಾರ್ಗದಿ

ಜನಜೀವನದ ಮುಖ್ಯಭಾಗವಾಗಿರುವ ಧಾರ್ಮಿಕ ಆಚರಣೆ, ಪದ್ಧತಿಗಳು ಆಧುನಿಕತೆಯ ಹೊಸ ಪರಿಭಾಷೆಯಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಂಡಿವೆ. ಮಾನವನ ಮೌಢ್ಯ ಮತ್ತು ಬದುಕಿನ ಎಲ್ಲ ಆಗುಹೋಗುಗಳಿಗೆ ದೈವವೇ ಕಾರಣವೆಂಬ ಅಜ್ಞಾನ ಕೂಡ ಪರಿವರ್ತನೆಯ ಹಾದಿಯಲ್ಲಿದೆ. ಕಣ್ಕಟ್ಟು ವಿದ್ಯೆಗಳು ರೂಪ ಪರಿವರ್ತನೆಗೊಂಡು ನಮ್ಮನ್ನು ಸೇರುತ್ತಿರುವ ಈ ದಿನಗಳಲ್ಲಿ ಸಾಹಿತ್ಯದ ವಿದ್ಯಾರ್ಥಿಯೊಬ್ಬನ ಮುಂದಿನ ಹೆಜ್ಜೆಗಳೇನು, ಎಂಬುದು ಈ ಅಧ್ಯಯನದ ಉದ್ದೇಶ. ನನ್ನ ಚರ್ಚೆಗೆ ಸಹಕಾರಿಯಾದ ಎರಡು ಕಾದಂಬರಿಗಳಿವೆ: (೧) ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ರಾಘವೇಂದ್ರ ಪಾಟೀಲರ 'ತೇರು' ಮತ್ತು (೨) ಕೆ. ಸತ್ಯನಾರಾಯಣರ 'ಕಾಲಜಿಂಕೆ'. ಈ ಕೃತಿಗಳ ಒಳ ಆಶಯಕ್ಕೆ, ಕೆಲವೊಮ್ಮೆ ಭಿನ್ನವಾಗಿ, ಚರ್ಚಾಸ್ಪದವಾಗಿ ಸಾಗುವ ಈ ಲೇಖನಕ್ಕೆ ಮೇಲಿನ ಕಾದಂಬರಿಗಳೇ ಪ್ರೇರಕವಾಗಿವೆ, ಪೋಷಕವಾಗಿವೆ.

ಕ್ರಮಬದ್ಧವಾಗಿ ಅಧ್ಯಯನ ನಡೆಸಿದಾಗ ಪಾಟೀಲರ 'ತೇರು', ಧಾರ್ಮಿಕತೆಯನ್ನು ಮೂಲವಾಗಿಟ್ಟುಕೊಂಡು 'ಆಧುನಿಕ ಪುರಾಣ' ಎಂದು ಹೆಸರು ಪಡೆದಿದೆ. ಈ ಕ್ರಮಾನುಗತಕ್ಕೆ ವಿಭಿನ್ನವಾದ 'ಕಾಲಜಿಂಕೆ' – ವ್ಯಕ್ತಿಯ ಸ್ವಾರ್ಥ, ಅತ್ಯಾಸೆಯ ಪರಮಾವಧಿಯಿಂದ ಉಂಟಾಗುವ ತೊಡಕಿನಿಂದ ವ್ಯಕ್ತಿ ಆಧುನಿಕನಾಗುವುದನ್ನು ಚಿತ್ರಿಸುತ್ತದೆ. ಈ ಭಿನ್ನ ಆಲೋಚನೆಗಳು ಒಟ್ಟಾಗಿ, ಎರಡೂ ಕೃತಿಗಳನ್ನು ಇಟ್ಟು ನೋಡಿದಾಗ ಕಾಣಬಂದರೂ ಸಂಪೂರ್ಣವಾಗಿ ಈ ಕೃತಿಗಳ ವಿಷಯ ವಸ್ತು ಭಿನ್ನವಾಗಿದೆ. ನವವಸಾಹತುಶಾಹಿ ಭೂತಕ್ಕೆ ನಾವೇ ತಲೆದಂಡವಾಗಿರುವಾಗ, ದೇಶ-ವಿದೇಶಗಳಲ್ಲಿ ರಕ್ಕಸ ಸಂತಾನವೊಂದು ಜನ್ಮತಾಳುತ್ತಿರುವಾಗ ಸಾಹಿತ್ಯ ಏನು ಮಾಡೀತು ? ಇಂತಹದೊಂದು ಪ್ರಶ್ನೆ ಎದುರಾದಾಗಲೇ ಬಾಬಾ ಆಮ್ಟೆ, ಮೇಧಾ ಪಾಟ್ಕರ್ ನಮ್ಮ ಭವಿಷ್ಯವಾಗುತ್ತಾರೆ.

ಆದರೆ – 'ತೇರು'ವಿನಲ್ಲಿನ ಬಾಬಾ ಆಮ್ಟೆಯ ಆಶ್ರಮ ಒಟ್ಟು ಜನಜೀವನದ ಅಜ್ಞಾನಕ್ಕೆ ಮಾರ್ಗದರ್ಶಿ ಸೆಲೆಯಾಗಬಹುದೆ? 'ಕಾಲಜಿಂಕೆ'ಯ ಮುಖ್ಯಪಾತ್ರ ಪ್ರಾರ್ಥನಾಳ ಒಳತುಮುಲಗಳು ಎಲ್ಲಾ ನವನಾಗರಿಕತೆಯ ವಾರಸುದಾರರೆಂದು ಬೀಗುತ್ತಿರುವ ಯುವ ಸಮುದಾಯದ ತುಮುಲವಾಗಬಲ್ಲುದೆ, ಎಂಬುದು ನಮ್ಮ ಮುಂದಿನ ಪ್ರಶ್ನೆ. ರಾಜಕೀಯವಾಗಿ ನಾವು ತಲುಪಿರುವ ಸ್ಥಿತಿ, ಜಾಗತೀಕರಣದಿಂದ ರಾಷ್ಟ್ರದಲ್ಲಿ ಆಗುತ್ತಿರುವ ಆಧುನಿಕತೆಯ ವಿಶ್ರಾಂತಿಗಾಗಿ ಮನೆ ಸೇರುವುದು ಈ ಕೃತಿಯ ಮುಖ್ಯ ಘಟ್ಟ. ಇಂತಹ ದಿಢೀರ್ ನಿರ್ಧಾರ ಯುವಸಮುದಾಯದ ನಿರ್ದಿಷ್ಟತೆಯಿಲ್ಲದ ಅಥವಾ ಕೈ ಮೀರಿದ ಪ್ರಯತ್ನದ ಅಭಿಲಾಷೆಯನ್ನು ಸೂಚಿಸುತ್ತದೆ. ಹಾಗೇ ಮಧ್ಯಮ ವರ್ಗದವರಲ್ಲಿ ಇರುವ ವಿಕೃತ ಅಭಿಪ್ರಾಯಗಳು, ಅವರ ಜೀವನಕ್ರಮ ಲೇಖಕರು ಕಟ್ಟಿಕೊಡುವ ರೀತಿ ಅನನ್ಯ. ಆದರೆ – 'ಕಾಲಜಿಂಕೆ'ಯ ನಾಯಕ, ಸ್ವಯಂನಿವೃತ್ತ ಅಧ್ಯಾಪಕ ರಂಗನಾಥ್, ತಾನು ಟ್ಯುಟೋರಿಯಲ್ ನಡೆಸುವ ಮೂಲಕ ಅಪಾರ ಆಸ್ತಿ, ವಿದೇಶದಲ್ಲಿರುವ ಮಗ, ಷೇರುಪತ್ರ... ಇತ್ಯಾದಿ ವಿವರಗಳು ವ್ಯಕ್ತಿಯ ಆಸೆಯನ್ನು ತೋರಿಸುತ್ತವೆ. ಇಂತಹ ರಂಗನಾಥ್ ಕೊನೆಯಲ್ಲಿ ನಡೆಸುವ ಆತ್ಮವಿಮರ್ಶೆ – ನಮ್ಮೆಲ್ಲರದ್ದೂ ಹೌದು. ನಮ್ಮ ಜೀವನಕ್ಕೆ ವಿದೇಶಿ ಮಾದರಿಯ ಅಭಿವೃದ್ಧಿ ತಂತ್ರಗಳು ಸೇರಿಕೊಂಡಾಗಲೇ ಈ ರೀತಿಯ ವಿಭಿನ್ನ ವ್ಯಕ್ತಿತ್ವ ರೂಪುಗೊಳ್ಳಲು ಸಾಧ್ಯ. 'ನರ್ಮದಾ ಬಚಾವೋ' ಹೋರಾಟವನ್ನು ಪ್ರಸ್ತಾಪಿಸುವ ಲೇಖಕರು ಆಳದಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿಯುವಂತೆ ಅದರ ನಾಯಕಿಯನ್ನು ಚಿತ್ರಿಸುತ್ತಾರೆ. ಸಮಯಪ್ರಜ್ಞೆ ಮತ್ತು ಸಮಸ್ಯೆಯ ಗಂಭೀರತೆಯನ್ನು ವಾಸ್ತವ ಜೀವನದಲ್ಲಿ ಕಾಣುವಂತೆ – ಈ ಕೃತಿಯಲ್ಲಿ ತರುವ ಪ್ರಯತ್ನ ಇದೆ. 'ಕಾಲಜಿಂಕೆ'ಯು ಅಂತರ್ಯದಲ್ಲಿ ವ್ಯಕ್ತಿಯ ಇಷ್ಟಾಭಿಪ್ರಾಯವನ್ನು ಹಿಸುಕುತ್ತದೆ. ಎಲ್ಲವೂ ಸರಿಯಾಗುವುದಕ್ಕಿಂತ ಕೆಲವು ಬದಲಾವಣೆ ಬಯಸುವ 'ತೇರು' ನಮ್ಮನ್ನು ಕಾಡುತ್ತದೆ. 'ಕಾಲಜಿಂಕೆ' – ಎಲ್ಲವೂ ಇದ್ದುಕೊಂಡೆ ಮತ್ತೆ ಹುಡುಕಿ ಗೊಂದಲಗೊಳ್ಳುವ ವ್ಯಕ್ತಿ ಮತ್ತು ಸಮಾಜವನ್ನು ನಮ್ಮೆದುರು ನಿಲ್ಲಿಸುತ್ತದೆ.

ನಮ್ಮ ಹೋರಾಟ, ನಮ್ಮ ಬದುಕು ಮತ್ತು ನಮ್ಮ ಆಲೋಚನೆಗೆ ಈ ಕೃತಿಗಳು ಏನು ಮಾಡಿಯಾವು ? ಧಾರ್ಮಿಕ ಹಿಂಸೆ ನರಬಲಿಯನ್ನು ತಪ್ಪಿಸಿ ಪ್ರಾಣಬಲಿಗೆ ನಿಂತಿದೆ. ವ್ಯಕ್ತಿಯ ಕುರುಡುತನದಲ್ಲಿ ಸಮಾಜ/ಪರಿಸರ ಮೌನವಾದರೆ ಅದೂ ಹಿಂಸೆಯೇ! ಹಾಗೇ, ಕಾಲದ ಜತೆಗೆ ಓಡುವ ಸಮಾಜಕ್ಕೆ ಅಥವಾ ಯುವ ಸಮುದಾಯಕ್ಕೆ ನೂತನ ದಿಕ್ಕುಗಳೇನು ? ಸಾಮಾಜಿಕತೆಯಿಂದ ನಾಗಾಲೋಟ, ಹಣ ಗಳಿಕೆಯ ಬೆನ್ನುಹತ್ತಿದ ಜನರಿಗೆ ಹೋರಾಟವೆಂದರೆ ನಗೆಪಾಟಲಾಗಿರುವ ದಿನಗಳಲ್ಲಿ ಮುಂದಿನ ಗೊತ್ತು-ಗುರಿಗಳೇನು ಎಂಬುದು ಪ್ರಶ್ನಾರ್ಹ. ಧಾರ್ಮಿಕ ಬದಲಾವಣೆ, ಸಾಮಾಜಿಕ ಹೋರಾಟಗಳು ಪ್ರಜಾಪ್ರಭುತ್ವ ಮಾದರಿಯ ಭಾರತಕ್ಕೆ ಯಾವ ಹಿರಿಮೆಯನ್ನು ತರಬಲ್ಲುದು ಅಥವಾ ನಮ್ಮ ಕೋಮುವಾದಿ ರಾಜಕೀಯ ಪಕ್ಷಗಳು ಅಂತಹ 'ಒಂದು' ಬದಲಾವಣೆಗೆ ಸಹಕಾರಿಯಾಗಿವೆಯೇ ಎಂಬುದೂ ವಿಚಾರಾರ್ಹ.

'ತೇರು' – ಕಾದಂಬರಿಯ ನರಬಲಿ ಪ್ರಸಂಗ – ಆಧುನಿಕ ಮನುಷ್ಯನ 'ಮಾನವೀಯತೆಯ ಬಲಿ' ಎಂದು ವ್ಯಾಖ್ಯಾನಿಸುವುದಾದರೆ ನಮ್ಮೆಲ್ಲ ಗೊಂದಲಗಳಿಗೆ ಪರಿಹಾರ ಸಿಗಬಹುದು! ಅಂದರೆ 'ಬಲಿ'ಯ ಮೂಲಕವೇ ಭಾರತೀಯ ಸಮಾಜ ಧಾರ್ಮಿಕತೆಯನ್ನು ಜೀವಂತವಾಗಿಡಲು ಪ್ರಯತ್ನಿಸುತ್ತದೆ. (ಈಗ, ರಾಜಕೀಯ ಪಕ್ಷಗಳು ತಮ್ಮ ಓಟ್ ಬ್ಯಾಂಕ್ ಸಲುವಾಗಿ 'ಬಲಿ'ಯನ್ನು ಕೇಳುತ್ತವೆ, ಇರಲಿ.) ಇದು ಕಾದಂಬರಿಯಲ್ಲಿ ಒಂದು ರೂಪಕವಾಗಿ ಬಂದಿದೆ. ಆ ಮೂಲಕ ತೇರು ಚಲಿಸುವುದು ಮೇಲ್ವರ್ಗದ ಇನ್ನೊಂದು ಸಂಚು. ಇಲ್ಲಿಂದ ಪ್ರತಿವರ್ಷ ರಕ್ತತಿಲಕದ ಸೇವೆ ಮಾಡುವ ಕಳ್ಳಿಗುದ್ದಿ ದ್ಯಾವಪ್ಪ ತನ್ನ ಮುಂದಿನ ತಲೆಮಾರನ್ನೆ ದುರಂತದ ಕೂಪಕ್ಕೆ ತಳ್ಳುತ್ತಾನೆ. ಅವನ ಮರಿ ಮೊಮ್ಮಗ ದ್ಯಾವಪ್ಪನ ಮೂಲಕ ತೇರಿನ ರಕ್ತದಾಹಕ್ಕೆ ತೆರೆ ಎಳೆವ ಲೇಖಕರು ಆತನನ್ನು ಆಶ್ರಮವಾಸಿಯಾಗಿಸಿದ್ದು ಯಾಕೆ? ಇಲ್ಲಿ ನಮ್ಮ ಸಮಾಜ ಅನುಸರಿಸಬೇಕಾದ ಹೊಸ ಹೆಜ್ಜೆಗಳೇನು? ಅಥವಾ ಸಮಾಜ ಸುಧಾರಣೆ ಎಂಬುದು ಮತ್ತೊಂದು ಆಚರಣೆಯ ಕಬಂಧಬಾಹುಗೆ ಸಿಕ್ಕಿ ನಡೆಯುವಂಥದ್ದೇ? ಹಾಗೂ ಯುವ ಸಮುದಾಯ ವಿರೋಧಿಸುವ ಧಾರ್ಮಿಕ ಕಟ್ಟುಪಾಡುಗಳ ಅಂತ್ಯ ಈ ರೀತಿಯ ಮಹಾಕ್ರಿಯಾ ಹೋರಾಟದಲ್ಲಿ ಕೊನೆಯಾಗಬೇಕೆಂಬುದು ಪಾಟೀಲರ ಆಶಯವೇ! ಈ ರೀತಿಯ ಪ್ರಶ್ನೆಗಳಿಗೆ ಸತ್ಯನಾರಾಯಣ ತಮ್ಮ 'ಕಾಲಜಿಂಕೆ'ಯಲ್ಲಿ ವಿಭಿನ್ನವಾದ ಉತ್ತರ ಕೊಡುತ್ತಾರೆ. ಸ್ಪರ್ಧಾತ್ಮಕ ಜಗತ್ತಿನಲ್ಲಿ ಸಾಧಿಸುವ ಹಾದಿಯಲ್ಲಿರುವ ಪ್ರಾರ್ಥನಾ ದಿಢೀರನೆ ತನ್ನ ನಿರ್ಧಾರ ಬದಲಾಯಿಸಿ ಒಂದು ವರ್ಷಕಾಲ

ಕ್ರಮಬದ್ಧವಾಗಿ ಅಧ್ಯಯನ ನಡೆಸಿದಾಗ ಪಾಟೀಲರ 'ತೇರು', ಧಾರ್ಮಿಕತೆಯನ್ನು ಮೂಲವಾಗಿಟ್ಟುಕೊಂಡು 'ಆಧುನಿಕ ಪುರಾಣ' ಎಂದು ಹೆಸರು ಪಡೆದಿದೆ. ಈ ಕ್ರಮಾನುಗತಕ್ಕೆ ವಿಭಿನ್ನವಾದ 'ಕಾಲಜಿಂಕೆ' – ವ್ಯಕ್ತಿಯ ಸ್ವಾರ್ಥ, ಅತ್ಯಾಸೆಯ ಪರಮಾವಧಿಯಿಂದ ಉಂಟಾಗುವ ತೊಡಕಿನಿಂದ ವ್ಯಕ್ತಿ ಆಧುನಿಕನಾಗುವುದನ್ನು ಚಿತ್ರಿಸುತ್ತದೆ. ಈ ಭಿನ್ನ ಆಲೋಚನೆಗಳು ಒಟ್ಟಾಗಿ, ಎರಡೂ ಕೃತಿಗಳನ್ನು ಇಟ್ಟು ನೋಡಿದಾಗ ಕಾಣಬಂದರೂ ಸಂಪೂರ್ಣವಾಗಿ ಈ ಕೃತಿಗಳ ವಿಷಯ ವಸ್ತು ಭಿನ್ನವಾಗಿದೆ. ನವವಸಾಹತುಶಾಹಿ ಭೂತಕ್ಕೆ ನಾವೇ ತಲೆದಂಡವಾಗಿರುವಾಗ, ದೇಶ-ವಿದೇಶಗಳಲ್ಲಿ ರಕ್ಕಸ ಸಂತಾನವೊಂದು ಜನ್ಮತಾಳುತ್ತಿರುವಾಗ ಸಾಹಿತ್ಯ ಏನು ಮಾಡೀತು ?

ಸುಣುಚಿಕೊಂಡು, ದ್ಯಾವಪ್ಪನ ರೀತಿ ಬದುಕುವುದೆ? ಇಲ್ಲವೆ ದ್ಯಾವಪ್ಪನ ಹಾಗೇ ಪ್ರತಿಭಟಿಸುವುದೇ ಅಥವಾ ಸ್ವಾವಂಜ್ಜನಂತೆ ವಿವೇಕಿಯಾಗಿದ್ದು ಸಾಂಪ್ರದಾಯಿಕ ಪರಂಪರೆಯೊಂದಿಗೆ ಬಂಧಿಯಾಗಿರುವುದೇ? ನಮ್ಮ ಮುಂದಿರುವ ಸವಾಲುಗಳು ಅನೇಕ. ''ದೇವರೂ ದಿಂಡರೂ ಎಲ್ಲಾ ಔಟ್ ಆಫ್ ಡೇಟ್ ಅಗ್ಯಾವರೀ...! ಔಷಧದ ಬಾಟಲಿ ಮ್ಯಾಗ ಹಾಕಿರತಾರ ನೋಡಿರಿ... ಎಕ್ಸ್‌ಪೈರೀ ಡೇಟು, ಹಂಗ! ದೇವರೂ ದಿಂಡರದೂ ಎಕ್ಸ್‌ಪೈರೀ ಡೇಟು ಆಗಿ ಹೋಗೇತಿರಿ... ಹಿಂತಾ ದೇವರ ತೇರಿನ ಸೇವಾ ಮಾಡಿಕೋತ ನಿರುಪಯೋಗ ಆಗಿ ಹಾಳ ಆಗಲಿಕ್ಕೆ ಬಿಡದs ನಮ್ಮಂಥಾ ಹುಡುಗೋರಿಗೆ ದುಡೀಲಕ್ಕೆ ಕೆಲಸಾ ಕೊಡಬೇಕರಿ...'' (ತೇರು, ಪುಟ ೧೪೮). ಈ ಕ್ರಾಂತಿಕಾರಿ ನಿಲುವಿನ ಆಳದಲ್ಲಿ ವ್ಯಕ್ತಿಯ ಅಸಹಾಯಕ ದೈನ್ಯತೆ ಇದೆ. ದ್ಯಾವಪ್ಪ - ಕೇಳುವುದು 'ಕೆಲಸ' - ಅದು ಮೂರೊತ್ತಿನ ಊಟಕ್ಕೆ ಮಾತ್ರ. ಇದು ಸಾಧ್ಯವಾಗದ ಸ್ಥಿತಿಯಲ್ಲಿ ನಮ್ಮ ಸರ್ಕಾರ, ಸಮಾಜ ಇವೆ. ಬದುಕಿನ ಈ ಸಣ್ಣ ಸಣ್ಣ ಆಸಕ್ತಿಗಳನ್ನು ಹತ್ತಿಕ್ಕಿಕೊಂಡು ರಾಜಕೀಯ ನಡೆಸುವ ವ್ಯಕ್ತಿಗಳನ್ನು ಸಿಟ್ಟಿನ ಕಣ್ಣಿನಿಂದ ನೋಡಿ ಬದಲಾಗಬೇಕಾದ ಜರೂರು ಇದೆ.

'ಕಾಲಜಿಂಕೆ' ಕಾದಂಬರಿಯಲ್ಲಿ ಸಮಾಜಸೇವಕಿ ರಜನಿ ಮಾತಾಡುವುದನ್ನು ಗಮನಿಸಿ. ''ಈವತ್ತು ಸಮಾಜವಾದದ ಬಗ್ಗೆ ಮಾತನಾಡುವುದು out of date ಅನಿಸಬಹುದು, ತಪ್ಪಿಲ್ಲ. ಸಮಾಜವಾದವೆಂದರೆ ಬಡತನದ ವಿರುದ್ಧ ಹೋರಾಟ ಮಾತ್ರ ಎಂದು ನಾವು ಯೋಚಿಸಿದ್ದರಲ್ಲೇ ಎಲ್ಲೊ ತಪ್ಪಿದೆ. ಸಮಾನತೆಯಿರುವ, ದುರಾಸೆಯಿಲ್ಲದ ಎಲ್ಲರಿಗೂ ಅವರವರಿಗೇ ಬೇಕಾದ ಅವಕಾಶಗಳು ಸಿಗುವ ಸಮಾಜವೇ ತನ್ನಷ್ಟಕ್ಕೆ ತಾನೇ ಸುಂದರವಾಗಿರುತ್ತದೆ'' (ಪುಟ - ೧೫೪). ನಮ್ಮ ಚಿಂತನಾಕ್ರಮದಲ್ಲಿನ ಬಹುವಿಧತ್ವ, ಸಾಮಾನ್ಯವಾಗಿ ಬುದ್ಧಿಜೀವಿಗಳ ಚಿಂತನಾಧಾಟಿಯಿಂದ ಭಿನ್ನವಾದ ರೀತಿಗಳು ಇಂದು ಬೇಕಾಗಿವೆ. ಮೇಲ್ಮಟ್ಟದ, ಜನಪರವಲ್ಲದ 'ವಾದ'ಗಳು ಹಳಸಲುಗೊಂಡಿವೆ. ಮಾರ್ಕ್ಸ್‌ವಾದ ಇದಕ್ಕೆ ಅಪವಾದವಾದರೂ ಭಾರತೀಯ ಸಮಾಜ ಈ ದಿಕ್ಕಿನಲ್ಲಿ ಇನ್ನೂ ಸಾಗಿಲ್ಲ. 'ಬಡತನ'ದ ಸಮಾಜ, ವ್ಯಕ್ತಿ ನೈತಿಕವಾಗಿ ಅಧಃಪತನಗೊಳ್ಳುವ ಪರಿಹಾಸ್ಯಗಳಿವು. ರಾಜಕೀಯ ಹಿತಾಸಕ್ತಿ ವಂಶಪಾರಂಪರ್ಯವಾಗುತ್ತಿರುವ ಈ ದಿನಗಳಲ್ಲಿ ಸಮಾನತೆ ತನ್ನ ಅರ್ಥ ಕಳೆದುಕೊಂಡಿದೆ. ಹೀಗಾಗಿ ನಮ್ಮ ದಿಕ್ಕು-ದೆಸೆಗಳೇನು? ''ಸ್ವಾತಂತ್ರ್ಯ ಬಂದ ಹೊಸದರಲ್ಲಿ ಹೀಗೆ ಆಯ್ತಂತೆ. ಸ್ವಾತಂತ್ರ್ಯ ಬರುವ ತನಕ ನಾವು ನಮ್ಮ ಸಂಸ್ಕೃತಿ, ಐಡೆಂಟಿಟಿ ಅಂತೇನೇ ಹೇಳತಿದ್ದಿವಿ. ಐಡೆಂಟಿಟಿ ಸಿಕ್ಕ ಮೇಲೆ ಪಶ್ಚಿಮದ ಕನಸೇ ಪ್ರತಿಕ್ಷಣವೂ. 'ಐಡೆಂಟಿಟಿ' ಕೇಳೋದು ನಮ್ಮ ವಿಶಿಷ್ಟತೆ, ಪ್ರತ್ಯೇಕತೆ ತೋರೋಕೆ. ಆದರೆ ಕನಸು ಮಾತ್ರ ಅಮೆರಿಕಾದ್ದು. ನಮ್ಮನ್ನಾಳುವವರ ಜೀವನ ಶೈಲಿಯದು.'' (ಕಾಲಜಿಂಕೆ ಪುಟ, ೬೨). ಇಂತಹ ಸಂಸ್ಕೃತಿಯ ಗೋಜಲಿನಲ್ಲಿ ಸಿಕ್ಕಿಕೊಂಡು ಐಡೆಂಟಿಟಿಗಾಗಿ ಹಂಬಲಿಸುವ ನಾವು ಸಾಹಿತ್ಯದಿಂದ ಅದನ್ನು ಪಡೆಯಲು ಸಾಧ್ಯವೆ? ಅಥವಾ ನಾವು ರೂಪುಗೊಳ್ಳಲು ಸಾಹಿತ್ಯ ಸಹಾಯಕವೇ ಎಂಬುದು ಒಂದು ಪ್ರಗತಿಗಾಮಿ ಆಲೋಚನೆ ಅಷ್ಟೆ. ನವವಸಾಹತುಶಾಹಿಯ ಕಹಿಗುಳಿಗೆಯನ್ನು ನುಂಗಿರುವ ನಾವು ಸರಳೀಕರಣದಿಂದ ಬಿಕ್ಕಟ್ಟಿನ ಜೀವನಕ್ಕೆ ಸೇರ್ಪಡೆಯಾಗುತ್ತಿರುವುದು ಸ್ಪಷ್ಟ.

ಇಂತಹ ಸಂಧಿಕಾಲದಲ್ಲಿ ಬಂದ 'ತೇರು' ಮತ್ತು 'ಕಾಲಜಿಂಕೆ' ಕಾದಂಬರಿಗಳು ನಮ್ಮ ಆಲೋಚನೆಯ ಕಸುವಿಗೆ ಹೊಸ ಆದರ್ಶಗಳನ್ನು ಸೇರಿಸುತ್ತವೆ. 'ತೇರು'ವಿನ ದ್ಯಾವಪ್ಪ ಹೇಳುವ ''ಇನ್ನು ದೇವರು ಅನ್ನುವುದು ಇದ್ದರೆ, ಅದರ ವಿರುದ್ಧ ನನ್ನ ಬಂಡಾಯವಿದೆ. ಅದರ ವಿರುದ್ಧ ನನ್ನ ಧಿಕ್ಕಾರವಿದೆ ಮತ್ತು ಅದರ ವಿರುದ್ಧ ನನ್ನ ಸತ್ಯಾಗ್ರಹವಿದೆ'' (ತೇರು, ಪುಟ ೧೩೪). ಈ ಮಾತುಗಳು ಭವಿಷ್ಯವನ್ನು ಸೂಚಿಸುತ್ತವೆಯೇ ಹಾಗೂ 'ಕಾಲಜಿಂಕೆ'ಯ ಪ್ರಾರ್ಥನಾ ಹೇಳುವ ''ನೋಡಪ್ಪ, ಮೊದಲನೆಯದು ಮರದಿಂದ, ಗಿಡದಿಂದ ಉದುರುವ ಎಲೆ, ಎರಡನೆಯದು ಹರಿಯುವ ನದಿ, ಮೂರನೆಯದು ವೈವಿಧ್ಯಮಯವಾದ ಮೋಡಗಳ ರಾಶಿ, ನಾಲ್ಕನೆಯದು ಹಾರಾಡುತ್ತಿರುವ ಹಕ್ಕಿಗಳು. ಎಷ್ಟು ಚೆನ್ನಾಗಿದೆ ಅಲ್ಲವೇನಪ್ಪ. ಇಡೀ ನಾಗರಿಕತೆ ಇದುವರೆಗೆ ಸಂಗ್ರಹಿಸಿರುವ ಎಲ್ಲ ಜಾಣ್ಮೆಯನ್ನು ಎಷ್ಟು ಸಂಕ್ಷಿಪ್ತವಾಗಿ ಹೇಳಲಾಗಿದೆ ಅಲ್ಲವಾ?'' (ಪುಟ ೧೪೮) ಎಂಬಲ್ಲಿನ ಗಾಢವಿಚಾರ - ಎರಡೂ ಅಭಿಪ್ರಾಯಗಳು ಯುವ ಸಮುದಾಯವನ್ನು ಎತ್ತ ಸಾಗಿಸುತ್ತಿವೆ? ಪ್ರಾಯಶಃ ಬದುಕಿನ ನಿಗೂಢದೊಳಗೆ ·ಇಂತಹ ವಿಚಾರಗಳು ತೆರೆದುಕೊಳ್ಳುವುದೇನೋ! - ಇನ್ನು ಕಾದಂಬರಿಯ ಆಚೆಗೆ ನಿಂತು ಯೋಚಿಸಿದಾಗ ಬದುಕಿಗೆ ಧಾರ್ಮಿಕತೆ, ಸಾಮಾಜಿಕ ಅರಿವು ಅಗತ್ಯವೇ ಎಂಬುದೂ ವಿಚಾರಾರ್ಹವಾದುದು.

ಹೀಗೆ ಸಾಹಿತ್ಯ ಕೃತಿಗಳು ಹುಟ್ಟುಹಾಕುವ ವಿಚಾರ-ಮಂಥನ ಹಾಗೂ ತಾವು ಅದರಲ್ಲಿ ಪಡೆಯುವ ಹೊಸದಿಕ್ಕುಗಳನ್ನು ಚರ್ಚಿಸುವುದು ಇಲ್ಲಿನ ಸಾಮಾಜಿಕ ಹೊಣೆ. ಉದ್ದೇಶ ಕೃತಿಗಳಿಗೆ ಇದ್ದರೆ ಸಾಲದು ಅದು ಓದುಗರಲ್ಲಿಯೂ ಇರಬೇಕು. ಅಂಥ ಓದು ಮಾತ್ರ ಆಪ್ತವಾಗಲು ಸಾಧ್ಯ. 'ತೇರು'ವಿನ ಭಾಷೆ, ಬದುಕು, ಎಲ್ಲವನ್ನೂ ಮೀರಿ ತನಗೆ ತಾನೇ ಜೀವನ ಕಟ್ಟಿಕೊಳ್ಳುವ ದ್ಯಾವಪ್ಪ ಇಂದಿನ ಸಮಾಜಕ್ಕೆ ಮುಖ್ಯವಾಗುತ್ತಾನೆ. ಈ ಕೃತಿಗಳು ಕಾಣಿಸುವ ಸಂಚಲನ ಒಟ್ಟು ಬದುಕಿನ ಸಾಗರಕ್ಕೆ ಬಹಳ ಅಗತ್ಯವಾಗಿದೆ.

**ಶಿವರಾಮ ಕಾರ್ಗಡಿ**
ರಾಮಚಂದ್ರಪುರ ಮಠ ರಸ್ತೆ, ಹನಿಯ ಅಂಚೆ, ಹೊಸನಗರ ತಾಲ್ಲೂಕು, ಶಿವಮೊಗ್ಗ - ೫೭೭ ೪೧೮



# ಬಿಕ್ಕುಗಳು

೧

ಆವಳೆದೆಯ ಬಿಳಿ ಹಾಲಿನಂತೆ
ತೊಟ್ಟಿಕ್ಕುತ್ತಿದೆ ಈ ಪ್ರೀತಿ.
ಕ್ಷಮಿಸಿ, ನಾನು
ಆಕಾಶಕ್ಕೆ ಮುತ್ತಿಡುತ್ತೇನೆ.

೨

ನಾನೀಗ ನಿನ್ನೊಡಲಲ್ಲಿ
ಕುಡಿ ಒಡೆಯುವ ಹೊತ್ತು
ನಿನ್ನ ನೆನಪಿನಂಗಳಕ್ಕೆ
ನಾನೊಬ್ಬ ಭಿಕಾರಿ.

೩

ನಿನ್ನುಸಿರ ಪ್ರತಿ ಕಣವೂ
ನನ್ನ ನೆನಪಿನ ಚಿಗುರು
ನಿನ್ನ ಪ್ರೇಮ ಬೋಧಿಯ
ಕೆಳಗೆ ನಾನೇ ಬುದ್ಧ.

೪

ನಿನ್ನೊಲವ ಸೌಧದಲ್ಲಿ
ನಾನೊಬ್ಬ ಅನಾಥ.
ನಿನ್ನ ಸಿಂಗಾರದೊಸಂತದಲ್ಲಿ
ನಾನು ಒಂಟಿ ಮರ.

೫

ನಿದ್ದೆ ತಿಂದು ಕನಸುವ ಹೊತ್ತಲ್ಲಿ
ಹೆಪ್ಪುಗಟ್ಟಿ ಕಣ್ಣ ಕೊನೆಹನಿಗೆ ಸಾವು.
ನಿನ್ನ ಅಂತಿಮ ಚಿರ ನಿದ್ರೆಯಲಿ
ನಾನೊಬ್ಬ ಫಕೀರ.

೬

ಲಯ ತಪ್ಪಿದ ನಿನ್ನುಸಿರಾಟದಲಿ
ನನ್ನೆದೆಯ ಭಿತ್ತಿಗೆ ಮರುಜನ್ಮ.

ಇಸ್ಮಾಯಿಲ್ ಜಬೀರ್ ಬಿ.
ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ನಮ್ಮಲ್ಲಿ ವಿದೇಶಿ ವಸ್ತುಗಳಿಗೆ ಗ್ರಾಹಕರಾಗಿರುವ ಶ್ರೀಮಂತ ವರ್ಗಕ್ಕೆ ನಮ್ಮ ಸಂಸ್ಕೃತಿ ಅಲರ್ಜಿಯಾಗಿ ಕಾಡುತ್ತದೆ. ವಿದೇಶಿ ಸಂಸ್ಕೃತಿಯೇ ಆಪ್ಯಾಯಮಾನವಾಗಿರುವ ಅವರಿಗೆ ಇಂಗ್ಲಿಷ್ ಭಾಷೆ ವರವಾಗಿದೆ. ಏಕೆಂದರೆ, ಅವರು ಶ್ರೀಸಾಮಾನ್ಯರಿಗಿಂತ ಭಿನ್ನ ಎಂಬುದನ್ನು ತೋರ್ಪಡಿಸಲು ಇಂಗ್ಲಿಷನ್ನು ಆಶ್ರಯಿಸಿದ್ದಾರೆ. ಹಾಗಾಗಿ ಅಂಥ ವಿದೇಶಿ ವ್ಯಾಮೋಹಿಗಳು ನಮಗೆ ಮಾದರಿಯಾಗ ಬೇಕಿಲ್ಲ. ಇಂದು ನಮ್ಮ ಬದುಕಿಗೆ ನಾವೇ ಮಾದರಿಯಾಗಬೇಕಾದರೆ ಜೀವನ ನಿರ್ವಹಣೆಗೆ ಆರ್ಥಿಕ ಸಬಲತೆ ನೀಡುವ ಉದ್ಯೋಗ ಬೇಕು. ಕಡ್ಡಾಯವಾಗಿ ಎಲ್ಲಾ ಮಕ್ಕಳು ಶಾಲೆಗೆ ಸೇರುವಂತಾಗಬೇಕು. ಎಲ್ಲಾ ಶಾಲೆಗಳಲ್ಲೂ ಏಕರೂಪದ ಶಿಕ್ಷಣ ಇರಬೇಕು. ಉಳ್ಳವರಿಗೊಂದು ಇಲ್ಲದವರಿಗೊಂದು ಎಂಬಂತಹ ಶಿಕ್ಷಣ ವ್ಯವಸ್ಥೆ ತೊಲಗಬೇಕು. ಎಲ್ಲಾ ವರ್ಗದ, ಎಲ್ಲಾ ಪ್ರಾಂತ್ಯದ ಮಕ್ಕಳಲ್ಲೂ ಸಮಾನತೆಯ ಭಾವನೆ ಮೂಡುವಂತಹ ವ್ಯವಸ್ಥೆ ರೂಢಿಗೊಳ್ಳಬೇಕು. ಶಿಕ್ಷಣ ವ್ಯಾಪಾರೀಕರಣವಾಗದೆ ಸರ್ವರಿಗೂ ಸಮನಾಗಿ ಲಭಿಸುವ ಮೂಲಭೂತ ಹಕ್ಕಾಗಬೇಕು. ಆಗ ಮಾತ್ರ ನಮ್ಮ ಭಾಷೆ, ಸಂಸ್ಕೃತಿ ಉಳಿದೀತು, ಪ್ರಜಾತಂತ್ರ ಯಶಸ್ವಿಯಾದೀತು.

# ನೆಲಮೂಲ ಸಂಸ್ಕೃತಿಯ ಶಿಕ್ಷಣದಿಂದ ನಾಡಿನ ಏಳ್ಗೆ

ಡಾ॥ ಸೋ. ಮು. ಭಾಸ್ಕರಾಚಾರ್

ಕರ್ನಾಟಕದಲ್ಲಿ ಇತ್ತೀಚೆಗೆ ಭುಗಿಲೆದ್ದಿರುವ ಶಿಕ್ಷಣದ ಭಾಷಾ ಮಾಧ್ಯಮ ಹಲವು ಹನ್ನೊಂದು ಚರ್ಚೆಗೆ ದಾರಿ ಮಾಡಿಕೊಟ್ಟಿದೆ. ಜನರ ಮೂಲಭೂತ ಸಮಸ್ಯೆಗಳನ್ನು ಸಮರ್ಪಕವಾಗಿ ನಿಭಾಯಿಸುವಲ್ಲಿ ವಿಫಲವಾದ ನಾಗರಿಕ ಸರ್ಕಾರಗಳು ಜನರ ಗಮನ ಬೇರೆಡೆಗೆ ತಿರುಗಿಸಲು ಇಂಥ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಒಂದನೇ ತರಗತಿಯಿಂದಲೇ ಇಂಗ್ಲಿಷ್ ಭಾಷೆ ಪರಿಚಯಿಸುವ ನಮ್ಮ ಸರ್ಕಾರದ ನೀತಿ ಇದಕ್ಕೆ ಉದಾಹರಣೆಯಾಗಿದೆ. ಒಂದನೇ ತರಗತಿಯಿಂದ ಇಂಗ್ಲಿಷ್ ಭಾಷೆಯನ್ನು ಕಡ್ಡಾಯಗೊಳಿಸುವುದರ ಫಲಶ್ರುತಿ ೧೫-೨೦ ವರ್ಷಗಳ ನಂತರ ದೊರೆಯುವಂತಹದು. ಈಗಾಗಲೇ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳ ಗುಣಮಟ್ಟ ಕುಸಿದಿರುವ ನಿದರ್ಶನ ಕಣ್ಣೆದುರಿಗಿದ್ದರೂ, ಜಾಣ ಕಿವುಡರಂತೆ ಸರ್ಕಾರ ಮಕ್ಕಳಿಗೆ ಹೊರೆಯಾಗುವ ಭಾಷಾ ನೀತಿ ತಾಳಿದೆ.

ಅಮೂರ್ತ ರೂಪದ ಭಾಷೆಯ ಮೂರ್ತರೂಪವೇ ಪ್ರಾಂತ್ಯ, ಸಾಹಿತ್ಯ, ಕಲೆ, ಸಂಸ್ಕೃತಿ, ಜೀವನ ವಿಧಾನ, ಒಕ್ಕೂಟದ ಬದುಕು. ಒಂದೊಂದು ಭಾಷೆಗೂ ತನ್ನದೇ ಆದ ಗುಣಲಕ್ಷಣ ಗಳುಂಟು. ಅದು ಅಲ್ಲಿನ ಜನಜೀವನದಲ್ಲಿ ಹಾಸುಹೊಕ್ಕಾಗಿರುತ್ತದೆ. ಅಂತಹ ಗುಣಲಕ್ಷಣಗಳೇ ಆ ಭಾಷೆಯ ವೈಶಿಷ್ಟ್ಯವೂ ಹೌದು. ಅಂತಹ ವೈಶಿಷ್ಟ್ಯಗಳನ್ನು ನಿರಂತರವಾಗಿ ಪೋಷಿಸಿಕೊಂಡು ಹೋಗುವುದರಲ್ಲಿ ಅಲ್ಲಿನ ಜನರ ಸಂಸ್ಕೃತಿಯ ಜೀವಂತಿಕೆಯನ್ನು ಕಾಣಬಹುದು. ಇಂತಹ ಸಂಸ್ಕೃತಿಯನ್ನು ಹೊಂದಿರುವ ಹಿರಿಮೆ ಕನ್ನಡ ಭಾಷೆಗಿದೆ. ಅನ್ಯ ಭಾಷೆಗಳಿಂದ ಹರಿದುಬರುವ ಭಾಷಿಕ ಸವಾಲುಗಳನ್ನು ಒಗ್ಗಿಸಿಕೊಳ್ಳುವ, ತನ್ನ ಭಾಷಿಕ ಸವಾಲುಗಳನ್ನು ಅನ್ಯಭಾಷೆಗೆ ನೀಡುವ ಕಸುವು ಕನ್ನಡಕ್ಕಿದೆ. ಇಂತಹ ಭಾಷೆಯನ್ನು ಮಕ್ಕಳ ಮನೋಭೂಮಿಕೆಯಲ್ಲಿ ಉಳಿಸಿ ಬೆಳೆಸುವ ಜವಾಬ್ದಾರಿ ನಮ್ಮದಾಗಬೇಕು.

ಹಲವು ಭಾಷೆಗಳ ಮೇಲಾಟಕ್ಕೆ ಸಿಕ್ಕಿಯೂ ತನ್ನತನವನ್ನು ಉಳಿಸಿಕೊಂಡು ಬಂದಿರುವ ಕನ್ನಡ ಭಾಷೆಗೆ ಇಂದು ಇಂಗ್ಲಿಷ್‌ನ ಮೇಲಾಟ ಗಂಭೀರ ಚರ್ಚೆಗೆ ದಾರಿಮಾಡಿಕೊಟ್ಟಿದೆ. ಕನ್ನಡಿಗರ ಸುಂದರ ಭವಿಷ್ಯ ಇಂಗ್ಲಿಷ್ ಭಾಷೆಯಿಂದ ಮಾತ್ರ ಎನ್ನುವಷ್ಟರಮಟ್ಟಿಗೆ ವಾದ, ಚರ್ಚೆಗಳು ನಡೆಯುತ್ತಿವೆ. ಇಂಗ್ಲಿಷ್ ಒಂದನೇ ತರಗತಿಯಿಂದಲೇ ಬೇಕೆಂಬ ವಾದ ಒಂದೆಡೆಯಾದರೆ, ಮೂರು ಅಥವಾ ಐದನೇ ತರಗತಿಯಿಂದ ಬರಲಿ ಎಂಬ ವಾದ ಮತ್ತೊಂದೆಡೆಯಾಗಿ ಇಂಗ್ಲಿಷ್ ಪರ-ವಿರೋಧದಲ್ಲಿ ಕರ್ನಾಟಕ ಮಾನಸಿಕವಾಗಿ ಇಬ್ಭಾಗಗೊಂಡಿದೆ.

ಇಂಗ್ಲಿಷ್ ಒಂದನೇ ತರಗತಿಯಿಂದಲೇ ಬೇಕೆಂದು ವಾದ ಮಾಡುತ್ತ ಕೆಲವರು ಕಾನ್ವೆಂಟ್‌ಗಳ ವಕ್ತಾರರಂತೆ ರಂಜಿಸಿ ಹೇಳಿದರೆ, ಇನ್ನು ಕೆಲವರು ಒಂದು ಜನಾಂಗದ ಯಜಮಾನರಂತೆ ವಕಾಲತ್ತು ವಹಿಸಿದ್ದಾರೆ. ಮತ್ತೆ ಕೆಲವರು ಸರ್ಕಾರ ತಾಳಿದ ನಿಲುವಿನ ಹಿಂದೆ ತಾವು ನಿಂತಂತೆ ಕಾಣಿಸಿಕೊಳ್ಳುತ್ತಿದ್ದಾರೆ. ಒಂದು ಕಡೆ ಜಾಗತೀಕರಣ ವ್ಯಾಪಾರೀಕರಣವನ್ನು ಒಕ್ಕೊರಲಿನಿಂದ ವಿರೋಧಿಸುವ ಇದೇ ಜನ ನವವಸಾಹತುಗಳಂತಿರುವ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಬೆಂಬಲಿಸಿ ಮಾತನಾಡುವುದು ವಿಚಿತ್ರವೆನಿಸಿದೆ. ಆದರೆ ಇವರ್‍ಯಾರೂ ಕೂಡ ಮುಗ್ಧ ಮಗುವಿನ ಮಾನಸಿಕ ಸ್ಥಿತಿ-ಗತಿಯ ಕಡೆ ಗಮನ ಹರಿಸಿದಂತೆ ಕಾಣುತ್ತಿಲ್ಲ.

ಇಂಗ್ಲಿಷ್ ಮಾತ್ರವಲ್ಲ, ಇತರೆ ಯಾವ ಭಾಷೆಯನ್ನೂ ಕಲಿಯಬಾರದೆಂಬುದು ಯಾರ ನಿಲುವೂ ಅಲ್ಲ. ಸ್ವಇಚ್ಛೆಯಿಂದ ಇಂಗ್ಲಿಷ್ ಕಲಿಯುವುದೇ ಬೇರೆ, ಪ್ರಾಥಮಿಕ ಮಕ್ಕಳ ಪಠ್ಯಕ್ಕೆ ನಿಗದಿಗೊಳಿಸುವುದೇ ಬೇರೆ. ಈಗಿನ ಚರ್ಚೆ ಪಠ್ಯದಲ್ಲಿ ಇಂಗ್ಲಿಷ್ ಸರಳೀಕರಣಗೊಳ್ಳುವುದರ ಬಗ್ಗೆಯೇ ಕುರಿತದ್ದಾಗಿದೆ. ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಬೇಕೆಂಬ ಸರ್ಕಾರದ ನಿಲುವಿನಲ್ಲಿ ಕಲಿಯಬೇಕಾದ ಮಗುವಿನ ವಯೋಮಾನ, ಮಾನಸಿಕ ಹಾಗೂ ದೈಹಿಕ ಸಾಮರ್ಥ್ಯದ ಚರ್ಚೆಗಿಂತ ಭವಿಷ್ಯದ ಲಾಭವೊಂದನ್ನೇ ಊಹಿಸಿಕೊಂಡಂತಿದೆ.

ಪ್ರಾಥಮಿಕ ಹಂತದ ಮಗು ಎಷ್ಟು ಭಾಷೆಗಳನ್ನಾದರೂ ಕಲಿಯಬಹುದೆಂಬ ಇಂಗ್ಲಿಷ್

ಭಾಷಾಭಿಮಾನಿಗಳ ಹೇಳಿಕೆ ನಿಜವಿರಬಹುದು. ಆದರೆ ನಮ್ಮ ದೇಶದ ಮಕ್ಕಳ ದೈಹಿಕ ಸಾಮರ್ಥ್ಯ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಹಿನ್ನೆಲೆ ಗಮನಿಸಿದಾಗ ಈ ಮಾತು ಹೇಳಲು ಸಾಧ್ಯವಿಲ್ಲ. ಪೌಷ್ಟಿಕಾಂಶದ ಕೊರತೆಯಿಂದ, ಬಡತನದ ಬವಣೆಯಿಂದ, ಅಜ್ಞಾನದ ಹೊರೆಯಿಂದ ನರಳುತ್ತಿರುವ ಗ್ರಾಮೀಣ ಪರಿಸರದ ಲಕ್ಷಾಂತರ ಕುಟುಂಬಗಳು ಬೆಳಗು ಬೈಗಿನ ಲೆಕ್ಕಾಚಾರದಲ್ಲಿ ಹೊಟ್ಟೆಪಾಡಿಗಾಗಿ ನಿರಂತರ ಗುಳೆ ಹೋಗುವ ಸ್ಥಿತಿಯಲ್ಲಿದ್ದಾರೆ. ಸಕಲ ಸೌಲಭ್ಯ ಹೊಂದಿರುವ ನಗರ ಕೇಂದ್ರಿತ ಕುಟುಂಬಗಳಿಗಿಂತ ಹೆಚ್ಚು ಮಂದಿ ಅಲೆಮಾರಿ ಜೀವನ ನಡೆಸುತ್ತಿರುವ ಜನರಿರುವಾಗ, ಅಂತಹವರ ಮಕ್ಕಳು ಶಾಲೆಗೆ ಸೇರಿ ಕನ್ನಡದಲ್ಲಿ ಕಲಿಯುವುದೇ ಕಷ್ಟ ಎನಿಸಿರುವಾಗ ನಮ್ಮದಲ್ಲದ ಇಂಗ್ಲಿಷ್‌ಅನ್ನು ಒಂದನೇ ತರಗತಿಯಿಂದಲೇ ಕಲಿಸಬೇಕೆಂದು ಹೇಳುವುದು ಎಷ್ಟು ಸಮಂಜಸ ? ಕರ್ನಾಟಕದಲ್ಲಿ ಹುಟ್ಟಿದ ಮಕ್ಕಳೆಲ್ಲರೂ ವಿದೇಶಿ ನೆಲದಲ್ಲೆ ಬದುಕು ರೂಪಿಸಿಕೊಳ್ಳುತ್ತಾರೆಂಬ ವಾದ ಎಷ್ಟು ಸರಿ ? ಎಲ್ಲರಿಗಾಗಿ ಶಿಕ್ಷಣವೋ ಕೆಲವರಿಗಾಗಿ ಶಿಕ್ಷಣವೋ ? ಇಂತಹ ಅನೇಕ ಪ್ರಶ್ನೆಗಳು ಎದುರಾಗುತ್ತವೆ.

ಇನ್ನು ನಗರದ ಖಾಸಗಿ ಶಾಲೆಗಳೊಂದಿಗೆ ಹಳ್ಳಿಗಳ ಸರ್ಕಾರಿ ಶಾಲೆಗಳನ್ನು ಹೋಲಿಸುವುದು ಎಷ್ಟು ಉಚಿತ ? ಕಾನ್ವೆಂಟ್‌ಗಳಲ್ಲಿ ಮಗುವಿಗೆ ಇಂಗ್ಲಿಷ್‌ನ ಅಕ್ಷರಗಳು, ಶಬ್ದಗಳು ಪರಿಚಯವಾಗುವುದಲ್ಲದೆ, ಚಿತ್ರ ಜೋಡಣೆ, ಮಗ್ಗಿ, ಕಂಪ್ಯೂಟರ್ ಕಲಿಕೆಗೆ ಅವಕಾಶವಿದೆ. ಇಂಥ ಮಗು ಭವಿಷ್ಯದಲ್ಲಿ ಮೇಧಾವಿಯಾಗುತ್ತದೆ ಎಂಬ ಮಾತುಗಳು ಕಾನ್ವೆಂಟ್‌ಗಳ ಜಾಹೀರಾತಿನಂತಿವೆ. ಇಂಗ್ಲಿಷ್ ಭಾಷೆಯನ್ನು ಒಂದನೇ ತರಗತಿಯಿಂದ ಪರಿಚಯಿಸಿದರೆ ಇವೆಲ್ಲವೂ ಮಗುವಿಗೆ ಸರಾಗವಾಗಿ ಹರಿದುಬರಬಲ್ಲವೆ ?

ಹೈಟೆಕ್ ಸಿಟಿಗಳಲ್ಲಿ ಬೆರಳೆಣಿಕೆಗೆ ಸಿಗುವ ಶ್ರೀಮಂತ ಕಾನ್ವೆಂಟ್‌ಗಳಂತೆಯೇ ಕರ್ನಾಟಕದಲ್ಲಿ ಇರುವ ಎಲ್ಲಾ ಕಾನ್ವೆಂಟ್‌ಗಳೂ ಇವೆ ಎಂಬ ಹುಸಿ ಪ್ರಚಾರ ಸರಿಯೆ ? ಅಥವಾ ಈ ಸೌಲಭ್ಯಗಳನ್ನು ಎಲ್ಲಾ ಖಾಸಗಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಕಾಣಲು ಸಾಧ್ಯವೆ ?

ಬಾಲ್ಯದಲ್ಲಿ ಮಗುವಿಗೆ ಎಂತಹ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ಹೇಗೆ ಕಲಿಸಬೇಕೆಂಬುದನ್ನು ವೈಜ್ಞಾನಿಕವಾಗಿ ಶಿಕ್ಷಣ ತಜ್ಞರು ನಿರ್ಧರಿಸಿದ್ದಾರೆ. ಅದಕ್ಕೆ ಪೂರಕವಾಗಿ ತರಬೇತಿ ಹೊಂದಿದ ಶಿಕ್ಷಕರನ್ನು ಸರ್ಕಾರಿ ಶಾಲೆಗೆ ನೇಮಿಸುತ್ತಾರೆ. ಅಂತಹ ಶಾಲೆಗಳಲ್ಲಿ ಮಕ್ಕಳು ಮನೋಲ್ಲಾಸದೊಂದಿಗೆ ಮನೋವಿಕಾಸಕ್ಕೊಳಗಾಗುತ್ತಾರೆ. ಆದರೆ ಕಾನ್ವೆಂಟ್‌ಗಳಲ್ಲಿ ಯಾವ ವಿಷಯವನ್ನೇ ಆಗಲಿ ಬೋಧಿಸಲು ತರಬೇತಿ ಹೊಂದಿದ ಶಿಕ್ಷಕರಿರುವುದಿಲ್ಲ. ಉದ್ಯೋಗದ ಭದ್ರತೆ ಇಲ್ಲದೆ, ಅಲ್ಪ ಪಗಾರಕ್ಕೆ ಅಪಾರ ದುಡಿತಕ್ಕೆ ಒಳಗಾಗಿ ಶಿಕ್ಷಕರು ಉತ್ತಮ ಹುದ್ದೆ ಸಿಕ್ಕಾಗ ಯಾವ ಸಂದರ್ಭದಲ್ಲಾದರೂ ಹೊರಟು ಹೋಗುತ್ತಾರೆ. ಆದರೂ 'ಪ್ರತಿಷ್ಠಿತ ಕಾನ್ವೆಂಟ್' ಎಂಬ ಬೋರ್ಡ್ ತಗುಲಿಸಿಕೊಂಡು ಶಿಕ್ಷಣವನ್ನು ದುಬಾರಿ ಸರಕಾಗಿ ವಿಕ್ರಯಿಸುವುದರಲ್ಲಿ ನಿಸ್ಸೀಮರಾಗಿದ್ದಾರೆ.

ಕಾನ್ವೆಂಟ್‌ಗಳಲ್ಲಿ ನೀಡಲಾಗುವ ಶಿಕ್ಷಣ ಮಗುವಿಗೆ ಹೊರೆ ಮಾತ್ರವಲ್ಲ, ಪೋಷಕರಿಗೆ ದುಬಾರಿಯೂ ಹೌದು. ಮುಗ್ಧ ಮಗುವಿನ ಮೇಲೆ ನಿರ್ದಯದಿಂದ ನಾನಾ ರೀತಿಯ ಭಾರ ಹೇರುವುದನ್ನೇ ಭವಿಷ್ಯದಲ್ಲಿ ಎದುರಾಗುವ ಸವಾಲುಗಳನ್ನು ಎದುರಿಸುವ ಸಾಮರ್ಥ್ಯವನ್ನು ಕಾನ್ವೆಂಟ್‌ಗಳು ನೀಡುತ್ತವೆ ಎಂದು ಪ್ರಶಂಸಿಸುವುದು, ಚಿಕುನ್ ಗುನ್ಯ ರೋಗವನ್ನು ಶಕ್ತಿ ದೇವತೆಯ ಆರಾಧನೆಯಿಂದ ನಿವಾರಿಸಿಕೊಳ್ಳಬಹುದು ಎಂದು ಹೇಳಿದಂತಾಗುತ್ತದೆ. ಬಿಡುವಿಲ್ಲದ ಓದು, ವಿಶ್ರಾಂತಿಯಿಲ್ಲದ ಮನೆಗೆಲಸ, ಕತ್ತೆ ಹೇರು ಹೊತ್ತಂತೆ ಪುಸ್ತಕಗಳ ಹೊರೆಯಿಂದ ಮಗು ಬಳಲುವುದನ್ನು ಕಂಡಾಗ ಕರುಳು ಕಿತ್ತುಬರುತ್ತದೆ. ಕೋಣೆಗಳಲ್ಲಿ ಕಲಿಯುವುದಕ್ಕಿಂತ ಮೈದಾನದಲ್ಲಿ - ಗುಂಪುಗಳಲ್ಲಿ ಕಲಿಯುವುದು ಹೆಚ್ಚು ವಿಕಾಸಶೀಲವಾದದ್ದು. ಆದರೆ ಉಸಿರುಕಟ್ಟುವ ಕೋಣೆಗಳಲ್ಲಿ ಬಂದಿಯಾಗಿ ನರಳುವ ಮಕ್ಕಳನ್ನು ಕಂಡಾಗ ವ್ಯಥೆಯಾಗುತ್ತದೆ. ಆಟದ ಮೈದಾನವಿಲ್ಲ, ವಿಶಾಲವಾದ ಕೊಠಡಿಗಳಿಲ್ಲ, ತರಬೇತಿಗೊಂಡ ಕಾಯಂ ಶಿಕ್ಷಕರಿಲ್ಲ, ಸಂಗೀತ ಕಲೆಗಳ ಸ್ಪರ್ಶವಿಲ್ಲ, ನಮ್ಮ ಸಂಸ್ಕೃತಿಯ ಗಂಧ ಗಾಳಿ ಇಲ್ಲವೇ ಇಲ್ಲ. ಇಂಥ ಇಲ್ಲ ಇಲ್ಲಗಳ ಮಧ್ಯೆಯೇ ಎಲ್ಲೂ ಇಲ್ಲದ್ದು ನಮ್ಮಲ್ಲಿ ಇದೆ ಎಂಬ ಭ್ರಮೆಯ ಬಲೂನಿನಲ್ಲಿ ತೇಲಿಸುವ ಕಾನ್ವೆಂಟ್‌ನವರು ಸಮಾಜದ ವಂಚಕರು ಮಾತ್ರವಲ್ಲ, ಸಂಸ್ಕೃತಿಯ ನಾಶಕರೂ ಹೌದು. ಇವರು ಸಮಾಜ ಸೇವಕರಲ್ಲ, ಸಮಾಜದ ಸುಲಿಗೆಕೋರರು ಎಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕಾಗಿದೆ.

ನಮ್ಮಲ್ಲಿ ವಿದೇಶಿ ವಸ್ತುಗಳಿಗೆ ಗ್ರಾಹಕರಾಗಿರುವ ಶ್ರೀಮಂತ ವರ್ಗಕ್ಕೆ ನಮ್ಮ ಸಂಸ್ಕೃತಿ ಅಲರ್ಜಿಯಾಗಿ ಕಾಡುತ್ತದೆ. ವಿದೇಶಿ ಸಂಸ್ಕೃತಿಯೇ ಆಪ್ಯಾಯಮಾನವಾಗಿರುವ ಅವರಿಗೆ ಇಂಗ್ಲಿಷ್ ಭಾಷೆ ವರವಾಗಿದೆ. ಏಕೆಂದರೆ, ಅವರು ಶ್ರೀಸಾಮಾನ್ಯರಿಗಿಂತ ಭಿನ್ನ ಎಂಬುದನ್ನು ತೋರ್ಪಡಿಸಲು ಇಂಗ್ಲಿಷನ್ನು ಆಶ್ರಯಿಸಿದ್ದಾರೆ. ಹಾಗಾಗಿ ಅಂಥ ವಿದೇಶಿ ವ್ಯಾಮೋಹಿಗಳು ನಮಗೆ ಮಾದರಿಯಾಗಬೇಕಿಲ್ಲ. ಇಂದು ನಮ್ಮ ಬದುಕಿಗೆ ನಾವೇ ಮಾದರಿಯಾಗಬೇಕಾದರೆ ಜೀವನ ನಿರ್ವಹಣೆಗೆ ಆರ್ಥಿಕ ಸಬಲತೆ ನೀಡುವ ಉದ್ಯೋಗ ಬೇಕು. ಕಡ್ಡಾಯವಾಗಿ ಎಲ್ಲಾ ಮಕ್ಕಳು ಶಾಲೆಗೆ ಸೇರುವಂತಾಗಬೇಕು. ಎಲ್ಲಾ ಶಾಲೆಗಳಲ್ಲೂ ಏಕರೂಪದ ಶಿಕ್ಷಣವಿರಬೇಕು. ಉಳ್ಳವರಿಗೊಂದು ಇಲ್ಲದವರಿಗೊಂದು ಎಂಬಂತಹ ಶಿಕ್ಷಣ ವ್ಯವಸ್ಥೆ ತೊಲಗಬೇಕು. ಎಲ್ಲಾ ವರ್ಗದ, ಎಲ್ಲಾ ಪ್ರಾಂತ್ಯದ ಮಕ್ಕಳಲ್ಲೂ ಸಮಾನತೆಯ ಭಾವನೆ ಮೂಡುವಂತಹ ವ್ಯವಸ್ಥೆ ರೂಢಿಗೊಳ್ಳಬೇಕು. ಶಿಕ್ಷಣ ವ್ಯಾಪಾರೀಕರಣವಾಗದೆ ಸರ್ವರಿಗೂ ಸಮನಾಗಿ ಲಭಿಸುವ ಮೂಲಭೂತ ಹಕ್ಕಾಗಬೇಕು. ಆಗ ಮಾತ್ರ ನಮ್ಮ ಭಾಷೆ, ಸಂಸ್ಕೃತಿ ಉಳಿದೀತು, ಪ್ರಜಾತಂತ್ರ ಯಶಸ್ವಿಯಾದೀತು.

ಪ್ರಾಥಮಿಕ ಹಂತದ ಮುಗ್ಧ ಮಕ್ಕಳಿಗೆ ಜ್ಞಾನ ಮಾತೃಭಾಷೆಯ/ಪರಿಸರದ ಭಾಷೆಯ ಮುಖೇನ ಸರಾಗವಾಗಿ ಹರಿದಾಗ ಅದನ್ನು ಮಕ್ಕಳು ಸಲೀಸಾಗಿ ಅರಗಿಸಿಕೊಳ್ಳುತ್ತವೆ. ಗಾಂಧೀಜಿಯವರೂ ಕೂಡ ಇದನ್ನೇ ಬಯಸಿದ್ದರು. ''ಮಾತೃಭಾಷೆಯ ಯೋಗ್ಯ ಶಿಕ್ಷಣವೇ ವಿದ್ಯಾಭ್ಯಾಸದ ಅಡಿಗಲ್ಲು'' ಎಂದು ಸಾರಿದ್ದು ಈ ಅರ್ಥದಲ್ಲೆ. ಸುಲಭವಾಗಿ ಗ್ರಹಿಸಲು ಸಾಧ್ಯವಾಗದ ಭಾಷೆಯಲ್ಲಿ ಕಲಿಯಬೇಕೆಂದರೆ ನೀರಿಳಿಯದ ಗಂಟಲಲ್ಲಿ ಕಡುಬು ತುರುಕಿದಂತೆ ಹಿಂಸೆಯಾಗುತ್ತದೆ. ತಾಯಿನುಡಿಯ ಮೂಲಕ ಜ್ಞಾನ ಉಣಿಸುವುದು ನಮ್ಮ ಕರ್ತವ್ಯವಾಗಬೇಕು. ಆದರೆ ಇಂದು ಜ್ಞಾನ ಕಡೆಗಣಿಸಿ, ತಾಯಿನುಡಿ ಕೈಬಿಟ್ಟು, ಪರಭಾಷೆ ಉಣಿಸುವುದೇ ಶಿಕ್ಷಣದ ಗುರಿಯಾಗಿದೆ.

ಅನ್ಯ ಭಾಷೆಗಳ ಪರಿಚಯ ನಮ್ಮ ಮಕ್ಕಳಿಗೆ ಬೇಡವೆಂದಲ್ಲ. ಆದರೆ ಆ ಕಲಿಕೆಯನ್ನು ವಯೋಮಾನದ ಹಿನ್ನೆಲೆಯಲ್ಲಿ ರೂಢಿಗೆ ತರಬೇಕು. ಕಲಿಕೆಯ ಕುತೂಹಲ, ಕಾಳಜಿ, ಆಸಕ್ತಿ ಮಾತೃಭಾಷೆಯ ಮೂಲಕ ಮೂಡುತ್ತದೆ. ಹಾಗಾಗಿ ಮಗು ಕಲಿಕೆಯ ಹಾದಿ ಹಿಡಿದಾಗ ಕ್ರಮೇಣ ಇತರೆ ಯಾವ ಭಾಷೆಗಳನ್ನಾದರೂ ಪ್ರೀತಿಯಿಂದ ಸ್ವೀಕರಿಸಿ ಅರಗಿಸಿಕೊಳ್ಳುತ್ತದೆ.

ಈಗಾಗಲೇ ಕಾನ್ವೆಂಟ್ ಶಿಕ್ಷಣದಿಂದ ಕಾಲೇಜು ಶಿಕ್ಷಣ ತಲುಪುತ್ತಿರುವ ಬಹಳಷ್ಟು ಮಕ್ಕಳಲ್ಲಿ ಸೃಜನಶೀಲ ಚಿಂತನೆ ಕಡಿಮೆಯಾಗಿದೆ. ಬರವಣಿಗೆಯ ಸೊಗಸು ಹಾಳಾಗಿದೆ. ನಮ್ಮ ಕಲೆ ಸಾಹಿತ್ಯ ಸಂಸ್ಕೃತಿಯ ಅರಿವು ಇಲ್ಲದಾಗಿದೆ. ಶಾಲಾ ಮಕ್ಕಳು ಇತ್ತ ಇಂಗ್ಲಿಷಿನಲ್ಲೂ ಶ್ರದ್ಧೆಯಿಲ್ಲದ, ಅತ್ತ ಕನ್ನಡದಲ್ಲೂ ಆಸಕ್ತಿಯಿಲ್ಲದ ಎಡಬಿಡಂಗಿಗಳಾಗಿದ್ದಾರೆ. ಆದ್ದರಿಂದ ಈಗ ಚಾಲ್ತಿಯಲ್ಲಿರುವಂತೆ ಪ್ರಾಥಮಿಕ ಶಿಕ್ಷಣವನ್ನು ಪೂರ್ಣವಾಗಿ ಮಾತೃಭಾಷೆ/ಪರಿಸರದ ಭಾಷೆಯಲ್ಲಿ ನೀಡಿ, ಐದನೇ ತರಗತಿಯಿಂದ ಇಂಗ್ಲಿಷ್ ಭಾಷೆ ಪರಿಚಯಿಸುವುದು ವಿದ್ಯಾರ್ಥಿಗಳ ಕಲಿಕಾ ದೃಷ್ಟಿಯಿಂದ ಸಾಧುವೆನಿಸುತ್ತದೆ. ಪ್ರೌಢಶಾಲೆ ಹಂತದಿಂದ ಇಂಗ್ಲಿಷ್ ಮಾಧ್ಯಮವನ್ನು ಐಚ್ಛಿಕವಾಗಿಸಿದರೆ ಆಸಕ್ತ ಮಕ್ಕಳು ಕಲಿಯಲು ಸುಲಭವಾಗುತ್ತದೆ.

ಇತ್ತೀಚಿನ ಎಸ್.ಎಸ್.ಎಲ್.ಸಿ./ಪಿ.ಯು.ಸಿ. ಫಲಿತಾಂಶ ಗಮನಿಸಿದಾಗ ಗ್ರಾಮೀಣ ಪರಿಸರದಿಂದ ಬಂದ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಮೇಲುಗೈ ಸಾಧಿಸಿರುವುದು ಕಣ್ಣೆದುರಿನ ಉದಾಹರಣೆಯಾಗಿದೆ. ಹಾಗಾಗಿ ಶಿಕ್ಷಣದ ಗುಣಮಟ್ಟ ಇಂಗ್ಲಿಷ್ ಮಾಧ್ಯಮದಿಂದಾಗಲಿ, ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಕೆಯಿಂದಾಗಲಿ ಸುಧಾರಿಸುವುದಿಲ್ಲ. ಅದು ಸ್ಥಳೀಯ ಭಾಷೆ ಹಾಗೂ ಅಲ್ಲಿನ ಅಧ್ಯಾಪಕರ ಶಿಸ್ತುಬದ್ಧ ಬೋಧನೆಯಲ್ಲಿದೆ ಎಂಬುದನ್ನು ಮರೆಯಬಾರದು.

ನಗರದ ಜನಕ್ಕೆ ಶಿಕ್ಷಣವೆಂದರೆ ಎಂಜಿನಿಯರಿಂಗ್, ಮೆಡಿಕಲ್ ಎಂಬಂತಾಗಿದೆ. ವಿಶಾಲ ಜ್ಞಾನಶಾಖೆಗಳ ಪರಿವಿಲ್ಲದೆ ಕೇವಲ ವಿದೇಶಿ ನೆಲದಲ್ಲಿ/ವಿದೇಶಿ ಕಂಪನಿಗಳಲ್ಲಿ ಹಣ ಗಳಿಸುವ ದುರಾಸೆ ಜನರಿಗೆ ಬದುಕಿನ ವೈವಿಧ್ಯತೆಯ ಪಾಠ ಹೇಳಬೇಕಾಗಿದೆ. ವಿದೇಶಿ ಕಂಪನಿಗಳಲ್ಲಿ ಜೀತದಾಳುಗಳಾಗಿಸುವ ಶಿಕ್ಷಣ ನೀಡುವುದಷ್ಟೇ ನಮ್ಮ ಗುರಿಯಾಗಬಾರದೆಂದು ನಮ್ಮ ರಾಷ್ಟ್ರಪತಿಗಳಾದ ಎ.ಪಿ.ಜೆ. ಅಬ್ದುಲ್ ಕಲಾಂ ಈಗಾಗಲೆ ಎಚ್ಚರಿಸಿರುವುದನ್ನು ಗಣಿಸಬೇಕಾಗಿದೆ. ದೇಶ ಕಟ್ಟುವ, ಸತ್ಪ್ರಜೆಗಳನ್ನಾಗಿ ರೂಪಿಸುವ ಶಿಕ್ಷಣ ನಮ್ಮದಾಗಬೇಕು. ಹಾಗಾಗಿ ನೆಲಮೂಲ ಸಂಸ್ಕೃತಿಯನ್ನು ಆಧರಿಸಿದ ಶಿಕ್ಷಣದಿಂದ ದೇಶದ ಏಳ್ಗೆ ಸಾಧ್ಯವೆಂಬುದನ್ನು ಮನಗಾಣಬೇಕಾಗಿದೆ.

ಇನ್ನು ಸರ್ಕಾರಿ ಶಾಲೆಗಳ ಬಗ್ಗೆ ಪೋಷಕರು ತಾಳಿರುವ ಕಾಮಾಲೆ ನೋಟವನ್ನು ಬದಲಿಸಬೇಕಾಗಿದೆ. ಅಲ್ಲಿನ ಕೊರತೆ ಹಾಗೂ ದೋಷಗಳನ್ನು ಎತ್ತಾಡುವುದನ್ನು ಬಿಟ್ಟು ಅವುಗಳನ್ನು ನಿವಾರಿಸಿ, ಖಾಸಗಿ ಶಾಲೆಗಳ ಗುಣಮಟ್ಟಕ್ಕಿಂತ ಸರ್ಕಾರಿ ಶಾಲೆಗಳ ಗುಣಮಟ್ಟ ಉತ್ತಮಗೊಳಿಸುವ ಕಡೆ ನಮ್ಮ ಗಮನ ಹರಿಯಬೇಕು. ಆ ನಿಟ್ಟಿನಲ್ಲಿ ಸರ್ಕಾರ ಹಾಗೂ ಸಂಘ ಸಂಸ್ಥೆಗಳು ಕ್ರಿಯಾಶೀಲವಾಗಬೇಕು. ಕರ್ನಾಟಕದಾದ್ಯಂತ ಏಕರೂಪ ಶಿಕ್ಷಣ, ಏಕರೂಪದ ನಿಯಮ ಹಾಗೂ ಏಕರೂಪದ ಆಡಳಿತವನ್ನು ಕೊಟ್ಟಾಗ ಶಿಕ್ಷಣ ಮಾಧ್ಯಮದ ಗೊಂದಲ ನಿವಾರಣೆಯಾಗುತ್ತದೆ. ಶಿಕ್ಷಣದ ವ್ಯಾಪಾರೀಕರಣ ತೊಲಗಿ ಶಿಕ್ಷಣದ ಪಾವಿತ್ರ್ಯತೆ ಉಳಿಯುತ್ತದೆ.

ಡಾ|| ಸೋ. ಮು. ಭಾಸ್ಕರಾಚಾರ್
'ಬೆಳಗು', ೨ನೇ ಕ್ರಾಸ್, ಮಹಾಲಕ್ಷ್ಮೀ ನಗರ (ಸಾಬರ ಪಾಳ್ಯದ ಹತ್ತಿರ), ಬಟವಾಡಿ, ತುಮಕೂರು-೫೭೨೧೦೩

# ಆಧುನಿಕತೆಯ ಅಸ್ತವ್ಯಸ್ತತೆಯನ್ನು ಕೊಲಾಜ್ ಆಗಿಸುವ ಕಾವ್ಯ




**ಮಂ**ಜುನಾಥ ವಿ. ಎಂ. – ಅಪಾರವಾದ ಆತ್ಮವಿಶ್ವಾಸ ಮತ್ತು ಕಾವ್ಯದ ಕಸುಬಿನ ಬಗೆಗಿರುವ ಪ್ರಾಮಾಣಿಕ ಪ್ರೀತಿಯಿಂದ, ಕನ್ನಡದ ಸಾಂಸ್ಕೃತಿಕ ವಲಯದಲ್ಲಿ ತನಗೊಂದು ನಿರ್ದಿಷ್ಟ ರೀತಿಯ ಸ್ಥಾನವನ್ನು ಸ್ಥಾಪಿಸಿಕೊಳ್ಳುತ್ತಿರುವ ಕವಿ. ಇತ್ತೀಚೆಗೆ ಕಾವ್ಯ ರಚಿಸುತ್ತಿರುವವರಲ್ಲಿ, ಆಧುನಿಕ ಕನ್ನಡ ಕಾವ್ಯ ಪರಂಪರೆಗಿರುವ ಘನತೆಯನ್ನು ಮುಂದುವರೆಸುವ ಹಾಗೂ ಹೊಸ ತಲೆಮಾರಿಗಿರಲೇಬೇಕಾದ ಗಾಂಭೀರ್ಯ ಮತ್ತು ಎಚ್ಚರಿಕೆಯನ್ನು ಮಂಜುನಾಥರ ಕವಿತೆಗಳು ನಿಸ್ಸಂದೇಹವಾಗಿ ಕಾಯ್ದುಕೊಂಡಿವೆ ಎಂಬ ಕಾರಣಕ್ಕಾಗಿ, ಇವರ ರಚನೆಗಳು ಈಗ ಅನೇಕರ ಗಮನವನ್ನೂ ಸೆಳೆದಿವೆ.

ಈಗಾಗಲೆ ಇವರ 'ಫಾದರ್ ೫೫ ಮತ್ತು ನೀನಾಸಂ ಡೈರಿಯ ಕವಿತೆಗಳು' (೨೦೦೪) ಹಾಗೂ 'ಲೆವೆಲ್ ಕ್ರಾಸಿಂಗ್' (೨೦೦೫) ಎಂಬ ಎರಡು ಸಂಕಲನಗಳು ಪ್ರಕಟವಾಗಿವೆ. ಕಥೆ, ಕವನ, ನಾಟಕ, ಚಿತ್ರಕಲೆ, ಪತ್ರಿಕೋದ್ಯಮ ಎಂದು ಹಲವಾರು ಗೀಳುಗಳ ಜೊತೆಗೆ ಬದುಕುತ್ತಿರುವ ಮಂಜುನಾಥ್, ಪಿ.ಯು.ಸಿ.ಯ ನಂತರ, ನೀನಾಸಂನಿಂದ ಪದವಿ ಪಡೆದು, ನಾಟಕಗಳನ್ನು ನಿರ್ದೇಶಿಸುತ್ತಾ, ಈಗ ಸದ್ಯಕ್ಕೆ ಕನ್ನಡದ ಹಲವು ಮುಖ್ಯ ನಿಯತಕಾಲಿಕಗಳಿಗೆ ಫ್ರೀಲ್ಯಾನ್ಸ್ ಕಲಾವಿದರಾಗಿ ಕೆಲಸ ಮಾಡುತ್ತಿದ್ದಾರೆ.

**ಬಿ. ಯು. ಸುಮಾ**

ಮಂಜುನಾಥರ ಕವಿತೆಗಳು ವಿಶಿಷ್ಟ ರೀತಿಯ ರಚನೆಗಳಾಗುವುದಕ್ಕೆ ಕೆಲವು ಕಾರಣಗಳಿವೆ : ಇವು, ಅಕೆಡೆಮಿಕ್ ಕಲಿಕೆಯ ಶಿಸ್ತಿನಿಂದ ಕಂಡೀಷನ್ಡ್ ಆದ ಕವಿತೆಗಳಲ್ಲ. ಆದ್ದರಿಂದ, ಸಿದ್ಧ ಮಾದರಿಗಳಿಗೆ ಜೋತುಬೀಳುವುದಿಲ್ಲ. ಬಹಳ ಮುಖ್ಯವಾದ ಈ ಒಂದು ಅಂಶವೇ ಕಾವ್ಯಾಕೃತಿ, ಆಶಯ ಮತ್ತು ಪ್ರತಿಮಾ ನಿರ್ಮಾಣ ವಿಧಾನದಲ್ಲಿ ವಿಭಿನ್ನವಾದ ಒಂದು ಶಿಫ್ಟ್‌ಅನ್ನು ಪಡೆದುಕೊಳ್ಳುವುದಕ್ಕೆ ಕಾರಣವಾಗಿದೆ. ಆದರೆ, ತಮ್ಮ ಬದುಕಿಗೆ ಹತ್ತಿರವಾದ, ಆ ಅನುಭವದ ಎಲ್ಲಾ ವೈರುಧ್ಯಗಳನ್ನೂ ಸಾಂದ್ರವಾಗಿ ಕಥನವಾಗಿಸುವ ಕೃತಿಕಾರರ ಪ್ರಭಾವವನ್ನು ಪ್ರಜ್ಞಾಪೂರ್ವಕವಾಗಿಯೇ ಉಳಿಸಿಕೊಂಡಿದ್ದಾರೆ. ಕನ್ನಡದ ಕಥನ ಮತ್ತು ಭಾಷೆಗೆ ಹೊಸ ರೀತಿಯ ಚಲನಶೀಲತೆಯನ್ನು ತಂದುಕೊಟ್ಟ ಲಂಕೇಶ್‌ರ ಬರಹಗಳನ್ನು ಅತ್ಯಂತ ಆಪ್ತವಾಗಿಸಿಕೊಂಡು, ಅವುಗಳ ಸಾಧ್ಯತೆಗಳನ್ನು ವಿಸ್ತರಿಸುತ್ತಿದ್ದಾರೆ. ಹೀಗೆ, ಈ ಕವಿತೆಗಳು, ಒಂದು ರೀತಿಯಲ್ಲಿ ಅಧಿಕೃತವಾಗಿ ಪರಂಪರೆಯ ಹೊರೆಯನ್ನು ನೀಗಿಕೊಳ್ಳುತ್ತಲೇ, ಇನ್ನೊಂದು ರೀತಿಯಲ್ಲಿ ಅನಾಯಾಸವಾಗಿ ಇದಕ್ಕೆ ಹಕ್ಕುದಾರಿಕೆಯನ್ನೂ ಸ್ಥಾಪಿಸಿಕೊಳ್ಳುತ್ತವೆ.



ಎರಡೂ ಸಂಕಲನಗಳಲ್ಲಿ ಐವತ್ತಕ್ಕಿಂತ ಹೆಚ್ಚಿನ ಕವಿತೆಗಳಿವೆ. ಆಧುನಿಕತೆಯ ಅನುಭವ, ಹೆಣ್ಣು ಹಾಗೂ ಗಂಡು-ಹೆಣ್ಣಿನ ಸಂಬಂಧ, ಈ ಕವಿತೆಗಳ ಮುಖ್ಯ ಆಶಯಗಳಾಗಿವೆ. ಇವುಗಳನ್ನು ವ್ಯಾಖ್ಯಾನಿಸಿಕೊಳ್ಳುವಾಗ, ತನ್ನ ವೈಯಕ್ತಿಕ ಅನುಭವ ಮಾತ್ರ ಪ್ರಾಮಾಣ್ಯವಾಗುವುದರಿಂದ, ಎಲ್ಲಿಯೂ ಆರೋಪಿತ ಅಥವಾ 'ಸೂಡೋ' ಎನಿಸುವಂಥ ವಿಚಾರಗಳು ಸುಳಿಯುವುದಿಲ್ಲ. ಮುಂದೆ, ಈ ವಿಷಯಗಳನ್ನು ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

ಮಂಜುನಾಥರ ಕವಿತೆಗಳು ನಗರದ ಅಸ್ತವ್ಯಸ್ತ ಬದುಕಿನ ಕಕ್ಕಾಬಿಕ್ಕಿತನವನ್ನು ಯಾವುದೇ 'ಇಸಂ'ಗೆ ಜೋತುಬೀಳದೆ ಕಾರಿಕೊಳ್ಳುತ್ತವೆ. ಈ ಪಥ್ಯ ಕಟ್ಟುವ ಸಂಕಥನದಲ್ಲಿ, ಆಧುನಿಕತೆ ಎನ್ನುವುದು ಅತ್ಯಂತ ವರ್ಣಮಯವಾದುದು, ಸಶಬ್ದವಾದುದು (ಫ್ಲೈ ಓವರ್‌ನ ಸೂಳೆಯರು – ಫಾದರ್ ೫೫...). ಆದ್ದರಿಂದಲೇ ಆಪ್ಯಾಯಮಾನವಾದುದಾಗಿದೆ. (ಬೆಂಗಳೂರಿನ ಗಾಳಿ ಮಳೆಗೆ ಮೈ ಒಡ್ಡಿ ಮಲಗುವುದು ಸುಖದಾಯಕವೆನಿಸುತ್ತದೆ...) ಗ್ರಾಮದೊಳಗೆ ನಗರ, ನಗರದೊಳಗೆ ಗ್ರಾಮ ಬೆರೆತುಹೋಗಿರುವ ಈ ಬೆಳವಣಿಗೆ ಹುಟ್ಟುಹಾಕಿರುವುದು – ಅನೈತಿಕತೆ, ಅಶುದ್ಧತೆ, ಕೊಳಕು, ದಾರಿದ್ರ್ಯ ದುಷ್ಟತನ, ಹಸಿವು, ಪರಿಪಾಟಲು, ತಣ್ಣನೆಯ ಕ್ರೌರ್ಯ ಮತ್ತು ಹಿಂಸೆಗಳನ್ನು (ಫ್ಲೈ ಓವರ್‌ನ ಸೂಳೆಯರು, ವಿಂಡ್ಸರ್ ಮ್ಯಾನರ್ ಸೇತುವೆಯ ಮೇಲೆ – ಫಾದರ್ ೫೫...; ಮ್ಯಾಸ್ಸಿ ಫರ್ಗ್ಯುಸನ್, ವಸತಿಗೃಹ, ಡೀಸೆಲ್ ಫ್ಯಾಕ್ಟರಿಯ ಹಿಂಬೆಳಕಿನಲ್ಲಿ, ಡಾನ್‌ನ ಕಗ್ಗೊಲೆ – ಲೆವೆಲ್ ಕ್ರಾಸಿಂಗ್). ಆಧುನಿಕ ಸಮಾಜದ ಮಕ್ಕಳು ಕೂಡ ವಂಚಿತ ಅವಕಾಶಗಳಿಂದಾಗಿ ದುಷ್ಟರಾಗಿ ಹೋಗಿರುವವರು. (ಕೆಂಪು ಬಣ್ಣದೆಲೆಗಳು – ಲೆವೆಲ್ ಕ್ರಾಸಿಂಗ್). ಇಲ್ಲಿ ನಗು ಸಾಧ್ಯವಾಗುವುದಿಲ್ಲ (ಬ್ಯಾರೆಕ್ಸ್ ಹುಡುಗರು – ಲೆವೆಲ್ ಕ್ರಾಸಿಂಗ್); ಆಧುನಿಕತೆಯ ಕ್ರೌರ್ಯ ಮತ್ತು ಹಿಂಸೆ; ಹಸಿವು ಮತ್ತು ದಾರಿದ್ರ್ಯದ ಬಗ್ಗೆ ಬಂಡಾಯ – ದಲಿತ ಕವಿಗಳಿಗಿರುವಂಥ ರೋಷ, ಸಿಟ್ಟುಗಳಲ್ಲ. ಈ ರೀತಿಯ ಎಲ್ಲಾ ವಿಕಾರಗಳಿಗೂ ಥಿಯರಿಗಳ ಪ್ರಕಾರ ಪೊಲಿಟಿಕಲ್ ಆದ ಉದ್ದೇಶವೆ ಕೆಲಸ ಮಾಡುತ್ತಿದ್ದರೆ, ಇಲ್ಲಿನ ಕಾವ್ಯ ಅದನ್ನು ಆಧುನಿಕ ಬದುಕಿನ ಮತ್ತೊಂದು ಮುಖವೇ ಎಂದು ಗ್ರಹಿಸುತ್ತದೆ. ಇಂಥ ವಸ್ತುವನ್ನು ನಿರ್ವಹಿಸುವಾಗ, ತಣ್ಣನೆಯ ನಿರ್ಲಿಪ್ತತೆ ಮತ್ತು ಅಸಹಾಯಕ ಸೂಕ್ಷ್ಮತೆ ಪ್ರತಿಕ್ರಿಯೆಯಾಗಿ ರೂಪುಗೊಳ್ಳುತ್ತಿರುತ್ತದೆ. ಆದ್ದರಿಂದ, ಘನೀಕೃತವಾದ ಹತಾಶೆ, ದಿಗ್ಭ್ರಮೆಗಳು ರೂಪಕಗಳಾಗುತ್ತವೆ. ಇವರ ಮೊದಲ ಸಂಕಲನಕ್ಕೆ ಬೆನ್ನುಡಿ ಬರೆದಿರುವ ನಟರಾಜ ಹುಳಿಯಾರ್ ಹೇಳುವ, ''ಕೇವಲ ಹೊರ ವಾಸ್ತವದ ಬಗ್ಗೆ ಅಭ್ಯಾಸಬಲದಿಂದೆಂಬಂತೆ ಗೋಳು ಕಾರಿಕೊಳ್ಳದೆ ತನ್ನ ಮೈ ಮನಸ್ಸಿಗೆ ಸಹಜವಾಗಿ ಹತ್ತಿದ ಪ್ರತಿಮೆಗಳನ್ನು ಹಾಗೆ ಹಾಗೇ ಇಡುವ ಪ್ರಾಮಾಣಿಕ ಧೈರ್ಯ ತೋರಿದ್ದಾನೆ'' ಎನ್ನುವ ಮಾತುಗಳು ಬಹಳ ಮುಖ್ಯವಾದುವು.

ಹಿಗ್ಗಾಮುಗ್ಗ ಬೆಳೆದುಬಿಟ್ಟಿರುವ ಆಧುನಿಕತೆಯನ್ನು ನಿಭಾಯಿಸುವುದಕ್ಕೆ ಹಗಲುಗಳೆಲ್ಲಾ ರಾತ್ರಿಗಳಲ್ಲೂ ವಿಸ್ತರಿಸಿಕೊಳ್ಳುತ್ತವೆ. ಆದ್ದರಿಂದ ರಾತ್ರಿ ಇಲ್ಲಿ ಹೆಚ್ಚು ಕ್ರಿಯಾಶೀಲವಾಗುತ್ತದೆ; ಅಥವಾ ರಾತ್ರಿಗಳಲ್ಲೇ ಹೆಚ್ಚು ಸ್ಪಷ್ಟವಾಗಿ, ಸವಿವರವಾಗಿ ಆಧುನಿಕತೆಯ ವಿಕಾರಗಳು ಅನಾವರಣಗೊಳ್ಳುತ್ತವೆ (ಫ್ಲೈ ಓವರ್‌ನ ಸೂಳೆಯರು, ವಿಂಡ್ಸರ್ ಮ್ಯಾನರ್ ಸೇತುವೆಯ ಮೇಲೆ – ಫಾದರ್ ೫೫...; ಹೀಗೊಂದು ಡ್ಯಾನ್ಸ್ ಪಾರ್ಟಿ, ಲೆವೆಲ್ ಕ್ರಾಸಿಂಗ್). ಇಲ್ಲಿ ಅಸಂಗತತೆ ಎಷ್ಟು ದಟ್ಟವಾಗಿ ಆವರಿಸಿಕೊಂಡುಬಿಡುತ್ತದೆ ಎಂದರೆ, ಇದರೊಂದಿಗೆ ಹೆಣಗಾಡಲು ಅಥವಾ ರಾಜಿ ಮಾಡಿಕೊಳ್ಳಲು ಎಲ್ಲರೂ ಏನೋ ಒಂದನ್ನು ಕುಡಿಯಲೇಬೇಕಾಗುತ್ತದೆ. ಕೆಲವರಿಗೆ ಹೆಂಡ, ಕೆಲವರಿಗೆ ವೈನ್, ಹೆಣ್ಣುಮಕ್ಕಳೂ ಕುಡಿದು ಬಿದ್ದು ಅಸ್ತವ್ಯಸ್ತವಾಗಿ ಕಳೆದುಹೋಗುವವರೇ (ವಾರ್ಡ್‌ರೋಬ್ – ಫಾದರ್ ೫೫, ಹೀಗೊಂದು ಡ್ಯಾನ್ಸ್ ಪಾರ್ಟಿ – ಲೆವೆಲ್ ಕ್ರಾಸಿಂಗ್). ಆದ್ದರಿಂದ, ಇಲ್ಲಿನ ಕವಿತೆಗಳಲ್ಲಿ ರಾತ್ರಿ ಮತ್ತು ವೈನ್ ಮುಖ್ಯವಾದ ಮತ್ತು ಒಂದರ ಜೊತೆಗೆ ಮತ್ತೊಂದು ಹೆಣೆದುಕೊಂಡು, ಅರ್ಥದ ವಿಸ್ತಾರತೆಯನ್ನು ಪಡೆದುಕೊಳ್ಳುವ ಎರಡು ದೊಡ್ಡ ರೂಪಕಗಳು.

ಕುಡಿತ, ವ್ಯಕ್ತಿಯನ್ನು ಆಧುನಿಕತೆಯ ಅನುಭವದಿಂದ ಛಿದ್ರವಾಗಿಸದೆ, ಸೃಜನಶೀಲತೆ, ಆಧ್ಯಾತ್ಮಿಕತೆ ಮತ್ತು ಬದುಕಿಗೆ ಅಂಟಿಕೊಳ್ಳುವ ಸಾಧ್ಯತೆಗಳ ಅರಸುವಿಕೆಯಲ್ಲಿ ನಿರತನಾಗುವಂತೆ ಮಾಡುತ್ತದೆ. ಏಕೆಂದರೆ, ಎಂಥ ಅಸಂಗತತೆಯಲ್ಲೂ, ಅಸ್ತವ್ಯಸ್ತವಾಗಿ ಚದುರಿಹೋಗಿರುವ ಬದುಕಿನ ಚೂರುಗಳಲ್ಲೂ ಕಂಗೆಡದ ಮನುಷ್ಯನ ಅಂತಃಶಕ್ತಿಯ ಬಗ್ಗೆ ಕವಿಗೆ ಅಪಾರವಾದ ನಂಬಿಕೆ (ಧ್ಯಾನಿಸಬಹುದಾದ ದೇವರು – ಲೆವೆಲ್ ಕ್ರಾಸಿಂಗ್).

ಆಧುನಿಕತೆಯ ಅನುಭವವನ್ನು ಅಧಿಕೃತಗೊಳಿಸುವ ಮತ್ತೊಂದು ಮುಖ್ಯವಾದ ವಿಷಯ ಎಂದರೆ, ಸಮಾಜದಲ್ಲಿ ನಿರಂತರವಾಗಿ ಬದಲಾಗುವ ಅಥವಾ ಹಲವು ಸಾಮಾಜಿಕ ಅನುಭವಗಳು

ಸೇರಿ ವ್ಯಕ್ತವಾಗುವ ವ್ಯಕ್ತಿಯ ಐಡೆಂಟಿಟಿಯ ವ್ಯಾಖ್ಯಾನ. ಈ ಸಂಕಲನಗಳ ಪದ್ಯಗಳಲ್ಲಿ ಕ್ರೈಸ್ತ ಮತ್ತು ಹಿಂದೂ ಎಂದು ಪರಿಗಣಿತವಾಗುವ ಧರ್ಮೀಯ ಅನುಭವಗಳು ಒಟ್ಟೊಟ್ಟಿಗೆ ಹೆಣೆದುಕೊಳ್ಳುತ್ತವೆ. ಎರಡು ವಿಭಿನ್ನ ಧಾರ್ಮಿಕ ವಲಯಗಳೊಳಗೆ ಅದೆಷ್ಟೇ ಸಲೀಸಾಗಿ ಕವಿತೆ ಚಲಿಸಬಲ್ಲದು ಎಂಬುದಕ್ಕೆ ಅತ್ಯುತ್ತಮ ಉದಾಹರಣೆ 'ಫಾದರ್ ಜಿಜಿ...' ಎಂಬ ರಚನೆ. ತನ್ನ ತಂದೆಯ ಹಾಗೂ ರೋಮನ್ ಕ್ಯಾಥೋಲಿಕ್ ಚರ್ಚ್‌ನ ಫಾದರ್‌ನ ನೆನಪನ್ನು ಅವಿನಾಭಾವದಿಂದ ಗ್ರಹಿಸುವ ಪ್ರಕ್ರಿಯೆಯಲ್ಲಿ ತಂದೆಯ ವ್ಯಕ್ತಿತ್ವ ಹಾಗೂ ಫಾದರ್‌ನ ವ್ಯಕ್ತಿತ್ವ – ಎರಡನ್ನೂ ಕವಿಯ ಪ್ರಜ್ಞೆ ರೂಪಾಂತರಗೊಳಿಸಿಬಿಡುತ್ತದೆ. 'ಕ್ರಿಸ್‌ಮಸ್ ಹಬ್ಬ', ಚರ್ಚ್‌ನ ಒಳಗಿನ ಆಚರಣೆ, ಕ್ರೌರ್ಯ, ಕ್ಷುದ್ರತೆ ಮತ್ತು ಚರ್ಚ್‌ನ ಹೊರಗಿನ ಕನಸುಗಳು ಮತ್ತು ಬಡತನವನ್ನು ಒಂದಾಗಿ ನೇಯುತ್ತದೆ. ಇಲ್ಲಿ, ಧಾರ್ಮಿಕ, ಸಾಮಾಜಿಕ ಅನುಭವಗಳ ಗೆರೆಗಳು ಅಳಿಸಿಹೋಗುತ್ತವೆ. ಮಂಜುನಾಥರ ಸುಪ್ತಪ್ರಜ್ಞೆಯ ಒಂದು ಭಾಗವೇ ಆಗಿಬಿಟ್ಟಿರುವ ಕ್ರೈಸ್ತ ಧರ್ಮದ ಜೊತೆಗಿನ ಸಾಹಚರ್ಯ, ಕವಿತೆಗಳಿಗೆ ವಿಭಿನ್ನ ಆಯಾಮವೊಂದನ್ನು ಸೃಷ್ಟಿಸುತ್ತವೆ.

ಹಲವು ಧರ್ಮದ ಅನುಭವದ ಜೊತೆಗೆ, ಹಲವು ಸಾಮಾಜಿಕ ಸ್ತರದ ಬದುಕನ್ನೂ ಈ ಕವಿತೆಗಳು ಪ್ರತಿನಿಧಿಸುತ್ತವೆ. ತಳಸ್ತರದಿಂದ ಹಿಡಿದು ಮೋಜಿನ ಪಾರ್ಟಿಗಳಲ್ಲಿ ಕುಡಿದು ಬೀಳುವ ಮೇಲ್‌ಸ್ತರದ ಬದುಕು – ಎಲ್ಲವೂ ಕವಿತೆಗಳ ನಕಾಶೆಯಲ್ಲಿ ಕಿಕ್ಕಿರಿಯುತ್ತವೆ. ಸೈಬರ್ ಕೆಫೆಯ ಹಾಡುಗಳು, ಲೇಸರ್ ಜೆಟ್ ಪ್ರಿಂಟರ್, ನೀನಾಸಂ ಡೈರಿ, ಬ್ರಿಕ್ಸ್ ಅಂಡ್ ಟೈಲ್ಸ್ ಕಂಪನಿ, ಲೆನಾಕ್ಸ್ ಲೂಯಿಸ್‌ನ ಮಾರಣಾಂತಿಕ ಪಂಚ್‌ಗಳ ಬಗ್ಗೆ ಮಾತಾಡುವ ಕವಿಯ ಅನುಭವಗಳನ್ನು ಯಾವ ಸ್ತರಕ್ಕೆ ಅಳವಡಿಸಿ ವ್ಯಾಖ್ಯಾನಿಸುವುದು ? ಈ ಎಲ್ಲಾ ವಿವರಗಳು ಕವಿತೆಯನ್ನು ಸಾಂದ್ರವಾಗಿಸುತ್ತವೆಯೇ ಹೊರತು 'ಪೊಲಿಟಿಕಲಿ ಕರೆಕ್ಟ್' ಎನ್ನುವ ನಿಲುವುಗಳನ್ನೇನೂ ಇವು ಆಯ್ಕೆ ಮಾಡಿಕೊಳ್ಳುವುದಿಲ್ಲ.

ಮಂಜುನಾಥರ ಕವಿತೆಗಳ ಮತ್ತೊಂದು ಆಶಯ ಹೆಣ್ಣು. ಈಕೆ ತೀವ್ರವಾದ ಅದಮ್ಯತೆಯನ್ನೇ ಆವಾಹಿಸಿಕೊಂಡಿರುವಾಕೆ. ಅವಳು ಎಲ್ಲಾ ಸೃಜನಶೀಲತೆಯ ಪ್ರತೀಕ (ಮುಗಿಯದ ಕಾಲ, ದ್ವಂದ್ವ, ಒಡಕಿನ ಪಾರಿವಾಳಗಳು, ಅವಳು ಹೆಣ್ಣು – ಫಾದರ್ ಜಿಜಿ...); ಗಂಡನ್ನು ಕಂಗೆಡಿಸಬಲ್ಲ ಆಕರ್ಷಣೆ ಮತ್ತು ಕೊಲ್ಲಬಲ್ಲ ಕ್ರೌರ್ಯದ ದ್ವಂದ್ವದಲ್ಲಿ ಕಾಡಬಲ್ಲಳು. ಯಾರ ನಿಗ್ರಹಕ್ಕೂ ಒಳಗಾಗದೆ, ಸಾಮಾಜಿಕವಾದ ಎಲ್ಲಾ ಕಟ್ಟುಗಳ ಆಚೆಗೆ ವಿಸ್ತರಿಸಿಕೊಳ್ಳಬಲ್ಲ ಈಕೆ, ಹೆಚ್ಚು ಗಾಢವಾಗುವುದೇ ಉಲ್ಲಂಘನೆಯ ಕ್ಷಣಗಳಲ್ಲಿ (ಭೂ, ಕುಗ್ರಾಮದ ನೆನಪು – ಫಾದರ್ ಜಿಜಿ...). ನೈತಿಕ-ಅನೈತಿಕ, ಪ್ರೇಮ-ಹಾದರಗಳ ಯಾವ ಚೌಕಟ್ಟಿಗೂ ಸಿಲುಕದೆ, ಕೊನೆಗೂ ಗಂಡಿಗೆ ಒಂದು ವಿಚಿತ್ರವಾದ ವ್ಯಸನವಾಗಿಯೇ ಉಳಿದುಬಿಡಬಲ್ಲಳು. ಹೆಣ್ಣಿನ ಈ ಸಾಧ್ಯತೆಗಳು ಕವಿಗೆ ಒಂದು ದೊಡ್ಡ ಸವಾಲು ಕೂಡ ಹೌದು. ಪ್ರತಿಬಾರಿಯೂ ಇಂಥ ಹೆಣ್ಣಿನ ಎದುರಿಗೆ ಗಂಡು ಸೋಲುತ್ತಾನೆ. ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಭಯದ ಗಂಡಿಗೆ, ಹೆಣ್ಣನ್ನು ಕೊಲ್ಲುವ ಉದ್ವಿಗ್ನತೆ ಗಾಢವಾಗುತ್ತಾ ಹೋಗುತ್ತದೆ. (ಸಿದ್ಧಾಂತ, ಅವಳು ಹೆಣ್ಣು – ಫಾದರ್ ಜಿಜಿ...). ಸದಾ ಗಂಡಿಗೆ ಸವಾಲಾಗುತ್ತಲೇ ಹೋಗುವ ಹೆಣ್ಣಿಗೆ ಈ ಕಾರಣದಿಂದಲೇ ಒಂದು ವಿಚಿತ್ರ ರೀತಿಯ ನಿಗೂಢತೆ ಪ್ರಾಪ್ತವಾಗುತ್ತದೆ (ಈ ಬೆಂಕಿ – ಫಾದರ್ ಜಿಜಿ...). ಇದು ಹೆಣ್ಣಿನ ಬಗೆಗಿರುವ ಆದಿಮ ನಿಗೂಢತೆ, ಬಿಡಿಸಲು ಬಯಸಿದಷ್ಟೂ ಹೆಣೆದುಕೊಳ್ಳುತ್ತಲೇ ಹೋಗುವ ಕಗ್ಗಂಟು. ಆದ್ದರಿಂದ ಹೆಣ್ಣಿನ ಬಗೆಗಿನ ವ್ಯಾಖ್ಯಾನಗಳೆಲ್ಲವೂ ಹಿಂಸಾತ್ಮಕವಾದ ಪ್ರತಿಮೆಗಳೊಂದಿಗೇ ವ್ಯಕ್ತವಾಗುತ್ತವೆ. ಮಂಜುನಾಥ್, ಇಂಥ ಕವಿತೆಗಳಲ್ಲಿ ಬಾದಿಲೇರ್‌ನನ್ನು ಆವಾಹಿಸಿಕೊಳ್ಳುತ್ತಾರೆ.

ಈ ನಿಗೂಢತೆಯ ಆಯಾಮಕ್ಕೆ ವಿರುದ್ಧವಾದುದು, ಅವಳು ಬದುಕನ್ನು ಕಟ್ಟುವಲ್ಲಿ ಕಾಣುವ ಹಠಮಾರಿತನ. ಆಕೆ ಕ್ರಾಂತಿಗೆ ಕಾರಣವಾಗಬಲ್ಲಳು (ಹಗಲುಗನಸು – ಲೆವೆಲ್ ಕ್ರಾಸಿಂಗ್), ಎಂಥ ಪ್ರತಿರೋಧವನ್ನೂ ಉದುರಿಸುತ್ತಾ, ದುಡಿಮೆಯ ಅವಿರತತೆಯಿಂದ ಆತ್ಮವಿಶ್ವಾಸ ಮತ್ತು ನಿರ್ದಯತೆಯನ್ನು ಮೈಗೂಡಿಸಿಕೊಂಡಿರುವವಳು (ಇದ್ದಿಲು ಮಾರುವ ಹೆಂಗಸರು, ಮ್ಯಾಕ್ಸೆ ಫರ್ಗ್ಯುಸನ್ – ಲೆವೆಲ್ ಕ್ರಾಸಿಂಗ್). ಇಲ್ಲಿಯೂ ಆಕೆಗೆ ಎಲ್ಲಾ ರೀತಿಯ ಉಲ್ಲಂಘನೆಗಳು ಸಾಧ್ಯ. ಆದ್ದರಿಂದಲೇ ಆಕೆ ನಿಷ್ಠುರಳು (ಇದ್ದಿಲು ಮಾರುವ...). ಮಂಜುನಾಥ್, ಇಲ್ಲಿ ಲಂಕೇಶರ ಹೆಣ್ಣುಗಳನ್ನು ಪುನಃ ಸೃಷ್ಟಿಸುತ್ತಾರೆ.

ಹೆಣ್ಣಿಗಿರುವ ಈ ಸಾಧ್ಯತೆಗಳಿಂದಲೇ, ಗಂಡು-ಹೆಣ್ಣಿನ ಸಂಬಂಧದಲ್ಲಿ ಸಾಮಾಜಿಕ ಸಂರಚನೆಗಳಾಚೆಗಿನ ಕನಸುಗಳು, ಉಲ್ಲಂಘನೆಗಳು ಮತ್ತು ಅದರ ವಾಸ್ತವಗಳು ಪ್ರಧಾನ ನೆಲೆಯನ್ನು ಪಡೆದುಕೊಳ್ಳುತ್ತವೆ. ಈ ಕಾರಣದಿಂದಲೇ ಗಾಢವಾಗುವ ಇಂಥ ಸಂಬಂಧದ ನೆನಪುಗಳು, ಸಾವಿನ ನಂತರವೂ ಉಳಿದು, ಸಾವು ಕಳೆದುಹೋಗುತ್ತದೆ. ಆದರೆ, ಇದು ರಮ್ಯದ ಅರ್ಥದಲ್ಲಿ ಬದ್ಧವಾದದ್ದೂ ಅಲ್ಲ, ನೈತಿಕವಾದದ್ದೂ ಅಲ್ಲ. ಇಲ್ಲಿಯೂ ನೈತಿಕ-ಅನೈತಿಕದ ಆಚೆಗೆ ಸಂಬಂಧಗಳು ವ್ಯಾಖ್ಯಾನಿಸಲ್ಪಡುತ್ತವೆ. ಕೌಟುಂಬಿಕ ವಲಯದಲ್ಲಿ ಓರ್ವ ಅನ್ಯನ ಹಾಜರಾತಿ ಇದ್ದೇ ಇರುತ್ತದೆ. ಇಲ್ಲಿನ ಅನ್ಯ-ಗಂಡ. ಇಂಥ ವಿಷಯವನ್ನು ನಿರ್ವಹಿಸುವಲ್ಲಿ ಮಂಜುನಾಥರ ಕವಿತೆಗಳು ಯಾವುದೇ ರೀತಿಯ ಮೌಲ್ಯ ನಿರ್ಣಯವನ್ನು ನೀಡುವುದಿಲ್ಲ.

ಈ ಕವಿತೆಗಳು, ಪ್ರಕಾರಗಳ ಬಗ್ಗೆ ಇರುವ ಸಂರಚನೆಗಳಾಚೆಗೆ ಚಲಿಸಲು ಹಾತೊರೆಯುತ್ತವೆ. ಇವು 'ಪದ್ಯ ಎನಿಸಿಕೊಳ್ಳುವ ಗದ್ಯಗಳು' (ಇಲ್ಲಿನ ಪದ್ಯಗಳು – ಫಾದರ್ ಜಿಜಿ...); ಸಾಮಾಜಿಕವಾಗಿ ಅಸಭ್ಯ, ಅನೈತಿಕ ಎನಿಸಿಕೊಳ್ಳುವ ಅನುಭವಗಳನ್ನು ತನ್ನ ಕಥನಕ್ಕೆ ವಸ್ತುವಾಗಿಸಿಕೊಳ್ಳುವುದರಲ್ಲಿ ಕವಿಗೆ ಆಸಕ್ತಿ (ಅದೇ). ಚಾಲ್ತಿಯಲ್ಲಿರುವ ವ್ಯಾಖ್ಯಾನ ಮತ್ತು ಗ್ರಹಿಕೆಯ ಕ್ರಮಗಳನ್ನು ಮುರಿದು, ಹೊಸತನ್ನು ಕಟ್ಟಲೇಬೇಕಾದ ಅನಿವಾರ್ಯತೆಯ ಬಗ್ಗೆ ಪದ್ಯಗಳು ಸೂಚಿಸುತ್ತವೆ. ('ಜಗತ್ತು ನಿರ್ನಾಮವಾದ ಗಳಿಗೆ; ನೆಲದ ಮೇಲೆ ಪಯಣಿಸುವ ಹಡಗು – ಅದೇ). ಕವಿಗೆ, ಕವಿತೆ ಎಂದರೆ ಕಾಲಾತೀತವಾದದ್ದು : ಈ ಕವಿತೆಯ ಮುಂದಿನ ಸಾಲುಗಳು

*ಮರುಜನ್ಮದಲ್ಲಿ ಬರೆಯಲಾಗುವುದು*
*ಅನಂತರದ್ದು ಹಿಂದಿನ ಜನ್ಮದಲ್ಲಿ ಬರೆಯಲಾಗಿದೆ* (ನಿಲ್ದಾಣ – ಫಾದರ್ ಜಿಜಿ).

ವಾಸ್ತವವಾಗಿ, ಇಲ್ಲಿ ಕಾವ್ಯ, ಹೆಣ್ಣು ಮತ್ತು ವೈನ್ – ಈ ಮೂರೂ ಬೇರೆ ಬೇರೆ ವಿಷಯಗಳೇ ಅಲ್ಲ. ಆದ್ದರಿಂದ, ಕಾವ್ಯ-ಹೆಣ್ಣು-ವೈನ್ ಏನೇನನ್ನು ಸೂಚಿಸುತ್ತವೆಯೋ ಅವೆಲ್ಲಾ ಒಟ್ಟಾಗಿ ಸಂಕೀರ್ಣವಾದ ಸಂಕಥನವನ್ನು ಕಟ್ಟಿದರೆ, ಬಿಡಿಬಿಡಿಯಾಗಿ ಪ್ರಯೋಗವಾದ ಕಡೆ ಮತ್ತೊಂದು ಅರ್ಥಕ್ಕೆ ಜಿಗಿಯುತ್ತವೆ.

ಮಂಜುನಾಥ್ ಓದುಗರನ್ನು ತೀವ್ರವಾಗಿ ತಟ್ಟಿ ಅಲ್ಲಾಡಿಸಿಬಿಡುವುದು ಅವರ ಚುಟುಕುಗಳಲ್ಲಿ. ಇವು ಹಾಗೇ ಓದಿ, ಮರೆತುಬಿಡುವಂಥ ಕೇವಲ ಆದಿಪ್ರಾಸ, ಅಂತ್ಯಪ್ರಾಸ, 'ಪನ್'ಗಳಿರುವ ಸಾಮಾನ್ಯವಾದ ರಚನೆಗಳಲ್ಲಿ ಅನುಭಾವದ ತುಡಿತಗಳು, ಹೆಪ್ಪುಗಟ್ಟಿದ ನೋವುಗಳು, ವೈರುಧ್ಯಗಳ ಗೋಜಲುಗಳು ಎಲ್ಲವೂ ಸೇರಿ ಎಂಥ ಸದೃಢವಾದ ಪ್ರತಿಮೆಗಳಾಗಿ ನಿಂತುಬಿಡಬಲ್ಲವು ಎಂದು ಆಶ್ಚರ್ಯವಾಗುತ್ತದೆ. ಈ ಚುಟುಕುಗಳು ನಮ್ಮನ್ನು ಕಾಡುತ್ತವೆ :

**ಮನಸ್ಸು**

*ಅದು ಮರಗಟ್ಟಿ ಹೋಗಿದೆ, ಆನೆಕಾಲು ರೋಗದಂತೆ*
*ನಿಲ್ಲದೆ ನಡೆಯುವ ಕಾಲುಗಳು;*
*ಮುರಿದುಬಿದ್ದರೆ ಕುಂಟಣಿಗನಾಗುವ ಅಥವಾ*
*ಮಣ್ಣು ಸೇರುವ ಮೃತ ದೇಹ* (ಲೆವೆಲ್ ಕ್ರಾಸಿಂಗ್)

**ಪ್ರೇಮ ಸಿದ್ಧಾಂತ**

*ಸದಾಕಾಲ –*
*ಹೀಗೆಯೇ ನಿನ್ನ ಪ್ರೇಮ ಸಿದ್ಧಾಂತಗಳನ್ನು*
*ಬಗೆಬಗೆಯಲಿ ಕೊಲ್ಲುವುದನ್ನು ಮೊದಲು ಕಲಿತುಕೋ,*
*ನಂತರ ಎಡವಿ ಬೀಳದಿರು* (ಫಾದರ್ ಜಿಜಿ...)

**ರಾತ್ರೆ ಓದಿದ ದುಃಖಗಳು**

*ಮಾತುಗಳು ಶವದಂತೆ ಹೂತು ಹೋಗಿವೆ;*
*ಬೆಳದಿಂಗಳ ಕನಸುಗಳೋ ಸಾಲುಗಟ್ಟಿ ಕಂಬನಿ ಸುರಿಸುತ್ತವೆ.*
*ರಾತ್ರೆ ಓದಿದ ದುಃಖಗಳು*
*ಹಗಲಿನ ಒಣಮರಗಳಲ್ಲಿ ಹಸಿವಿನ ಪುಟ್ಟ ಹಕ್ಕಿಗಳಂತೆ*
*ಮರದ ಗೊಂಬೆಗಳಂತೆ ಮಾರ್ದನಿಸುತ್ತಿದ್ದವು* (ಲೆವೆಲ್ ಕ್ರಾಸಿಂಗ್)

ಹೀಗೆ, ಮಂಜುನಾಥ್ ವಿಭಿನ್ನ ವಲಯಗಳ ಅನುಭವವನ್ನು ಅದ್ಭುತವಾಗಿ ಹೆಣೆದುಬಿಡಬಲ್ಲರು. ಇದನ್ನು ಸಾಧ್ಯವಾಗಿಸುವುದಕ್ಕೆ ಕವಿ ಸೃಷ್ಟಿಸುವ ಪ್ರತಿಮೆಗಳು, ಕವಿತೆಗಳನ್ನು ಕೊಲಾಜ್ ಆಗಿಸುತ್ತವೆ. ಆದ್ದರಿಂದ, ಒಂದು ಪೇಯಿಂಟಿಂಗ್‌ಗೆ ದಕ್ಕುವ ಆಳ ಮತ್ತು ಹರಹುಗಳು ಅತ್ಯಂತ ಸುಲಭವಾಗಿ ಈ ಕವಿತೆಗಳಿಗೆ ದಕ್ಕಿಬಿಡುತ್ತವೆ. ವಾಕ್ಯರಚನಾ ವಿಧಾನದಲ್ಲಿಯೂ, ಇವರು ವಿವಿಧ ರೀತಿಯ ಪ್ರಯೋಗಗಳನ್ನು ಮಾಡುತ್ತಾರೆ. ಯಾವುದೋ ಕಾರ್ಯಕ್ರಮದಲ್ಲಿ ನಿರೂಪಣೆ ಮಾಡಿದಂತೆ, ವಾರ್ತೆ ಓದಿದಂತೆ, ಘೋಷಣಾ ವಾಕ್ಯಗಳ ನಡುವೆ ಧುತ್ತೆಂದು ಹಾಜರಾಗುವ ಸಂಭಾಷಣೆಗಳು – ಹೀಗೆ. ಕನ್ನಡ ಭಾಷೆಯ ಮೇಲೆ ಹದವಾದ ಹಿಡಿತ ಸಾಧಿಸಿರುವ ಮಂಜುನಾಥ್, ಭಾಷೆಯನ್ನು ಹಿಡಿದು ಆಡಿಸುತ್ತಾರೆಂದರೆ ತಪ್ಪಾಗಲಾರದು.

ಈ ರೀತಿಯ ಅನೇಕ ಕಾರಣಗಳಿರುವುದರಿಂದ, ಮಂಜುನಾಥ್ ಅಪಾರವಾದ ನಿರೀಕ್ಷೆಯನ್ನು ಹುಟ್ಟಿಸುತ್ತಾರೆ.

ಬಿ. ಯು. ಸುಮಾ
ಕನ್ನಡ ಉಪನ್ಯಾಸಕರು, ನಂ. ೧೬೧೧, ೧೨ನೇ ಕ್ರಾಸ್, ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦

# ಅಮೆರಿಕಾದ ಮಹಿಳಾ ಚಳುವಳಿ

ಡಾ|| ಎಚ್. ಎಂ. ಹೇಮಲತ

**ಸಮಾನತೆಯನ್ನು ಬಿತ್ತಿ ನ್ಯಾಯಪರತೆಯನ್ನು ಎತ್ತಿಹಿಡಿದು ಉತ್ತಮ ಸಮಾಜವನ್ನು ಕಟ್ಟುವಲ್ಲಿ ಚಳುವಳಿ ಪ್ರಮುಖಪಾತ್ರ ವಹಿಸುತ್ತದೆ. ಮಾನವ ಇತಿಹಾಸದಲ್ಲಿ ಹತ್ತಾರು ಕ್ಷೇತ್ರಗಳಿಗೆ ಸೇರಿದ ವಿಷಯಗಳಿಗೆ ಸಂಬಂಧಿಸಿದಂತೆ ಚಳುವಳಿಗಳು ನಡೆದಿವೆ. ೧೭ನೇ ಶತಮಾನದ ಫ್ರೆಂಚ್ ಕ್ರಾಂತಿಯಿಂದ ಹುಟ್ಟಿಕೊಂಡ ಸಮಾನತೆ ಹಾಗೂ ಸ್ವಾತಂತ್ರ್ಯದ ತತ್ವಗಳನ್ನು ಮಹಿಳೆಯರಿಗೆ ಅನ್ವಯಿಸಿಕೊಂಡು ಪಾಶ್ಚಿಮಾತ್ಯರಲ್ಲಿ ಸ್ತ್ರೀಪರ ಚಿಂತನೆಗಳು ಪಾರಂಭವಾದವು. ಆದರೆ ಅವು ಹೋರಾಟದ ರೂಪವನ್ನು ಪಡೆದುಕೊಂಡಿದ್ದು ೧೯ನೇ ಶತಮಾನದಲ್ಲಿ, ಅಮೆರಿಕಾದಲ್ಲಿ.**

ಅಮೆರಿಕಾದ ಮಹಿಳಾ ಚಳುವಳಿ ಹಾಗೂ ಭಾರತದ ಮಹಿಳಾ ಚಳುವಳಿಗಳ ನಡುವೆ ಕೆಲವು ಹೋಲಿಕೆಗಳನ್ನು ಗಮನಿಸಬಹುದು. ೧೮೪೦ರಲ್ಲಿ ಪ್ರಾರಂಭವಾದ ಅಮೆರಿಕಾದ ಮಹಿಳಾ ಚಳುವಳಿ ಗುಲಾಮ ವಿರೋಧಿ ಚಳುವಳಿಯೊಂದಿಗೆ ಬೆಳೆದುಬಂದರೆ, ಭಾರತದ ಮಹಿಳಾ ಚಳುವಳಿ ಸ್ವಾತಂತ್ರ್ಯ ಚಳುವಳಿಯೊಂದಿಗೆ ಬೆಳೆದುಬಂದಿತು. ಎರಡು ಚಳುವಳಿಗಳೂ ಮತದಾನ ಹಕ್ಕಿನ ಹೋರಾಟದಿಂದ ತಮ್ಮ ಚಳುವಳಿಯನ್ನು ಪ್ರಾರಂಭಿಸಿದವು. ಆದರೆ ಅಮೆರಿಕಾದ ಮಹಿಳೆಯರು ಮತದಾನದ ಹಕ್ಕನ್ನು ಪಡೆಯಲು ೮೦ ವರ್ಷಗಳ ಕಾಲ (೧೮೪೦-೧೯೨೦) ಹೋರಾಟ ನಡೆಸಿದರೆ ಭಾರತದ ಮಹಿಳೆಯರು ಕೇವಲ ೧೮ ವರ್ಷಗಳಲ್ಲಿ(೧೯೧೭-೧೯೩೫) ಮತದಾನದ ಹಕ್ಕನ್ನು ಪಡೆದರು.

ಎರಡೂ ಚಳುವಳಿಗಳು ಸಾಂಪ್ರದಾಯಿಕ, ಉದಾರವಾದಿ ಹಾಗೂ ಸುಧಾರಣಾವಾದಿ ತತ್ವಗಳನ್ನು ಆಧರಿಸಿ ಹೋರಾಟ ನಡೆಸಿದವು. ತೀವ್ರಗಾಮಿ ಹೋರಾಟಗಾರರಿದ್ದರೂ ಅವರ ಪ್ರಭಾವ ಸಾಕಷ್ಟಿರಲಿಲ್ಲ. ಭಾರತದಲ್ಲಿ ಮಹಿಳೆಯರು ಸ್ವಾತಂತ್ರ್ಯ ಚಳುವಳಿಯಲ್ಲಿ ಆಗಲೇ ಸಂಘಟಿತಗೊಂಡಿದ್ದು, ಸ್ವಾತಂತ್ರ್ಯ ಸಮಾನತೆ ತತ್ವಗಳಿಂದ ಪ್ರಭಾವಿತರಾಗಿದ್ದ ಶಿಕ್ಷಿತ ಮಹಿಳೆಯರು ರಾಷ್ಟ್ರೀಯ ನಾಯಕರ ತೀವ್ರ ವಿರೋಧದ ನಡುವೆಯೂ ಪಟ್ಟುಬಿಡದೆ ಹೋರಾಟ ಮಾಡಿ ಕಡಿಮೆ ಅವಧಿಯಲ್ಲಿ ಮತದಾನದ ಹಕ್ಕನ್ನು ಪಡೆದರು.

೧೯೨೦ರಲ್ಲಿ ಮತದಾನ ಹಕ್ಕನ್ನು ಪಡೆದ ನಂತರ ಅಮೆರಿಕಾದ ಮಹಿಳಾ ಚಳುವಳಿ ನಾಲ್ಕು ದಶಕಗಳ ಕಾಲ ಸ್ಥಗಿತಗೊಂಡಿತು. ೧೯೩೫ರಲ್ಲಿ ಮತದಾನ ಹಕ್ಕನ್ನು ಪಡೆದ ನಂತರ ಭಾರತದ ಮಹಿಳೆಯರು ಇತರ ಕಾನೂನು ಹಕ್ಕುಗಳನ್ನು ಪಡೆಯಲು ಹೋರಾಟ ನಡೆಸಿದರು, ಆದರೆ ಪೂರ್ಣವಾಗಿ ಯಶಸ್ವಿಯಾಗಲಿಲ್ಲ. ಅಲ್ಲದೆ ಸ್ವಾತಂತ್ರ್ಯ ಚಳುವಳಿಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರಿಂದ ಮಹಿಳಾ ಚಳುವಳಿಯನ್ನು ಮುಂದುವರೆಸಲಿಲ್ಲ. ಸ್ವಾತಂತ್ರ್ಯದ ನಂತರ ನಮ್ಮದೇ ಸಂವಿಧಾನ, ನಮ್ಮದೇ ಸರ್ಕಾರ ಮಹಿಳೆಯರಿಗೆ ಎಲ್ಲಾ ಸಮಾನತೆಯನ್ನು ನೀಡುತ್ತದೆ ಎಂಬ ನಂಬಿಕೆಯಿಂದ ೧೯೫೦ ಮತ್ತು ೧೯೬೦ರ ದಶಕಗಳಲ್ಲಿ ಮಹಿಳಾ ಚಳುವಳಿ ನಿರ್ದಿಷ್ಟವಾಗಿ ಮುಂದುವರೆಯಲಿಲ್ಲ. ೧೯೬೦ರ ದಶಕದಲ್ಲಿ ಅಮೆರಿಕಾದಲ್ಲಿ, ೧೯೭೦ರ ದಶಕದಲ್ಲಿ ಭಾರತದಲ್ಲಿ ಎರಡನೇ ಅಲೆಯ ಚಳುವಳಿ ಪ್ರಾರಂಭವಾದವು.

ಎರಡನೇ ಅಲೆಯಲ್ಲಿ ಎರಡು ಚಳುವಳಿಗಳೂ ಬೇರೆ ಬೇರೆ ವಿಷಯಗಳನ್ನಿಟ್ಟುಕೊಂಡು ಹೋರಾಟ ನಡೆಸಿದವು. ಅಮೆರಿಕಾದಲ್ಲಿ ದೌರ್ಜನ್ಯದ ವಿರುದ್ಧ, ವಿವಾಹ ವಿಚ್ಛೇದನ, ಕಾನೂನಿನಡಿ ಸಮಾನತೆ ಮತ್ತು ಸಮಾನ ಉದ್ಯೋಗಾವಕಾಶಗಳಿಗೆ ಹೋರಾಟ ನಡೆಯಿತು. ಭಾರತದಲ್ಲಿ ವರದಕ್ಷಿಣೆ, ಅತ್ಯಾಚಾರ, ಮೀಸಲಾತಿ, ಸೌಂದರ್ಯ ಸ್ಪರ್ಧೆ, ಮಹಿಳಾ ನಿರ್ದಿಷ್ಟ ಕಾಯಿದೆಗಳ ಜಾರಿಗಾಗಿ ಹೋರಾಟ ನಡೆಯಿತು. ಅಮೆರಿಕಾವು ಪ್ರಜಾಪ್ರಭುತ್ವ ಹಾಗೂ ಸಮಾನತೆಯನ್ನು ಹಿಡಿಯುವ ರಾಷ್ಟ್ರವೆನ್ನಲಾಗಿದ್ದರೂ ಮಹಿಳಾ ಚಳುವಳಿಗೆ ೧೭೦ ವರ್ಷಗಳ ದೀರ್ಘ ಇತಿಹಾಸವಿದ್ದರೂ ಅಲ್ಲಿಯ ಮಹಿಳೆಯರಿಗೆ ಸಂವಿಧಾನಾತ್ಮಕ ಸಮಾನತೆ ದೊರೆತಿಲ್ಲ. ಅಂದರೆ ಅಲ್ಲಿಯ ಸಂವಿಧಾನವು ಲಿಂಗ ಸಮಾನತೆಯನ್ನು ಪ್ರತಿಪಾದಿಸುವುದಿಲ್ಲ. ಮಹಿಳೆಯರು ಸಮಾನ ಹಕ್ಕುಗಳ ತಿದ್ದುಪಡಿ ಕಾಯಿದೆಗಾಗಿ ಈಗಲೂ ಹೋರಾಟ ಮಾಡುತ್ತಿದ್ದಾರೆ. ಆದರೆ ಭಾರತದ ಮಹಿಳೆಯರು ಸಂವಿಧಾನಾತ್ಮಕ ಸಮಾನತೆಯನ್ನು ಪಡೆದಿದ್ದಾರೆ. ಈ ಸಮಾನತೆಯನ್ನು ಕಾರ್ಯ ರೂಪಕ್ಕೆ ತರಲು ಇರುವ ಅಡ್ಡಿಗಳನ್ನು ಹೋಗಲಾಡಿಸಿ ಅದನ್ನು ಸಾಕಾರಗೊಳಿಸಬೇಕಾಗಿದೆ.

ಅಮೆರಿಕಾದ ಮಹಿಳಾ ಚಳುವಳಿಯನ್ನು ಎರಡು ಹಂತಗಳಲ್ಲಿ ವಿಂಗಡಿಸಬಹುದು: (ಅ) ೧೮೪೦-೧೯೨೦ರವರೆಗಿನ ಮಹಿಳಾ ಹಕ್ಕುಗಳ ಹೋರಾಟ; (ಆ) ೧೯೬೦ರ ನಂತರದ ಮಹಿಳಾ ವಿಮೋಚನಾ ಹೋರಾಟ.

ಸಮಾನತೆಯ ತತ್ವ ಮಹಿಳೆಯರಿಗೆ ಅನ್ವಯವಾಗದಿರುವುದು ಮತ್ತು ಕಾನೂನು ಹಕ್ಕುಗಳಲ್ಲೂ ಸ್ತ್ರೀಯರಿಗೆ ತಾರತಮ್ಯ ತೋರುವುದನ್ನು ಮಹಿಳೆಯರು ಕಂಡುಕೊಂಡರು. ಅವರ ಈ ಅರಿವೇ ಮಹಿಳಾ ಚಳುವಳಿಗೆ ದಾರಿಮಾಡಿಕೊಟ್ಟಿತು. ೧೮ನೇ ಶತಮಾನದಲ್ಲಿ ಮೇರಿ ವುಲ್‌ಸ್ಟನ್‌ಕ್ರಾಫ್ಟ್ ಮತ್ತು ಜುಡಿತ್ ಸಾರ್ಜೆಂಟ್ ಮರ್ರೆ ಹುಟ್ಟುಹಾಕಿದ ಸ್ತ್ರೀಪರ ಚಿಂತನೆಗಳು ೧೮೪೦ರ ಹೊತ್ತಿಗೆ ಮಹಿಳಾ ಹಕ್ಕುಗಳ ಹೋರಾಟವಾಗಿ ಮೂಡಿಬಂದಿತು. ಇದೇ ಸಮಯದಲ್ಲಿ ನಡೆಯುತ್ತಿದ್ದ 'ಗುಲಾಮ ವಿರೋಧಿ ಚಳುವಳಿ'ಯು ಮಹಿಳಾ ಚಳುವಳಿಗೆ ಪೂರಕವಾಯಿತು. ಈ ಚಳುವಳಿಯಲ್ಲಿ ಆಸಕ್ತಿಯಿದ್ದ ಮಹಿಳೆಯರು ಗುಲಾಮ ವಿರೋಧಿ ಗುಂಪುಗಳನ್ನು ಸೇರಿ ಅದರ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಹೀಗೆ ಸಾರ್ವಜನಿಕ ಕಾರ್ಯಗಳಲ್ಲಿ ಭಾಗವಹಿಸುವುದು ಸಂಪ್ರದಾಯಕ್ಕೆ ವಿರೋಧವಾಗಿತ್ತು. ಇದನ್ನು ಚರ್ಚುಗಳು ಪ್ರಬಲವಾಗಿ ವಿರೋಧಿಸಿದವು. ಪಾದ್ರಿಯೊಬ್ಬರು ''ಹೊಸ ಒಡಂಬಡಿಕೆಯಲ್ಲಿ ಸ್ತ್ರೀಯರ ಕರ್ತವ್ಯಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಸ್ತ್ರೀಯ ಪರಾವಲಂಬಿತನವೇ ಅವಳ ಶಕ್ತಿ. ಅವಳು ಪುರುಷನಂತೆ ಸಾರ್ವಜನಿಕ ಕ್ಷೇತ್ರಕ್ಕೆ ಬಂದರೆ ತನ್ನನ್ನು ರಕ್ಷಿಸಿಕೊಳ್ಳುವ ಶಕ್ತಿಯನ್ನು ಪಡೆದುಕೊಳ್ಳುತ್ತಾಳೆ. ಆಗ ಅವಳ ನಡತೆ ಅಸಹಜವಾಗುತ್ತದೆ'' ಎಂದು ಹೇಳಿದರು. ಸಾರಾ, ಏಂಜಲಿನಾ ಮೊದಲಾದ ಮಹಿಳೆಯರು ಈ ಹೇಳಿಕೆಯನ್ನು ಖಂಡಿಸಿ ಇದು ಸ್ತ್ರೀಯರಿಗೆ ತೋರುವ ತಾರತಮ್ಯ ಎಂದು ಪ್ರತಿಭಟಿಸಿದರು.

೧೮೪೦ರಲ್ಲಿ ಲಂಡನ್‌ನಲ್ಲಿ ನಡೆದ 'ಜಾಗತಿಕ ಗುಲಾಮ ವಿರೋಧಿ ಸಮಾವೇಶ' ಅಮೆರಿಕಾದಲ್ಲಿ ಮಹಿಳಾ ಚಳುವಳಿ ಅಧಿಕೃತವಾಗಿ ಪ್ರಾರಂಭವಾಗುವುದಕ್ಕೆ ಚಾಲನೆ ನೀಡಿತು. ಈ ಸಮಾವೇಶಕ್ಕೆ ಅಮೆರಿಕಾದ ಮಹಿಳಾ ಪ್ರತಿನಿಧಿಗಳು ಹೋಗಿದ್ದರು. ಅವರು ಸಂಘಟನೆಯ ಚುನಾಯಿತ ಸದಸ್ಯರಾಗಿದ್ದರೂ ಸಮಾವೇಶದಲ್ಲಿ ಅವರನ್ನು ಗೌರವದಿಂದ ನೋಡಿಕೊಳ್ಳಲಿಲ್ಲ, ಮಾತನಾಡಲು ಅವಕಾಶ ನೀಡಲಿಲ್ಲ. ಇದರಿಂದ ಮಹಿಳಾ ಪ್ರತಿನಿಧಿಗಳು ತುಂಬಾ ನಿರಾಸೆಗೊಂಡರು. ಈ ಸಮಾವೇಶದಲ್ಲಿ ಭೇಟಿಯಾದ ಎಲಿಜಬೆತ್ ಕ್ಯಾಡಿ ಸ್ಟಾಂಟನ್ ಮತ್ತು ಲುಕ್ರೇಶಿಯಾ ಮಾಟ್ ತಮ್ಮ ದೇಶಕ್ಕೆ ಹಿಂದಿರುಗಿದ ನಂತರ ಗುಲಾಮ ವಿರೋಧಿ ಕಾರ್ಯಗಳ ಜೊತೆಗೆ ಮಹಿಳಾ ವಿಷಯಗಳ ಕುರಿತು ಚಿಂತಿಸಿದರು. ಮಹಿಳೆಯರ ಮೇಲಿನ ದೌರ್ಜನ್ಯ, ಅನ್ಯಾಯ, ತಾರತಮ್ಯ, ಅವರ ಆಸ್ತಿ ಹಾಗೂ ಕುಟುಂಬದ ಹಕ್ಕುಗಳ ಬಗ್ಗೆ ಚರ್ಚಿಸಿದರು. ಈ ಎಲ್ಲಾ ವಿಷಯಗಳನ್ನು ಸಾರ್ವಜನಿಕವಾಗಿ ಚರ್ಚಿಸಲು ಒಂದು ಸಭೆಯನ್ನು ಕರೆಯಲು ನಿರ್ಧರಿಸಿದರು.

**ಸೆನೆಕಾ ಫಾಲ್ಸ್ ಘೋಷಣೆ** : ೧೮೪೮ರ ಜುಲೈ ೧೯-೨೦ರಂದು ನ್ಯೂಯಾರ್ಕಿನ ಸೆನೆಕಾ ಫಾಲ್ಸ್‌ನಲ್ಲಿ ಒಂದು ಸಭೆ ನಡೆಸಿದರು. ಅದನ್ನು 'ಮಹಿಳಾ ಹಕ್ಕುಗಳ ಸಮಾವೇಶ' ಎಂದು ಕರೆಯಲಾಯಿತು. ಸ್ತ್ರೀ-ಪುರುಷರಿಬ್ಬರೂ ಸೇರಿದಂತೆ ಸುಮಾರು ೩೦೦ ಜನ

ಸಭೆಯಲ್ಲಿ ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ಮಹಿಳಾ ಚಳುವಳಿಯ ಗುರಿ ಹಾಗೂ ರೂಪುರೇಷೆಯನ್ನು ಸಿದ್ಧಪಡಿಸಲಾಯಿತು. ಘೋಷಣೆಯಲ್ಲಿ ಪುರುಷರು ಸ್ತ್ರೀಯರಿಗೆ ನೀಡುವ ಹಿಂಸೆ ಹಾಗೂ ಸರ್ಕಾರದ ಕಠಿಣ ಕಾನೂನು ವ್ಯವಸ್ಥೆಯಲ್ಲಿ ತಾರತಮ್ಯವನ್ನು ಖಂಡಿಸಲಾಯಿತು. ಅಲ್ಲದೆ ಪುರುಷನು ಸ್ತ್ರೀಯ ಮೇಲೆಸಗುವ ತಪ್ಪುಗಳನ್ನು ಗುರುತಿಸಲಾಯಿತು. ಅವುಗಳೆಂದರೆ –




(ಅ) ಮಹಿಳೆಗೆ ಮತದಾನ ಹಕ್ಕನ್ನು ನಿರಾಕರಿಸಿದ್ದು; (ಆ) ಕಾನೂನಿಗೆ ಅವಳನ್ನು ಶರಣಾಗಿಸಿದ್ದು; (ಇ) ವಿಚ್ಛೇದನಕ್ಕೆ ಸಂಬಂಧಪಟ್ಟ ಕಾನೂನನ್ನು ತನಗೆ ಅನುಕೂಲವಾಗುವಂತೆ ರಚಿಸಿಕೊಂಡು ತನ್ನ ಶ್ರೇಷ್ಠತೆಯನ್ನು ಎತ್ತಿಹಿಡಿದದ್ದು; (ಈ) ಎಲ್ಲಾ ಲಾಭದಾಯಕ ಉದ್ಯೋಗಾವಕಾಶಗಳನ್ನು ತಾನೆ ತೆಗೆದುಕೊಂಡದ್ದು; (ಉ) ಮಹಿಳೆಗೆ ಶಿಕ್ಷಣ ಸೌಲಭ್ಯಗಳನ್ನು ನಿರಾಕರಿಸಿದ್ದು; ಮತ್ತು (ಊ) ಸ್ತ್ರೀ-ಪುರುಷರಿಗೆ ಬೇರೆ ಬೇರೆ ನೀತಿ ನಿಯಮಗಳನ್ನು ರೂಪಿಸಿದ್ದು.

ಇದರ ಜೊತೆಗೆ ಮಹಿಳೆಯರಿಗಾಗುತ್ತಿದ್ದ ಅನ್ಯಾಯಗಳನ್ನು ಸರಿಪಡಿಸುವಂತಹ ೧೨ ನಿರ್ಣಯಗಳನ್ನು ಸೆನೆಕಾ ಫಾಲ್ಸ್ ಸಮಾವೇಶದಲ್ಲಿ ಕೈಗೊಳ್ಳಲಾಯಿತು. ಇಂತಹ ಸಮಾವೇಶಗಳು ವಿವಿಧ ರಾಜ್ಯಗಳಲ್ಲಿ ನಡೆದವು. ಈ ಸಮಯದಲ್ಲಿ ಪ್ರಾರಂಭವಾದ 'ದ ಲಿಲಿ' ಮತ್ತು 'ವುಮನ್ಸ್ ಅಡ್ವೋಕೇಟ್' ಎಂಬ ಪತ್ರಿಕೆಗಳು, ಮಹಿಳಾ ಹೋರಾಟಕ್ಕೆ ಬೆಂಬಲ ನೀಡಿದವು. ಚಳುವಳಿಯಲ್ಲಿದ್ದ ಕೆಲವು ಮಹಿಳೆಯರು ಉಡುಪಿನ ಮೇಲಿನ ನಿರ್ಬಂಧ ಹಾಗೂ ಮಿತಪಾನ ವಿಷಯಗಳನ್ನು ಇಟ್ಟುಕೊಂಡು ಹೋರಾಟ ಮಾಡಿದರು. ಆದರೆ ಚಳುವಳಿಯಲ್ಲಿದ್ದ ಎಲ್ಲಾ ಮಹಿಳೆಯರು ಇದಕ್ಕೆ ಬೆಂಬಲ ನೀಡಲಿಲ್ಲ.

೧೮೬೦ರ ದಶಕದ ಅಂತರ್ಯುದ್ಧ ಮಹಿಳಾ ಚಳುವಳಿಯನ್ನು ಸ್ಥಗಿತಗೊಳಿಸಿತು. ಅವರು ಸಂವಿಧಾನದ ೧೪ ಮತ್ತು ೧೫ನೇ ತಿದ್ದುಪಡಿ ವಿರುದ್ಧ ಪ್ರತಿಭಟನೆಗಳನ್ನು ನಡೆಸಿದರು. ೧೪ನೇ ತಿದ್ದುಪಡಿ ಮಹಿಳೆಯರಿಗೆ ಮತದಾನದ ಹಕ್ಕನ್ನು ನಿರಾಕರಿಸಿದರೆ ಸರ್ಕಾರಕ್ಕೆ ದಂಡ ಹಾಕುವಂತಿರಲಿಲ್ಲ. ಇದು ಸಂವಿಧಾನ ತೋರುತ್ತಿರುವ ಲಿಂಗ ತಾರತಮ್ಯ ಎಂದು ಮಹಿಳೆಯರು ಪ್ರತಿಭಟಿಸಿದರು. ೧೫ನೇ ತಿದ್ದುಪಡಿ ಲಿಂಗ ಹಾಗೂ ಜನಾಂಗದ ಆಧಾರದ ಮೇಲೆ ಮತದಾನದ ಹಕ್ಕನ್ನು ನಿರಾಕರಿಸುವುದರಿಂದ ಅದನ್ನು ವಿರೋಧಿಸಿದರು. ಅದರಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗದಿದ್ದರೂ ಕೆಲವು ರಾಜ್ಯಗಳು ಸ್ತ್ರೀಯರಿಗೆ ಮತದಾನದ ಹಕ್ಕನ್ನು ನೀಡಿದವು.

೧೮೬೯ರಲ್ಲಿ ಮತದಾನ ಹಕ್ಕನ್ನು ಗುರಿಯಾಗಿಟ್ಟುಕೊಂಡು 'ದಿ ಅಮೆರಿಕನ್ ವುಮೆನ್ಸ್ ಸಫರೇಜ್ ಅಸೋಸಿಯೇಷನ್' ಎಂಬ ಮೊದಲ ಮಹಿಳಾ ಸಂಘಟನೆ ಸ್ಥಾಪನೆಗೊಂಡಿತು. ೧೮೯೦ರಲ್ಲಿ 'ದಿ ನ್ಯಾಷನಲ್ ವುಮೆನ್ ಸಫರೇಜ್ ಅಸೋಸಿಯೇಷನ್' ಎಂಬ ಮತ್ತೊಂದು ಸಂಘಟನೆ ಅಸ್ತಿತ್ವಕ್ಕೆ ಬಂದಿತು. ಸೂಸನ್ ಬಿ. ಅಂತೋನಿ ಮತ್ತು ಎಲಿಜಬೆತ್ ಕ್ಯಾಡಿ ಸ್ಟ್ಯಾಂಟನ್ ಇದರ ನಾಯಕಿಯರಾಗಿದ್ದರು. ಈ ಸಂಘಟನೆ ೧೮೪೮ರ ಘೋಷಣೆಯ ಗುರಿಗಳನ್ನು ಮುಂದುವರೆಸಿ ಮತದಾನದ ಜೊತೆಗೆ ಇತರ ವಿಷಯಗಳನ್ನು ಕೈಗೆತ್ತಿಕೊಂಡಿತು. ಇಲ್ಲಿಂದ ಮಹಿಳಾ ಚಳವಳಿ 'ಮತದಾನದ ಹಕ್ಕಿನ ಚಳುವಳಿ' ಹಾಗೂ 'ಸಮಾಜ ಸ್ತ್ರೀವಾದದ ಚಳುವಳಿ'ಯಾಗಿ ಬೇರ್ಪಟ್ಟಿತು.

೧೮೯೦ರ ಹೊತ್ತಿಗೆ ಮತದಾನದ ಹಕ್ಕನ್ನು ಪಡೆಯುವುದು ಮಹಿಳಾ ಚಳುವಳಿಯ ಮುಖ್ಯಗುರಿಯಾಯಿತು. ವಿಭಿನ್ನ ರೀತಿಯ ಜನರು ಚಳುವಳಿಯನ್ನು ಪ್ರವೇಶಿಸಿದ್ದರಿಂದ ಅದು ತನ್ನ ಗುರಿಗಳನ್ನು ನಿರ್ದಿಷ್ಟಗೊಳಿಸಬೇಕಾಯಿತು. ಅದರ ಕಾರ್ಯತಂತ್ರ, ಬೇಡಿಕೆ ಹಾಗೂ ಪರಿಕ್ರಮಗಳು ಹೆಚ್ಚು ಸಾಂಪ್ರದಾಯಿಕವಾಗುತ್ತಾ ಬಂದವು. ಪ್ರಾರಂಭದಲ್ಲಿದ್ದ ಸದಸ್ಯರು ಮತದಾನದ ಹಕ್ಕನ್ನು ಬಿಟ್ಟು ಸಮಾಜಸ್ತ್ರೀವಾದದ ಗುರಿಗಳನ್ನಿಟ್ಟುಕೊಂಡು ಹೋರಾಟ ಮುಂದುವರೆಸಿದರು. ಉದಾಹರಣೆಗೆ, ಎಲಿಜಬೆತ್ ಕ್ಯಾಡಿ ಸ್ಟ್ಯಾಂಟನ್ ಧರ್ಮದಿಂದ ಪರಾಧೀನತೆಗೆ ಒಳಗಾಗುವ ಮಹಿಳೆ ಕುರಿತು ಕೆಲಸ ಮಾಡಲು ಪ್ರಾರಂಭಿಸಿದರು. ''ದಿ ವುಮೆನ್ಸ್ ಬೈಬಲ್'' ಎಂಬ ಗ್ರಂಥದಲ್ಲಿ ಬೈಬಲ್‌ನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಪುನರ್ ವ್ಯಾಖ್ಯಾನಿಸಿ ಅದರಲ್ಲಿ ಕಂಡುಬರುವ ಲಿಂಗ ಅಸಮಾನತೆಯ ಅಂಶಗಳನ್ನು ಎತ್ತಿತೋರಿಸಿದರು.

ಮತದಾನ ಹಕ್ಕಿನ ಗುಂಪಿನವರು ತಮ್ಮನ್ನು 'ಮತಾಧಿಕಾರಿಗಳು' ಎಂದು ಕರೆದುಕೊಂಡರು. ಕ್ರಮೇಣ ಮೇಲು ಹಾಗೂ ಮಧ್ಯಮ ವರ್ಗದ ಮಹಿಳೆಯರು ಸ್ವಯಂಸೇವಾ ಸಂಸ್ಥೆಗಳನ್ನು ಕಟ್ಟಿಕೊಂಡು ಮತದಾನದ ಹಕ್ಕಿನ ಚಳುವಳಿಗೆ ಬೆಂಬಲ ನೀಡಿದರು. ಚಳುವಳಿಯನ್ನು ತೀವ್ರಗೊಳಿಸಲು ವಿವಿಧ ಕಾರ್ಯತಂತ್ರ, ಯುಕ್ತಿಗಳನ್ನು ಅಳವಡಿಸಿಕೊಂಡರು. ತಮ್ಮದೇ ಸಮಾವೇಶಗಳನ್ನು ನಡೆಸುವುದು, ಶಾಸಕಾಂಗಕ್ಕೆ ಪ್ರತಿನಿಧಿಗಳನ್ನು ಕಳುಹಿಸುವುದು ಮತ್ತು ರಾಜಕೀಯ ಸಭೆಗಳನ್ನು ನಡೆಸುವಂತಹ ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸಿದರು. ಪ್ರತಿ ರಾಜ್ಯ ಶಾಸಕಾಂಗಕ್ಕೆ ಮನವಿ ನೀಡಿದರು. ಕೆಲವು ಮಹಿಳೆಯರು ರಾಜ್ಯಗಳಲ್ಲಿ ಪ್ರವಾಸ ಮಾಡಿ ಮಹಿಳೆಯರಲ್ಲಿ ಅವರ ಹಕ್ಕು, ಸ್ಥಾನಗಳ ಬಗ್ಗೆ ಅರಿವು ಮೂಡಿಸಲು ಪ್ರಯತ್ನಿಸಿದರು. ಮತದಾನದ ಹಕ್ಕಿಗೆ ಸಂಬಂಧಿಸಿದಂತೆ ಕವಾಯತ್, ಮೆರವಣಿಗೆ, ಧರಣಿ ಹಾಗೂ ರಾಜಕೀಯ ಪ್ರದರ್ಶನಗಳನ್ನು ನಡೆಸಿದರು.

೧೯೧೪ರಲ್ಲಿ 'ಕಾಂಗ್ರೆಶನಲ್ ಯೂನಿಯನ್' ಅನ್ನು ಸ್ಥಾಪಿಸಲಾಯಿತು. ಇದು ರಾಜಕೀಯ ಪಕ್ಷಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿತು. ೧೯೧೬ರಲ್ಲಿ 'ವುಮೆನ್ಸ್ ಪಾರ್ಟಿ'ಯಾಗಿ ಪರಿವರ್ತನೆಗೊಂಡು ರಾಜ್ಯಮಟ್ಟದಲ್ಲಿ ಕಾರ್ಯ ಮಾಡಲಾರಂಭಿಸಿತು. ಇದರ ಸದಸ್ಯರು ೧೯೧೭ರಲ್ಲಿ ಶ್ವೇತಭವನದ ಮುಂದೆ ಮತದಾನಹಕ್ಕಿಗಾಗಿ ಧರಣಿ ಕೂತರು. ಅಧ್ಯಕ್ಷ ವಿಲ್ಸನ್ ಆದೇಶದಂತೆ ಇವರನ್ನು ಬಂಧಿಸಿ ಜೈಲಿನಲ್ಲಿರಿಸಲಾಯಿತು. ಕೊಲಂಬಿಯ ನ್ಯಾಯಾಲಯ ಇವರ ಬಂಧನ ಕಾನೂನುಬಾಹಿರವಾಗಿತ್ತು ಎಂದು ಹೇಳಿತು.

೨೦ನೇ ಶತಮಾನದ ಮೊದಲ ದಶಕದಲ್ಲಿ ಚಳುವಳಿಗೆ ಹೊಸ ಸದಸ್ಯರು ಸೇರಿಕೊಂಡರು. ಹೊಸ ಯುಕ್ತಿಗಳನ್ನು ಅಳವಡಿಸಿಕೊಳ್ಳಲಾಯಿತು. ಸದಸ್ಯರಲ್ಲದವರೂ ಮತದಾನದ ಹಕ್ಕಿನ ಹೋರಾಟದಲ್ಲಿ ಸೇರಿಕೊಂಡಿದ್ದರಿಂದ ಹೋರಾಟ ತೀವ್ರಗೊಂಡಿತು. ಕೊನೆಗೆ ೧೯೨೦ ಆಗಸ್ಟ್ ೨೬ರಂದು ಸಂವಿಧಾನದ ೧೯ನೇ ತಿದ್ದುಪಡಿ ಮೂಲಕ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಲಾಯಿತು. ಇದನ್ನು 'ಆ್ಯಂಥೋನಿ ಅಮೆಂಡ್‌ಮೆಂಟ್' ಎಂದು ಕರೆಯಲಾಗುತ್ತಿದೆ.

ಮಹಿಳೆಯರ ಮತದಾನದ ಹಕ್ಕಿನ ಹೋರಾಟಕ್ಕೆ ಜನರಿಂದ ತೀವ್ರ ವಿರೋಧವಿತ್ತು. 'ದಿ ನ್ಯಾಷನಲ್ ಅಸೋಸಿಯೇಷನ್ ಅಪೋಸ್ಡ್ ಟು ದಿ ಫರ್‌ದರ್ ಎಕ್ಸ್‌ಟೆನ್‌ಷನ್ ಆಫ್ ಸಫರೇಜ್ ಟು ವುಮೆನ್' ಎಂಬ ಸಂಘಟನೆ ಸ್ಥಾಪನೆಗೊಂಡು ಮಹಿಳಾ ಮತದಾನವನ್ನು ಖಂಡಿಸಿತು. ಇದು ಯಶಸ್ವಿಯಾಗದಿದ್ದರೂ ಚಳುವಳಿಯ ಗುರಿಸಾಧನೆಯನ್ನು ನಿಧಾನಗೊಳಿಸಿತು.

ಮತದಾನದ ಹಕ್ಕು ಪಡೆದ ನಂತರ ಮಹಿಳಾ ಚಳುವಳಿ ನಿಂತುಹೋಗಿ ಮರುಹುಟ್ಟನ್ನು ಪಡೆಯಲು ೧೯೬೦ರವರೆಗೆ ಕಾಯಬೇಕಾಯಿತು. ಈ ನಲವತ್ತು ವರ್ಷಗಳಲ್ಲಿ ಮಹಿಳೆಯರು ವಿವಿಧ ಗುಂಪುಗಳಲ್ಲಿ ಹಂಚಿಹೋದರು. ಸಮಾಜ ಸ್ತ್ರೀವಾದಿ ಗುಂಪೊಂದು ಅತಿ ದೊಡ್ಡ ಗುಂಪಾಗಿ ಸ್ತ್ರೀಯರಿಗೆ ತಾರತಮ್ಯ ತೋರುವ ಕಾನೂನಿನಲ್ಲಿ ಬದಲಾವಣೆ ತರಲು ಹೋರಾಟ ನಡೆಸಿತು. ಸ್ತ್ರೀಯರಿಗೆ ಶೈಕ್ಷಣಿಕ ಅವಕಾಶಗಳನ್ನು ಹೆಚ್ಚಿಸಲು ಪ್ರಯತ್ನಿಸಿತು.

ಮತದಾನದ ಹಕ್ಕನ್ನು ಪಡೆದ ಮಹಿಳೆಯರು 'ದಿ ಲೀಗ್ ಆಫ್ ವುಮೆನ್ಸ್ ಯೂನಿಯನ್' ಸ್ಥಾಪಿಸಿದರು. ಕೆಲವರು ಶಾಂತಿ ಚಳುವಳಿಯನ್ನು ಸೇರಿ 'ಇಂಟರ್ ನ್ಯಾಷನಲ್ ಲೀಗ್ ಫಾರ್ ಪೀಸ್ ಅಂಡ್ ಫ್ರೀಡಂ'ಗಾಗಿ ಕೆಲಸ ಮಾಡಿದರು. ಇನ್ನು ಕೆಲವರು ವೃತ್ತಿಪರ ಚಟುವಟಿಕೆಗಳಲ್ಲಿ ತೊಡಗಿ 'ದಿ ನ್ಯಾಷನಲ್ ಫೆಡರೇಷನ್ ಆಫ್ ಬಿಸಿನೆಸ್ ಅಂಡ್ ಪ್ರೊಫೆಶನಲ್ ವುಮೆನ್ಸ್ ಕ್ಲಬ್' ಸ್ಥಾಪಿಸಿದರು. ಚಳುವಳಿಯಲ್ಲಿದ್ದ ಕಿರಿಯ ಸದಸ್ಯರು ತೀವ್ರಗಾಮಿ ಗುಂಪನ್ನು ಹುಟ್ಟುಹಾಕಿ 'ದಿ ನ್ಯಾಷನಲ್ ಪಾರ್ಟಿ'ಯನ್ನು

ಹುಟ್ಟುಹಾಕಿದರು. ಇದು 'ಈಕ್ವಲ್ ರೈಟ್ಸ್ ಅಮೆಂಡ್‌ಮೆಂಟ್' ಹೋರಾಟವನ್ನು ಪ್ರಾರಂಭಿಸಿತು.

೧೯೩೦ರ ಗ್ರೇಟ್ ಡಿಪ್ರೆಶನ್ ಮಹಿಳೆಯರ ದುಡಿಮೆ ಮೇಲೆ ಪ್ರತಿಕೂಲ ಪರಿಣಾಮ ಬೀರಿತು. ಆದರೂ ಕಾರ್ಮಿಕರು ಫ್ಯಾಸಿಸಮ್‌ಗೆ ಬಲಿಯಾದ ಜನರ ಪರವಾಗಿ ಹೋರಾಟ ಮಾಡಿದರು. ಆಗಿನ ಅಧ್ಯಕ್ಷರಾಗಿದ್ದ ರೂಸ್‌ವೆಲ್ಟ್ ತಮ್ಮ ಪತ್ನಿಯ ಪ್ರಭಾವದಿಂದ ಕೆಲವು ಸ್ತ್ರೀಪರ ಕಾರ್ಯಗಳನ್ನು ಕೈಗೊಂಡರು. ಅನೇಕ ಮಹಿಳೆಯರನ್ನು ಸಲಹೆ ನೀಡುವ ಸ್ಥಾನಗಳಿಗೆ ನೇಮಿಸಿಕೊಂಡರು. ಕಾರ್ಮಿಕ ಸಚಿವಾಲಯದ ಕಾರ್ಯದರ್ಶಿ ಸ್ಥಾನಕ್ಕೆ ಐಬ್ರಿ ಮಹಿಳೆಯನ್ನು ನೇಮಿಸಿದರು. ೧೯೫೦ರಲ್ಲಿ 'ಈಕ್ವಲ್ ರೈಟ್ಸ್ ಅಮೆಂಡ್‌ಮೆಂಟ್' ಹೋರಾಟ ಪುನರ್ಜನ್ಮ ತಾಳಿತು. ೧೯೫೦ ಮತ್ತು ೧೯೫೩ರಲ್ಲಿ ಅದನ್ನು ಜಾರಿಗೊಳಿಸಲು ಸೆನೆಟ್ ಮುಂದಿಡಲಾಯಿತು. ಆದರೆ ೪೩ ರಾಷ್ಟ್ರೀಯ ಗುಂಪುಗಳ ಲಾಬಿಯಿಂದ ಅದು ಜಾರಿಗೊಳ್ಳಲಿಲ್ಲ.

ಭಾರತದಲ್ಲಿ ಹೆಚ್ಚುತ್ತಿರುವ
ಸಿರಿವಂತರು: ಸಮೀಕ್ಷೆ



ಭಿಕ್ಷುಕರ ಕೈಯಲ್ಲೂ ಮೊಬೈಲ್
ಕಂಡು ಹಾಗೆ ಸಮೀಕ್ಷೆ ಮಾಡಿ
-ದ್ದಾರೆ ಕಣ್ರೀ!..ಇನ್ನೇನೂ ಇಲ್ಲ.

ಅಮೆರಿಕಾದ ಮಹಿಳಾ ಚಳುವಳಿಯ ಎರಡನೇ ಅಲೆಯು ೧೯೬೦ರ ದಶಕದಲ್ಲಿ ಆರಂಭವಾಯಿತು. ಈ ಅವಧಿಯಲ್ಲಿ ನಡೆದ ಕೆಲವು ಘಟನೆಗಳು ಚಳುವಳಿಯ ಬೆಳವಣಿಗೆಗೆ ಪೂರಕವಾಗಿ ಮೂಡಿಬಂದವು. ಅವುಗಳೆಂದರೆ –

ರಾಷ್ಟ್ರಾಧ್ಯಕ್ಷರು ಕೈಗೊಂಡ ಕಾರ್ಯಗಳು,
ಕಾಂಗ್ರೆಸ್ ಜಾರಿಗೊಳಿಸಿದ ಕಾಯಿದೆಗಳು,
ಲಿಂಗ ಅಸಮಾನತೆ ಕುರಿತು ಬಂದಂತಹ ಸಾಹಿತ್ಯ.

೧೯೬೧ರಲ್ಲಿ ಜೆ. ಎಫ್. ಕೆನಡಿ 'ಪ್ರೆಸಿಡೆನ್ಷಿಯಲ್ ಕಮಿಷನ್ ಆನ್ ದಿ ಸ್ಟೇಟಸ್ ಆಫ್ ವುಮೆನ್' ಎಂಬ ಸಮಿತಿಯನ್ನು ನೇಮಿಸಿದರು. ಮಹಿಳೆಯರು ನಾಗರಿಕ ಹಕ್ಕುಗಳನ್ನು ಅನುಭವಿಸಲು ಇರುವ ಅಡೆತಡೆಗಳನ್ನು ಪರಿಶೀಲಿಸುವುದು ಇದರ ಕಾರ್ಯವಾಗಿತ್ತು. ಇದು ಅನೇಕ ಶಿಫಾರಸ್ಸುಗಳನ್ನು ಮಾಡಿದ್ದರೂ ಸಮಾನ ಹಕ್ಕುಗಳನ್ನು ತನ್ನ ಶಿಪಾರಸ್ಸಿನಲ್ಲಿ ಸೇರಿಸಲಿಲ್ಲ. ೫ನೇ ಹಾಗೂ ೧೪ನೇ ತಿದ್ದುಪಡಿಗಳು ಸ್ತ್ರೀಯರಿಗೆ ಸಮಾನ ರಕ್ಷಣೆ ನೀಡುತ್ತದೆ ಎಂದು ಹೇಳಲಾಯಿತು.

'ಸಿಟಿಜನ್ಸ್ ಅಡ್ವೈಸರಿ ಕೌನ್ಸಿಲ್ ಆನ್ ದಿ ಸ್ಟೇಟಸ್ ಆಫ್ ವುಮೆನ್' ಸಂಸ್ಥೆಯು ಹೆಚ್ಚು ಕ್ರಿಯಾತ್ಮಕವಾಗಿ ಕೆಲಸ ಮಾಡಿತು. ನೇಮಕಾತಿ ಜಾಹೀರಾತಿನಲ್ಲಿದ್ದ ಲಿಂಗತಾರತಮ್ಯವನ್ನು ನಿಷೇಧಿಸಬೇಕು, ಉದ್ಯೋಗ ರಂಗದಲ್ಲಿ ಕಂಡುಬರುವ ಎಲ್ಲಾ ರೀತಿಯ ಭೇದಭಾವವನ್ನು ತೊಡೆದುಹಾಕಬೇಕೆಂದು ಈ ಸಮಿತಿಯು ಹೇಳಿತು. ೧೯೬೭ರಲ್ಲಿ ಪ್ರತಿರಾಜ್ಯದಲ್ಲೂ ಇಂತಹ ಸಮಿತಿಯನ್ನು ಸ್ಥಾಪಿಸಲಾಯಿತು. 'ನ್ಯಾಷನಲ್ ಆರ್ಗನೈಜೇಷನ್ ಫಾರ್ ವುಮೆನ್' ಸಂಘಟನೆಯ ಸ್ಥಾಪನೆಗೆ ಇದು ಬೆಂಬಲ ನೀಡಿತು.

ಅಧ್ಯಕ್ಷ ಕೆನಡಿ ಅನೇಕ ಮಹಿಳಾಪರ ಕಾರ್ಯಗಳನ್ನು ಕೈಗೊಂಡರು. ೧೯೬೩ರಲ್ಲಿ 'ಸಮಾನ ವೇತನ ಕಾಯಿದೆ' ಜಾರಿಗೆ ತಂದರು. ೧೯೬೪ರಲ್ಲಿ ಅಧ್ಯಕ್ಷ ಜಾನ್‌ಸನ್ ಅವಧಿಯಲ್ಲಿ ಜಾರಿಗೊಂಡ 'ನಾಗರಿಕ ಹಕ್ಕುಗಳ ಕಾಯಿದೆ'ಯಲ್ಲಿ ಲಿಂಗಾಧಾರಿತ ತಾರತಮ್ಯ ನಿಷೇಧವನ್ನು ಸೇರಿಸಿರಲಿಲ್ಲ; ಮಹಿಳೆಯರ ಪ್ರತಿಭಟನೆಯ ನಂತರ ಅದನ್ನು ಸೇರಿಸಲಾಯಿತು. ಇವುಗಳ ಜೊತೆಗೆ ಈ ಸಮಯದಲ್ಲಿ ಪ್ರಕಟಗೊಂಡ ಎರಡು ಪ್ರಮುಖ ಕೃತಿಗಳು ಮಹಿಳಾ ಚಳುವಳಿಗೆ ಪ್ರೋತ್ಸಾಹ ನೀಡಿದವು: (ಅ) ಬೆಟ್ಟಿ ಫ್ರೈಡನ್ ಅವರ 'ದಿ ಫೆಮಿನೈನ್ ಮಿಸ್ಟಿಕ್, (೧೯೬೩) : ಈ ಗ್ರಂಥದಲ್ಲಿ ಸ್ವ-ಅನುಭವವನ್ನು ಆಧಾರವಾಗಿಟ್ಟುಕೊಂಡು ಮಹಿಳೆಯರ ಪರಿಸ್ಥಿತಿ ಹೇಗಿದೆ, ಅದನ್ನು ಹೇಗೆ ಬದಲಾಯಿಸಬೇಕೆಂದು ಲೇಖಕಿ ವಿವರಿಸಿದರು. ಮಹಿಳೆಯರು ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಬಳಸಿಕೊಳ್ಳಲು ಅನೇಕ ಸಾಮಾಜಿಕ ನಿರ್ಬಂಧಗಳಿವೆ. ಮನೆಗೆಲಸವಲ್ಲದೆ ಹೊರಗೂ ದುಡಿಯಬಲ್ಲರು. ಶ್ರಮದ ಮಾರುಕಟ್ಟೆಯಲ್ಲಿ ತಮ್ಮ ಪ್ರತಿಭೆ ತೋರಬಲ್ಲರು ಎಂದು ಒತ್ತಿಹೇಳಿದರು. (ಆ) ೧೯೬೪ರಲ್ಲಿ ಪ್ರಕಟವಾದ ಆಲಿಸ್ ಎಸ್. ರೋಸಿ ಅವರ 'ಈಕ್ವಾಲಿಟಿ ಬಿಟ್‌ವೀನ್ ದಿ ಸೆಕ್ಸೆಸ್ : ಅನ್ ಇಮ್ಮಾಡೆಸ್ಟ್ ಪ್ರೊಪೋಸಲ್', ಇದರಲ್ಲಿ ಲಿಂಗಸಮಾನತೆ ತರಲು ಕೆಲವು ಬದಲಾವಣೆಗಳನ್ನು ಸೂಚಿಸುತ್ತಾರೆ. ಶಿಶುಕೇಂದ್ರ ಸ್ಥಾಪನೆ, ಅನುಕೂಲಕರವಾದ ವಾಸಸ್ಥಳ, ಅಂದರೆ ಕಾರ್ಖಾನೆ/ಕಛೇರಿ, ಶಾಲೆ ಎಲ್ಲವೂ ಅನುಕೂಲವಾದ ರೀತಿಯಲ್ಲಿ ಇರಬೇಕು, ಮತ್ತು ಮಹಿಳೆಯರು ತಾವಾಗೆ ಎಲ್ಲಾ ಚಟುವಟಿಕೆಗಳಲ್ಲೂ ಭಾಗವಹಿಸಲು ಮುಂದೆ ಬರಬೇಕು, ಸಿಕ್ಕ ಅವಕಾಶಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಬೇಕು ಮುಂತಾದ ಸಲಹೆಗಳಿವೆ. ಈ ಎರಡು ಗ್ರಂಥಗಳು ಮಹಿಳೆಯರನ್ನು ಸ್ವ-ವಿಶ್ಲೇಷಣೆಗೆ ಒಳಪಡಿಸಿ ಬದಲಾವಣೆಯ ಹಾದಿಯಲ್ಲಿ ಮುಂದುವರೆಯಲು ಪ್ರೇರೇಪಿಸಿದವು.

ಎರಡನೇ ಅಲೆಯಲ್ಲೂ ಮಹಿಳಾ ಚಳುವಳಿ ಎರಡು ಗುಂಪುಗಳಲ್ಲಿ ಕೆಲಸ ಮಾಡಿತು. 'ಮಹಿಳಾ ಹಕ್ಕುಗಳ ಗುಂಪು' ಕಾನೂನಿನ ಬದಲಾವಣೆ, ಉದ್ಯೋಗ ನೀತಿ ಮತ್ತು ಶಿಕ್ಷಣಕ್ಕೆ ಕೇಂದ್ರೀಕರಿಸಿದರೆ, 'ಮಹಿಳಾ ವಿಮೋಚನಾ ಗುಂಪು' ಸಾಮಾಜೀಕರಣದಲ್ಲಿ ಬದಲಾವಣೆ, ಮಹಿಳೆಯರ ಬಗ್ಗೆ ಇದ್ದ ಮನೋಭಾವ ಹಾಗೂ ಸ್ತ್ರೀಯರಲ್ಲಿ ಸ್ವಪ್ರತೀಕಗಳಲ್ಲಿ ಬದಲಾವಣೆ, ಒಟ್ಟಿನಲ್ಲಿ ಸಾಮಾಜಿಕ ರಚನೆಯಲ್ಲಿ ಮೂಲಭೂತ ಬದಲಾವಣೆಯನ್ನು ಪ್ರತಿಪಾದಿಸಿತು.

ಮಹಿಳಾ ವಿಮೋಚನಾ ಗುಂಪು ೧೯೬೪ರಲ್ಲಿ ಹುಟ್ಟಿಕೊಂಡ 'ಬ್ಲಾಕ್ ಸಿವಿಲ್ ರೈಟ್ಸ್ ಮೂವ್‌ಮೆಂಟ್'ನ ಒಂದು ಭಾಗವಾಗಿ ಹೊರಬಂದಿತು. ಈ ಸಂಘಟನೆಯಲ್ಲಿ ಇದ್ದ ಕಪ್ಪು ಮತ್ತು ಬಿಳಿ ಮಹಿಳೆಯರು ಚಳುವಳಿಯಲ್ಲಿ ತಮ್ಮ ಸ್ಥಾನ ಮತ್ತು ಅಧಿಕಾರ ಕುರಿತು ಪರಿಶೀಲನೆ ಮಾಡಿಕೊಂಡು ಅಲ್ಲಿ ನಡೆಯುತ್ತಿದ್ದ ವರ್ಣ ಮತ್ತು ಲಿಂಗ ತಾರತಮ್ಯವನ್ನು ಗುರುತಿಸಿದರು. ಅದರಿಂದ ಹೊರಬಂದು ತಮ್ಮದೇ ಗುಂಪನ್ನು ಸ್ಥಾಪಿಸಿದರು.

'ನ್ಯೂ ಲೆಫ್ಟ್' ಎಂಬ ಇನ್ನೊಂದು ಸಂಘಟನೆಯಲ್ಲೂ ಮಹಿಳೆಯರು ಇದೇ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದರು. ಅಲ್ಲಿಂದ ಹೊರಬಂದು ವಿಮೋಚನಾ ಗುಂಪನ್ನು ಸೇರಿದರು. ಯುವತಿಯರೂ ತಮ್ಮದೇ ಗುಂಪನ್ನು ರಚಿಸಿಕೊಂಡರು. ಶುಲಾಮಿತ್ ಫೈರ್‌ಸ್ಟೋನ್ ಅವರು 'ಚಿಕಾಗೋ ವುಮೆನ್ಸ್ ರ್‍ಯಾಡಿಕಲ್ ಆ್ಯಕ್ಷನ್ ಪ್ರಾಜೆಕ್ಟ್' ಎಂಬ ತೀವ್ರಗಾಮಿ ಗುಂಪನ್ನು ಆರಂಭಿಸಿ ತೀವ್ರಗಾಮಿ ಹೋರಾಟ ನಡೆಸಿದರು.

೧೯೬೬ರ ಅಕ್ಟೋಬರ್ ೨೯-೩೦ರಂದು ವಾಷಿಂಗ್ಟನ್‌ನಲ್ಲಿ ಮಹಿಳೆಯರ ಕಾನೂನು ಹಕ್ಕುಗಳನ್ನು ಚರ್ಚಿಸಲು ರಾಷ್ಟ್ರೀಯ ಸಮಾವೇಶವೊಂದನ್ನು ನಡೆಸಲಾಯಿತು. ಇದರಲ್ಲಿ ಸುಮಾರು ೩೦೦ ಜನರು ಭಾಗವಹಿಸಿದ್ದರು. ಈ ಸಮಾವೇಶದಲ್ಲೇ 'ನ್ಯಾಷನಲ್ ಆರ್ಗನೈಜೇಶನ್ ಫಾರ್ ವುಮೆನ್' ಎಂಬ ಸಂಘಟನೆಯನ್ನು ಸ್ಥಾಪಿಸಲಾಯಿತು. ಬೆಟ್ಟಿ ಫ್ರೈಡನ್ ಇದರ ಮೊದಲ ಅಧ್ಯಕ್ಷರಾದರು. ಅಮೆರಿಕಾ ಸಮಾಜದ ಮುಖ್ಯವಾಹಿನಿಯಲ್ಲಿ ಮಹಿಳೆಯರು ಸಂಪೂರ್ಣವಾಗಿ ಭಾಗವಹಿಸುವಂತೆ ಮಾಡಲು ಕಾರ್ಯಗಳನ್ನು ಕೈಗೊಳ್ಳುವುದು ಇದರ ಗುರಿಯಾಗಿತ್ತು.

೧೯೬೮ರಲ್ಲಿ ನಡೆದ ಎರಡು ಸಾರ್ವಜನಿಕ ಘಟನೆಗಳು ಜನರ ಗಮನವನ್ನು ಚಳುವಳಿಯತ್ತ ಸೆಳೆದವು : (ಅ) ಜನವರಿ ತಿಂಗಳಲ್ಲಿ ವಾಷಿಂಗ್ಟನ್ ಡಿ.ಸಿ.ಯಲ್ಲಿ 'ಮಹಿಳೆಯರ ಶಾಂತಿ ಗುಂಪು' ನಡೆಸಿದ ಪ್ರದರ್ಶನದಲ್ಲಿ ಮಹಿಳೆಯರು ಟಾರ್ಚ್‌ಲೈಟ್ ಪೆರೇಡ್ ಮಾಡಿದರು. ತೀವ್ರಗಾಮಿ ಗುಂಪಿನವರು ಮಹಿಳೆಯರಿಗೆ ತುಳಿತದಿಂದ ಹೊರಬರಲು ಕರೆನೀಡುವ ಕರಪತ್ರವನ್ನು ಈ ಸಂದರ್ಭದಲ್ಲಿ ಹಂಚಿದರು; (ಆ) ಸೆಪ್ಟೆಂಬರ್‌ನಲ್ಲಿ ನ್ಯೂಜೆರ್ಸಿಯಲ್ಲಿ ನಡೆದ ಮಿಸ್ ಅಮೆರಿಕಾ ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸಿದರು. ಮಹಿಳೆಯರ ತುಳಿತವನ್ನು ಬಿಂಬಿಸುವ ಚಿಹ್ನೆ/ಸಂಕೇತಗಳನ್ನು ಕಸದ ಬುಟ್ಟಿಗೆ ಹಾಕುವುದರ ಮೂಲಕ ಪ್ರತಿಭಟನೆ ವ್ಯಕ್ತಪಡಿಸಿದರು. ಬೀದಿನಾಟಕಗಳನ್ನು ಪ್ರದರ್ಶಿಸಿದರು. ಈ ಪ್ರತಿಭಟನೆಯು ಮಾಧ್ಯಮದ ಮೂಲಕ ರಾಷ್ಟ್ರಾದ್ಯಂತ ಪ್ರಸಾರಗೊಂಡು ಜನರ ಗಮನ ಸೆಳೆಯಿತು.

ಯಾವುದೇ ಸಾಮಾಜಿಕ ಚಳುವಳಿ ಒಂದು ಐತಿಹಾಸಿಕ ಘಟನೆಯಾಗುವುದಕ್ಕಿಂತ ಅದರ ಗುರಿ, ಸ್ವರೂಪ, ಅನುಸರಿಸಿದ ಯುಕ್ತಿ, ಕಾರ್ಯತಂತ್ರ, ಯಶಸ್ಸು, ವಿಫಲತೆಗಳಿಂದ ಹೆಚ್ಚು ಸಂಕೀರ್ಣವಾಗಿರುತ್ತದೆ. ಅಮೆರಿಕಾದ ಮಹಿಳಾ ಚಳುವಳಿಯ ಗುರಿ, ಕಾರ್ಯತಂತ್ರ, ಯಶಸ್ಸು, ವಿರೋಧಗಳನ್ನು ಗಮನಿಸಿದರೆ ಅದರ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳಬಹುದು.



ಡಾ|| ಎಚ್. ಎಂ. ಹೇಮಲತ
ಮಹಿಳಾ ಅಧ್ಯಯನ ವಿಭಾಗ, ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ

# ವಚನಕಾರರ ಧಾರ್ಮಿಕ ಮತ್ತು ಸಾಮಾಜಿಕ ಚಳುವಳಿ

ಧರ್ಮವೆಂದರೇನು ? ಧರ್ಮದ ವ್ಯಾಖ್ಯೆ ಏನು ? ಅದನ್ನು ಗುರುತಿಸುವುದು ಹೇಗೆ ? ಧರ್ಮವನ್ನು ಅರಿಯುವ ಮಾನದಂಡವೇನು ? – ಹೀಗೆ ಅನೇಕ ಪ್ರಶ್ನೆಗಳು ಏಳುತ್ತವೆ. ಧರ್ಮ ಮುಖ್ಯವಾಗಿ ಮಾನವನ ಶಾರೀರಿಕ ಮತ್ತು ಮಾನಸಿಕ ಬೆಳವಣಿಗೆಗೆ ಸಹಾಯ ಮಾಡಬೇಕು. ಆರ್ಥಿಕ ಉನ್ನತಿಗೆ ಪೂರಕವಾಗಿರಬೇಕು. ಶಿಸ್ತು ಮತ್ತು ಸಂಘಟನೆಗೆ ನೆರವಾಗಬೇಕು. ಜನ್ಮದಿಂದ ಮೇಲು-ಕೀಳು ಎಂಬ ತಾರತಮ್ಯವನ್ನು ಬರಗೊಡಬಾರದು. ಅಸಮಾನತೆ, ಅನ್ಯಾಯ, ಅಸ್ಪೃಶ್ಯತೆಗಳಿಗೆ ಆಸ್ಪದವಿರಬಾರದು. ಮೂಢನಂಬಿಕೆಗಳು, ಅರ್ಥಹೀನ ಸಂಪ್ರದಾಯಗಳು ಜನಮನದಿಂದ ತೊಲಗಬೇಕು. ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ ಬೆಳೆದುಬರಬೇಕು. ಸ್ವರ್ಗ-ನರಕವೆಂಬ ಕಾಲ್ಪನಿಕ ಸೃಷ್ಟಿಗೆ ತೆರೆ ಬೀಳಬೇಕು. ನೆಲ, ನೀರು, ಗಾಳಿ, ಬೆಳಕು, ಬೆಂಕಿ, ಮಳೆ ಹಾಗೂ ಬೆಳೆ ಮೊದಲಾದ ನಿಸರ್ಗದ ಸದಾನುಕೂಲಕ್ಕೆ ಪ್ರೀತಿಗೆ ಚ್ಯುತಿ ಬರಬಾರದು. ಅವು ಅನಿತ್ಯ ಮಾಯೆ ಎನ್ನುವ ಭ್ರಮೆ ದೂರಾಗಬೇಕು. ಕಾಡುಗಳನ್ನು ಪ್ರಾಣಿಗಳನ್ನು ಪಶುಗಳನ್ನು ಅತ್ಯಂತ ಪ್ರೀತಿಯಿಂದ ಸಲಹಬೇಕು. ಅವು ದುಡಿಮೆಗೆ ಪರಿಸರದ ಕಾಳಜಿಗೆ ಆಧಾರವಾಗಬೇಕು. ನಿಸರ್ಗದ ಮತ್ತು ಪರಿಸರದ ಪರಿಸ್ಥಿತಿಗೆ ಹೊಂದಿಕೊಂಡು ಅದರ ಹೆಗಲಿಗೆ ಹೆಗಲುಕೊಟ್ಟು ದುಡಿಯಬೇಕು. ಸಹಜೀವನ ಸಹಬಾಳ್ವೆಗಳೇ ಬದುಕಿಗೆ ಆಧಾರವಾಗಬೇಕು. ಈ ಭೂಮಿಯನ್ನೇ ಸ್ವರ್ಗವನ್ನಾಗಿ ಪರಿವರ್ತಿಸಬೇಕು. ಇದನ್ನೇ ಕೈಲಾಸವನ್ನಾಗಿ ಮಾರ್ಪಡಿಸುವ ಕಲೆ ಕರಗತವಾಗಬೇಕು. ತನ್ನ ಹೊಟ್ಟೆಯ ಪೋಷಣೆಗೆ ಸಮಾಜದ ಅಭಿವೃದ್ಧಿಗೆ ಹಾಗೂ ಪರಿಸರ ರಕ್ಷಣೆಗೆ ಈ ನಿರಂತರ ಹೋರಾಟದ ದುಡಿಮೆಯೇ ಧರ್ಮ.




ಇದೇ ಮಾತನ್ನು ಚನ್ನಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೀಗೆ ಹೇಳುತ್ತಾರೆ :

*ಕೃಷಿ ಕೃತ್ಯ ಆವ ಕಾಯಕದಿಂದಾದಡೇನು ?*
*ತನು ಮನ ಬಳಲಿಸಿ ಗಳಿಸಿ ತಂದು*
*ಗುರುಲಿಂಗ ಜಂಗಮಕ್ಕೆ ವೆಚ್ಚಿಸಿ*
*ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯೆನಗೆ*
*ಅದೆಂತೆಂದೊಡೆ ಆತನ ತನು ಶುದ್ಧ ಆತನ ಮನ ಶುದ್ಧ*
*ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು.*

ಮನುಷ್ಯನ ಕಾಯಕ ಯಾವುದೇ ಇರಲಿ, ಇಂಥದ್ದೇ ಕಾಯಕ ಇರಬೇಕೆಂಬ ನಿಯಮವೇನೂ ಇಲ್ಲ. ಕಾಯಕ ಜೀವಿಯ ನಡೆ ಶುದ್ಧ, ನುಡಿ ಶುದ್ಧ, ಮನೆ ಶುದ್ಧ ಹಾಗೂ ಮನವೂ ಶುದ್ಧವಾಗಿರುತ್ತದೆ. ಇಂದಿಗೆ ನಾಳೆಗೆ ಎನ್ನದೆ, ಅಂದಿನ ಕಾಯಕ ದಾಸೋಹಗಳು ಸದಾಕಾಲ ಹರಿಯುವ ನದಿಗಳ ಹಾಗೆ ವಚನಕಾರರ ಬದುಕು, ವೈಯಕ್ತಿಕ ಬದುಕಿನ ಗುಟ್ಟನ್ನು ಸಾಮಾಜಿಕ ಜೀವನದ ನೆಲೆಗಟ್ಟನ್ನು ತಿಳಿಸುವ ದಿವ್ಯ ಮಂತ್ರ ತಂತ್ರಗಳು ಕಾಯಕದಲ್ಲಿಯೇ ಅಡಕವಾಗಿವೆ ಎಂಬುದನ್ನು ನಿರ್ವಿವಾದವಾಗಿ ಹೇಳಬೇಕು.

ಧರ್ಮವು ನಿಜವಾಗಿಯೂ ಮನುಷ್ಯನಿಗೂ ಅವನ ದುಡಿಮೆಗೂ ಸಂಬಂಧಿಸಿದ್ದು. ಅಲ್ಲದೇ, ವ್ಯಕ್ತಿಯಿಂದ ವ್ಯಕ್ತಿಗೂ, ವ್ಯಕ್ತಿಯಿಂದ ಸಮಾಜಕ್ಕೂ ಸಂಬಂಧಿಸಿದ್ದು. ಆದರೆ ಯಾರಿಗೂ ಕಾಣದ, ಯಾರ ಅನುಭವಕ್ಕೂ ಬಾರದ ದೇವರಿಗೂ ಧರ್ಮಕ್ಕೂ ಯಾವುದೇ ಸಂಬಂಧವಿಲ್ಲ ಎಂದು ಹೇಳಲು ಯಾವ ಪಂಡಿತನ ಅವಶ್ಯಕತೆಯಿಲ್ಲ. ವಚನಕಾರರು ಧಾರ್ಮಿಕ ಜೀವನವಿರಲಿ, ಇಲ್ಲವೇ ಸಾಮಾಜಿಕ ಜೀವನವಿರಲಿ ಈ ಎರಡೂ ನಡವಳಿಕೆಯ ತತ್ವಜ್ಞಾನಗಳನ್ನು ಮೊದಲು ತಮ್ಮ ಜೀವನದಲ್ಲಿ ಆಚರಣೆಗೆ ತಂದು ಸತ್ಯಾಸತ್ಯತೆಗಳನ್ನು ಮನಗಂಡು ನೈತಿಕ ನೆಲೆಗಟ್ಟಿನ ಮೇಲೆ ನಿಂತು ತಮ್ಮ ತತ್ವಜ್ಞಾನಗಳನ್ನು ಪ್ರತಿಪಾದಿಸಿದರು. ಪುರೋಹಿತರಂತೆ ಅವರು ''ಶಾಸ್ತ್ರಕ್ಕೊಂದು ಬಟ್ಟೆ, ತಮಗೊಂದು ಬಟ್ಟೆ'' ಎನ್ನುವಂತೆ ನಡೆದುಕೊಳ್ಳಲಿಲ್ಲ. ಮಾಡಿದ್ದನ್ನೇ ಹೇಳಿದರು, ಹೇಳಿದ್ದನ್ನೇ ಮಾಡಿದರು. ಚನ್ನಬಸವಣ್ಣನವರ ವಚನವೊಂದು ಹೀಗಿದೆ :

*ಕ್ರಿಯೆಯಿಲ್ಲದ ಭಕ್ತ ಮನುಜ*
*ಕ್ರಿಯೆಯಿಲ್ಲದ ಮಹೇಶ ರಾಕ್ಷಸ*
*ಕ್ರಿಯೆಯಿಲ್ಲದ ಪ್ರಸಾದಿ ಯವನ*
*ಕ್ರಿಯೆಯಿಲ್ಲದ ಪ್ರಾಣಲಿಂಗಿ ಭವಿ*
*ಕ್ರಿಯೆಯಿಲ್ಲದ ಶರಣ ಅಜ್ಞಾನಿ*
*ಕ್ರಿಯೆಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ*
*ಕೂಡಲ ಚನ್ನ ಸಂಗಮ ದೇವಾ*

ಹೀಗೆ ವಚನಕಾರರು ಕಾಯಕದ ಮಹತ್ವವನ್ನು ಎತ್ತಿಹಿಡಿಯುತ್ತಾರೆ. ಕಾಯಕದಿಂದ ಮನಸ್ಸಿನ ಏಕಾಗ್ರತೆ, ಬುದ್ಧಿಯ ಪರಿಪಕ್ವತೆ, ಅಲ್ಲದೆ ಸುಜ್ಞಾನ ಇವು ಮೂರು ಏಕಕಾಲದಲ್ಲಿ ದೊರೆಯುತ್ತವೆ. ಕ್ರಿಯೆಯಿಲ್ಲದೆ ಜ್ಞಾನಕ್ಕೆ ಅವಕಾಶವೇ ಇಲ್ಲ, ಜ್ಞಾನವಿಲ್ಲದೆ ಕ್ರಿಯೆ ನಡೆಯುವುದೇ ಇಲ್ಲ. ಒಂದು ವೇಳೆ ನಡೆದರೂ ಅದು ಬಹಳ ಜಡವಾಗಿ ಜಂಜಡವಾಗಿ ಪರಿಣಮಿಸುತ್ತದೆ. ಹಾದಿ ನಡೆಯುವ ಹುಡುಗನಿಗೆ ಕಣ್ಣು ಬೇಕು, ಕಾಲು ಬೇಕು, ಅಂದಾಗ ಅವನ ಪಯಣ ಸುಗಮವಾಗುತ್ತದೆ. ಅದರಂತೆ ಮನುಷ್ಯನ ಬದುಕಿಗೆ ಕ್ರಿಯೆ ಮತ್ತು ಜ್ಞಾನ ಎರಡೂ ಬೇಕು. ಅವೆರಡೂ ಅವನ ಜೀವನಾವಶ್ಯಕ ಆಧಾರಗಳು. ಅಂತೆಯೇ ಚನ್ನಬಸವಣ್ಣನವರು ಕಾಯಕವಿಲ್ಲದ ಮನುಷ್ಯ ಮನುಷ್ಯನೇ ಅಲ್ಲವೆಂದು ಅಭಿಪ್ರಾಯಪಡುತ್ತಾರೆ.

ಅವರದೇ ಇನ್ನೊಂದು ವಚನ ಹೀಗಿದೆ :

*ತನು ಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿ*
*ಗುರುಲಿಂಗ ಜಂಗಮಕ್ಕೆ ವೆಚ್ಚಿಸಿ ದಾಸೋಹವ ಮಾಡಿ*
*ಭಕ್ತನಾದೆನೆಂಬವನ ತೋರದಿರಯ್ಯಾ*
*ಅದೇಕೆಂದರೆ ಅವ ಪರಧನ ಚೋರ ಅವ ಪಾಪಿ ಕೋಪಿ ಪರಿಭ್ರಷ್ಟ*
*ಅವಂಗೆ ವಿಚಾರಿಸದೆ ಉಪದೇಶವ ಕೊಟ್ಟ ಗುರುವಿಂಗೆ ರೌರವನರಕ*
*ಅವನ ಕಾಯಕವ ವಿಚಾರಿಸದೆ ಅವನ ಮನೆಯ ಹೊಕ್ಕು*
*ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ*
*ಇಂತಿವರ ಬದುಕು ಹುಲಿ ಕಪಿಲೆಯ ತಿಂದು ಮಿಕ್ಕುದ*
*ನರಿ ತಿಂಬಂತೆ ಕಾಣಾ ಕೂಡಲ ಚನ್ನ ಸಂಗಮ ದೇವಾ.*

ಕಷ್ಟಪಟ್ಟು ದುಡಿಯದೆ ಕಡ ಬಡ್ಡಿಯ ವ್ಯವಹಾರದಲ್ಲಿ ತೊಡಗಿ, ಮೋಸ ವಂಚನೆಯಿಂದ ಧನವ ಗಳಿಸಿ, ಜನರನ್ನು ಹೆದರಿಸಿ ಬೆದರಿಸಿ, ಅನ್ಯಾಯ, ಅತ್ಯಾಚಾರ, ಅನಾಚಾರದಿಂದ ಹಣಕೂಡಿಸಿ ದಾಸೋಹವ ಮಾಡಿ ದೊಡ್ಡ ಭಕ್ತನೆಂದೂ ಪುಣ್ಯವಂತನೆಂದೂ ಕರೆಸಿಕೊಳ್ಳುವ ಶ್ರೀಮಂತರನ್ನು, ಇಂದಿನ ಶ್ರೀಮಂತ ರಾಜಕಾರಣಿಗಳನ್ನು ಕುರಿತು ಈ ಸಾಲುಗಳನ್ನು ಹೇಳಿದಂತಿದೆ. ದುಡಿಮೆಯಿಲ್ಲದ ಧರ್ಮವನ್ನು, ಲಿಂಗಪೂಜೆಯನ್ನು, ಜಂಗಮ ದಾಸೋಹವನ್ನು ಸಾರಾಸಗಟ ತಿರಸ್ಕರಿಸುತ್ತಾನೆ. ದುಡಿಮೆಯೇ ಜ್ಞಾನ ದುಡಿಮೆಯೇ ಧರ್ಮ.

''ಮನೆ ನೋಡಾ ಬಡವರು ಮನ ನೋಡಾ ಘನ'' ಎಂಬ ವಚನದಂತೆ ಧಾರ್ಮಿಕ ಚಿಂತನ, ಮತ್ತು ಸಾಮಾಜಿಕ ಚಿಂತನ ಮನುಕುಲದ ಸಮಸ್ಯೆಗಳಿಗೆ ಸಮಾಧಾನವನ್ನು ಪರಿಹಾರವನ್ನು ಕಂಡುಕೊಳ್ಳುವಲ್ಲಿ ಯಶಸ್ಸನ್ನು ಪಡೆಯುತ್ತಿದ್ದ ವಚನಕಾರರ ವಚನದಲ್ಲಿ ಮನಸ್ಸಿನ ಘನತೆ ಎದ್ದುಕಾಣುತ್ತದೆ. ಈ ಎರಡೂ ಚಿಂತನಗಳು ಒಂದೇ ನಾಣ್ಯದ ಎರಡು ಮೈಗಳಿದ್ದಂತೆ. ನಿಜ ಹೇಳಬೇಕೆಂದರೆ ವ್ಯಕ್ತಿಯ ಕಾಯಕತತ್ವ ಮತ್ತು ದಾಸೋಹದ ಪ್ರಕ್ರಿಯೆ ಇವೇ ಆ ಎರಡೂ ಚಿಂತನಗಳ ಬೆನ್ನೆಲುಬು. ಪುರೋಹಿತರು ಬ್ರಹ್ಮ ಸತ್ಯ ಜಗತ್ತು ಮಿಥ್ಯ ಎಂದು ಹೇಳಿದರು. ಆದರೆ ವಚನಕಾರರು ಜಗತ್ತು ಸತ್ಯ, ಬ್ರಹ್ಮವೇ ಭ್ರಮೆ ಎಂದು ಹೇಳಿ ಜಗತ್ತು, ಮನುಷ್ಯ, ಅವನ ಸಾಧನೆ, ಸಿದ್ಧಿಗಳೆಲ್ಲವೂ ಸತ್ಯವೇ ಆಗಿವೆ; ಆದರೆ ಮನುಷ್ಯನ ಅನುಭವಕ್ಕೆ ಬಾರದ್ದು ಯಾವುದಿದೆಯೋ ಅದು ಮಿಥ್ಯ, ಸುಳ್ಳು ಎನ್ನುತ್ತಾರೆ. ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳ ಸಮತೂಕಕ್ಕೆ ಹೀಗೆ ಹೇಳುತ್ತಾರೆ.

*ಇನ್ನೊಬ್ಬರ ಕೈಯ ತುತ್ತು ಕಸಿದು ತಿನ್ನುವುದಕ್ಕಿಂತ*
*ಹಸಿದಿರುವುದೇ ಹಸನವಯ್ಯ*
*ಇನ್ನೊಬ್ಬನ ಹೆಸರು ಕೆಡಿಸಿ ಹೆಸರಾಗುವುದಕ್ಕಿಂತ*
*ಹೆಸರಿಲ್ಲದಿರುವುದೇ ಸಸಿನವಯ್ಯಾ*
*ಇನ್ನೊಬ್ಬನ ತುಳಿದು ಮುಂದೆ ಹೋಗುವುದಕ್ಕಿಂತ*
*ಹಿಂದೆ ಉಳಿಯುವುದೇ ಹಸನವಯ್ಯಾ*

ಹೇಗಾದರೂ ಇರು, ಎಂತಾದರೂ ಇರು ಮೊದಲು ಮಾನವನಾಗು ಎಂದು ಕವಿ ಕಾವ್ಯಾನಂದರು ಹೇಳುವಂತೆ, ವಚನಕಾರರ ಗುರಿ, ಮಾನವೀಯತೆಯ ಕಡೆಗೆ, ಲೋಕ ಕಲ್ಯಾಣದ ಕಡೆಗೆ ಓತಪ್ರೋತವಾಗಿ ಹರಿದದ್ದು ಎದ್ದುಕಾಣುತ್ತದೆ. ಅವರಿಗೆ ಜನಮತ ದೊರೆಯಬೇಕೆನ್ನುವುದಕ್ಕಿಂತ ಜನಹಿತವನ್ನೇ ಸಾಧಿಸಬೇಕೆನ್ನುವ ಹಟವೇ ಮುಖ್ಯವಾಗಿತ್ತು.

**ಕೆ. ಡಿ. ಮುತ್ತೂರ**
ಮಲ್ಲಮ್ಮ ನಗರ, ಕಲ್ಯಾಣ ಕುಂಜ, ಮುಧೋಳ - ೫೮೭ ೩೧೩

# "ಅಮ್ಮನೋ ಅಥವಾ ಕಾಲೇಜು ಹುಡುಗಿಯೊ?"






ಹೊಸ ಸಂತೂರ್, ಅರಿಶಿಣ ಹಾಗೂ ಚಂದನದ ಪೋಷಣೆಯುಕ್ತ.




ಹೊಸ ಸಂತೂರ್ ವೈಟ್, ಚಂದನ ಹಾಗೂ ಬಾದಾಮಿ ಹಾಲಿನ ಮ್ಯಾಶ್ಚರೈಸಿಂಗ್ ಗುಣಯುಕ್ತ.

ಈಗ ಎಲ್ಲರೂ ಪಡೆಯಬಲ್ಲರು ನೋಡುವವರನ್ನು ಚಕಿತಗೊಳಿಸುವಂತಹ ತ್ವಚೆ. ಪ್ರಸ್ತುತವಿದೆ ಸಂತೂರ್, ಎರಡು ಆಕರ್ಷಕ ಹೊಸ ರೂಪಗಳಲ್ಲಿ. ನಿಮ್ಮ ತ್ವಚೆಯನ್ನು ವರ್ಷಾನುವರ್ಷ ತಾರುಣ್ಯಪೂರ್ಣವಾಗಿ ಇರಿಸುವ ರಹಸ್ಯವನ್ನು ಕಂಡುಕೊಳ್ಳಿ ಮತ್ತು ಎಲ್ಲರೂ ಉದ್ಗರಿಸಲಿ, ನಿಜವಾದ ಸ್ಟಾರ್ ಎಂದರೆ ಈ ಸಂತೂರ್ ಮಮ್ಮಿ.



## ಸಂತೂರ್

**ಈಗ ಎರಡು ಹೊಸ ರೂಪಗಳಲ್ಲಿ!**

FCB♦ULKA/750145


Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna
... in whole or in part without permission is prohibited.

**HOSATHU** Kannada Monthly / May 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.






## ನಿಮ್ಮ ವ್ಯಕ್ತಿ ವಿಕಸನಕ್ಕೆ ನವಕರ್ನಾಟಕ ಪ್ರಕಾಶನದ ವಿನೂತನ ಕೊಡುಗೆ

ವ್ಯಕ್ತಿ ವಿಕಸನ ಮಾಲೆ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

ಆಯಾಯ ಕ್ಷೇತ್ರಗಳಲ್ಲಿ ಅನುಭವಿಗಳಾದ ಸಮರ್ಥ ಲೇಖಕರು ರಚಿಸಿರುವ 2ನೆಯ ಕಂತಿನ 25 ಅತ್ಯುತ್ತಮ ಕೃತಿಗಳು ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ. ತಲಾ ರೂ. 40 ಬೆಲೆಯ ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು.

ಇಂದೇ ಬೇಡಿಕೆ ಸಲ್ಲಿಸಿ























'ಹೊಸತು' ಮೂರು ವರ್ಷದ ಚಂದಾದಾರರಿಗೆ ರಿಯಾಯಿತಿ ಬೆಲೆ ರೂ. 800 + ಅಂಚೆವೆಚ್ಚ ರೂ. 50




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
✆ : 22203580, 30578022 e-mail: navakarnataka@vsnl.com web : www.navakarnatakabooks.com